# ಕರಾವಳಿ ಮಹಿಳಾ ಕಥಾಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಪರಿಷ್ಕೃತ ಮಹಾಪ್ರಬಂಧ)

ಸಂಶೋಧಕರು

ಶ್ರೀಮತಿ ವಿನೋದ

ನೋಂದಣಿ ಸಂಖ್ಯೆ : KTSMKS- 00200

ಮಾರ್ಗದರ್ಶಕರು

ಡಾ|| ವರದರಾಜ ಚಂದ್ರಗಿರಿ

ಪ್ರಾಂಶುಪಾಲರು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಬೆಟ್ಟಂಪಾಡಿ, ಪುತ್ತೂರು, ದ.ಕ.



ಭಾಷಾನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ. ೫೮೩ ೨೭೬

ಮಾನ್ಯತಾ ಕೇಂದ್ರ

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ

ಬಲ್ಮಠ, ಮಂಗಳೂರು

೨೦೧೯

# ಕರಾವಳಿ ಮಹಿಳಾ ಕಥಾಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು

(ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಪರಿಷ್ಕೃತ ಮಹಾಪ್ರಬಂಧ)

ಸಂಶೋಧಕರು

**ಶ್ರೀಮತಿ ವಿನೋದ**

ನೋಂದಣಿ ಸಂಖ್ಯೆ : **KTSMKS- 00200**

ಮಾರ್ಗದರ್ಶಕರು

**ಡಾ॥ ವರದರಾಜ ಚಂದ್ರಗಿರಿ**

ಪ್ರಾಂಶುಪಾಲರು

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಬೆಟ್ಟಂಪಾಡಿ, ಪುತ್ತೂರು, ದ.ಕ.



ಭಾಷಾನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

ಮಾನ್ಯತಾ ಕೇಂದ್ರ

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ

ಬಲ್ಮಠ, ಮಂಗಳೂರು

೨೦೧೯

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ವಿನೋದರವರು ನನ್ನ ಮಾರ್ಗದರ್ಶನದಲ್ಲಿ **"ಕರಾವಳಿ ಮಹಿಳಾ ಕಥಾಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಭಾಷಾನಿಕಾಯ (ಸಾಹಿತ್ಯ ಅಧ್ಯಯನ) ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು ಈ ಮೊದಲು ಅಭ್ಯರ್ಥಿಯು ಯಾವುದೇ ಪದವಿಗಾಗಿ ಇಲ್ಲವೇ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 22-6-2019
ಸ್ಥಳ : ಮಂಗಳೂರು

ಮಾರ್ಗದರ್ಶಕರು
**ಡಾ. ವರದರಾಜ ಚಂದ್ರಗಿರಿ**
ಪ್ರಾಂಶುಪಾಲರು
ಸರ್ಕಾರಿ ಪ್ರಥಮದರ್ಜೆ ಕಾಲೇಜು
ಬೆಟ್ಟಂಪಾಡಿ, ಪುತ್ತೂರು, ದ.ಕ.

# <u>ಸಂಶೋಧಕರ ಘೋಷಣ ಪತ್ರ</u>

ಡಾ. ವರದರಾಜ ಚಂದ್ರಗಿರಿ ಅವರ ಮಾರ್ಗದರ್ಶನದಲ್ಲಿ **"ಕರಾವಳಿ ಮಹಿಳಾ ಕಥಾಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು"** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯದ ಭಾಷಾನಿಕಾಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 22-6-2019

ಸ್ಥಳ : ಮಂಗಳೂರು

ಸಂಶೋಧಕರು

**ಶ್ರೀಮತಿ ವಿನೋದ**

# ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ವೈಧಾನಿಕತೆ

ಪ್ರಸ್ತಾವನೆ

೧.೧ ಅಧ್ಯಯನದ ಸಮಸ್ಯೀಕರಣ

೧.೨ ಅಧ್ಯಯನದ ಉದ್ದೇಶ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನದ ವಿಧಾನ

೧.೫ ಈವರೆಗಿನ ಅಧ್ಯಯನದ ಸಮೀಕ್ಷೆ

## ಪ್ರಸ್ತಾವನೆ

ನಮ್ಮ ಪುರಾಣಗಳೆಲ್ಲ ಪುರುಷ ದೃಷ್ಟಿಕೋನದಿಂದ ರಚನೆಯಾದವುಗಳು. ಅದರಲ್ಲಿರುವ ಮಹಿಳೆಯರು ಪುರುಷ ಧೋರಣೆಯ ಮಾದರಿಗಳು. ಮಹಿಳೆಯ ಅಭಿವ್ಯಕ್ತಿಗೆ ಅವಕಾಶವೇ ಇಲ್ಲದ ಕಾಲಘಟ್ಟದಲ್ಲಿ ಅವು ರಚನೆಗೊಂಡಿರುವುದರಿಂದ ಮಹಿಳೆಗೆ ಯಾವ ಆಯ್ಕೆಯೂ ಇರಲಿಲ್ಲ. ರಾಮಾಯಣ, ಮಹಾಭಾರತ, ಪುರಾಣಗಳು ಭಾರತೀಯರಿಗೆ ಕೇವಲ ಕತೆಗಳಲ್ಲ. ಅಲ್ಲಿ ಬರುವ ಘಟನೆಗಳು, ಪಾತ್ರಗಳು ಬದುಕಿಗೆ ಮಾದರಿಗಳು ಹಾಗೂ ಬದುಕಿನ ನಿಯಂತ್ರಕಗಳು. ಸೀತೆ, ಸಾವಿತ್ರಿ, ಅಹಲ್ಯೆ, ಶಕುಂತಲೆಯರ ಶೀಲ ಪಾತಿವ್ರತ್ಯ, ಸಹನೆ ಮುಂತಾದ ಗುಣಗಳಿಗೆ ಸ್ತ್ರೀ ಪ್ರತೀಕಗಳೆನಿಸಿ, ಹಿಂದಿನಿಂದಲೂ ಸಮಾಜ ಒಪ್ಪಿಕೊಂಡು ಬಂದಿತ್ತು. ಈ ಮಾದರಿಯ ಮಹಿಳೆಯರ ಬದುಕನ್ನು ಇಕ್ಕಟ್ಟಿಗೆ ತಳ್ಳುತ್ತಿವೆ ಎನ್ನುವುದನ್ನು ಪ್ರಧಾನ ವ್ಯವಸ್ಥೆ ಕಡೆಗಣಿಸಿತ್ತು. ಮಾಧವಿ, ದಮಯಂತಿಯರೂ ಸೇರಿದಂತೆ ಇವರೆಲ್ಲ ತಮಗಾದ ಅನ್ಯಾಯಕ್ಕೆ ದನಿಯೆತ್ತದೆ ಎಲ್ಲವನ್ನೂ ಬಾಯಿ ಮುಚ್ಚಿ ಸಹಿಸಿದ್ದು ಸ್ತ್ರೀ ಕುಲಕ್ಕೆ ಶಾಪವಾಗಿದೆ. ಮಹಿಳಾ ಸಾಹಿತ್ಯವು ಪುರಾಣ ಪ್ರತೀಕಗಳನ್ನು ಪ್ರಶ್ನಿಸುತ್ತ ಭಂಜನೆ ಮಾಡುತ್ತ, ಅವುಗಳನ್ನು ಪುನರ್ ರಚಿಸಿದೆ. ದ್ರೌಪದಿ, ಕುಂತಿ, ಅಂಬೆಯರು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪ್ರಯತ್ನಿಸಿರುವುದು ಸ್ವಾಭಿಮಾನದ ಸಂಕೇತವೆನಿಸಿ ಮೆಚ್ಚಿಗೆಗೆ ಪಾತ್ರರಾಗಿದ್ದಾರೆ. ಪಿತೃ ಪ್ರಧಾನತೆಯ ಸ್ತ್ರೀ ಮಾದರಿಗಳನ್ನು ನಿರಾಕರಿಸಿ ಹೊಸ ಮಾದರಿಗಳನ್ನು ಸೃಷ್ಟಿಸಲಾಗಿದೆ. ಪುರುಷ ನಿಷ್ಠೆಗೆ ನಿರೀಕ್ಷೆಗೆ ಭಿನ್ನವಾದ ಮಾದರಿಗಳ ಹುಡುಕಾಟದಲ್ಲಿ ಪುರುಷ ದೃಷ್ಟಿ ಯಾವುದನ್ನು ಪಕ್ಕಕ್ಕೆ ತಳ್ಳಿತೋ ಅದನ್ನು ವಿಭಿನ್ನ ನೆಲೆಯಿಂದ ಗ್ರಹಿಸಿ ಅರ್ಥೈಸಿ ಹೊಸ ವ್ಯಾಖ್ಯಾನ ಬರೆಯಲು ಸೃಜನ ಶೀಲತೆಯನ್ನು ಮಾಧ್ಯಮವಾಗಿ ಬಳಸಲಾಗಿದೆ.

'ಸ್ತ್ರೀ ರೂಪಮೆ ರೂಪಂ. ಶೃಂಗಾರಮೆ ರಸಂ' ಈ ಮಾತನ್ನು ಒಂದು ಸಿದ್ಧಾಂತದಂತೆ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರತಿಪಾದಿಸಿದ್ದನ್ನು ಕಾಣುತ್ತೇವೆ. ಸಾಹಿತ್ಯವೆಂಬ ಕುದುರೆಗೆ ಧರ್ಮವು ಚಾಟಿಯೇಟಿನಂತೆ ಪ್ರವರ್ತಿಸಿದ್ದು ಸ್ಪಷ್ಟವಾಗುತ್ತದೆ.

ಪುರಾಣ ಪ್ರತಿಮೆಗಳನ್ನು ಒಡೆದು ಪುನಃ ಸೃಷ್ಟಿಸುವ ಕಾಯಕ, ಕಾದಂಬರಿ, ಕಾವ್ಯ, ನಾಟಕ, ಲೇಖನ ಭಾಷಣಗಳ ಮೂಲಕ ಪರಿಚಯವಾಗತೊಡಗಿತು. ಎಚ್. ವಿ. ಸಾವಿತ್ರಮ್ಮನವರು ರಾಮಾಯಣವನ್ನು ಪ್ರಸ್ತುತ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯಗಳನ್ನು ಬಯಲಿಗೆಳೆಯುವ ಮೂಲಕ ಹೊಸ ರೂಪ ಕೊಟ್ಟರು.

ಹಿರಿಯ ಸಾಹಿತಿಗಳು, ವಿಮರ್ಶಕರು ಅವುಗಳನ್ನು ಸ್ತ್ರೀ ಸಾಹಿತ್ಯವೆಂದು ಕಡೆಗಣಿಸುವುದು ಕಡಿಮೆಯಾಗಲಿಲ್ಲ. ಆದರೆ ನಿಜವಾದ ಕಾವ್ಯ ಪ್ರತಿಭೆಗಳು ಯಾರ ಅಪ್ಪಣೆಯನ್ನೂ ಕಾಯುತ್ತಾ ಕೂರುವುದಿಲ್ಲ. ಕೇಳುವ, ನೋಡುವ ಮಿಡಿಯುವ ಹೃದಯವೊಂದಿದ್ದರೆ ಪುರುಷನಂತೆ ಸ್ತ್ರೀಯೂ ತನ್ನ ಪ್ರತಿಭೆಯನ್ನು ಪ್ರಕಟಿಸಬಲ್ಲಳು ಎಂಬುದಕ್ಕೆ ಭಾರತೀಯ ಸಾಹಿತ್ಯದಲ್ಲಿ ಅಷ್ಟೇಕೆ ಕನ್ನಡ ಸಾಹಿತ್ಯದಲ್ಲೂ ಸಾಕ್ಷಿ ಇದೆ. ಜೈವಿಕ ಭಿನ್ನತೆಯಿಂದಾಗಿ ಹೆಣ್ಣು ಎದುರಿಸಬೇಕಾದ ಸವಾಲುಗಳು ಅನಾದಿಕಾಲದಿಂದ ಇಂದಿನವರೆಗೂ ಹಾಗೆಯೇ ಉಳಿದುಕೊಂಡು ಬಂದಿದೆ.

ಜೈನ, ಬೌದ್ಧ, ವೀರಶೈವ ಮತಗಳು ಭಾರತೀಯ ಸಂಸ್ಕೃತಿ ವೃಕ್ಷದ ಬೇರೆ ಬೇರೆ ಟಿಸಿಲುಗಳು. ಆದರೆ ಕ್ರೈಸ್ತ, ಇಸ್ಲಾಂ ಮತಗಳು ಹಾಗಲ್ಲ. ಹದಿನಾರನೇ ಶತಮಾನದ ಪ್ರಾರಂಭ ಕಾಲದಲ್ಲಿ ಪೋರ್ಚುಗೀಸ್ ಮತ್ತು ಜರ್ಮನ್ ಪಾದ್ರಿಗಳಿಂದ ತುಳುನಾಡಿನಲ್ಲಿ ಕ್ರೈಸ್ತ ಮತದ ಪ್ರಚಾರ ಭರದಿಂದ ಸಾಗಿತು. ನಮ್ಮ ಸಂಸ್ಕೃತಿಗೆ ಹೊಸ ಆಯಾಮವು ದೊರೆತುದಲ್ಲದೆ, ಸಂಕ್ರಮಣ ಯುಗವೂ ಪ್ರಾರಂಭವಾಯಿತು. ಆ ಕಾಲದ ಪಾಶ್ಚಾತ್ಯ ದೇಶಗಳ ಸ್ತ್ರೀಯರ ಸ್ಥಾನಮಾನಗಳಿಗಿಂತ ಈ ತುಳುನಾಡಿನ ಸ್ತ್ರೀಯರ ಸ್ಥಾನಮಾನಗಳು ಎಷ್ಟೋ ಎತ್ತರದಲ್ಲಿವೆ ಎಂಬುದನ್ನು ತಿಳಿಯಲು ತಡವಾಗಲಿಲ್ಲ.

ಈ ನಾಡಿನ ಮಹಿಳೆ ನಡೆದು ಬಂದ ದಾರಿಯ ಕಡೆಗೊಮ್ಮೆ ಹಿಂದಿರುಗಿ ನೋಡಿದಾಗ ಅಲ್ಲೊಂದು ಇಲ್ಲೊಂದು ಕೊರಕಲು ಕಂದಕಗಳು, ಹಳ್ಳದಿಣ್ಣೆಗಳು, ಕಲ್ಲು ಮುಳ್ಳುಗಳು ಗೋಚರಿಸುತ್ತವೆ. ಇದು ಪ್ರಪಂಚದ ಒಟ್ಟು ಸ್ತ್ರೀಯರ ಮುನ್ನಡೆಯಲ್ಲೂ ಕಂಡುಬರುವಂತಹದ್ದೇ ಆಗಿದೆ. ನಮ್ಮ ನಾಡಿನ ಮಹಿಳೆಯರಲ್ಲಿ ಘೋಷಾ ಪದ್ಧತಿಯ (ತಲೆಯನ್ನು ಮುಚ್ಚುವ) ಕಾಟವಿರಲಿಲ್ಲ. ಸತೀ ಪದ್ಧತಿ ಇಲ್ಲ. ಉತ್ತರ ಕರ್ನಾಟಕದಲ್ಲಿ ಹಾಗೆಯೇ ಉತ್ತರ ಭಾರತದ ಸ್ತ್ರೀಯರಿಗೆ ಕಡ್ಡಾಯವಾಗಿ ವಿಧಿಸಿದ್ದ ಈ ಸಂಪ್ರದಾಯ ನಮ್ಮ ಸ್ತ್ರೀಯರಲ್ಲಿ ತೀರಾ ಕಡಿಮೆ, ಇದ್ದರೆ ಮೇಲ್ವರ್ಗದ ಬ್ರಾಹ್ಮಣ ವಿಧವೆಯರಲ್ಲಿ ರೂಢಿಯಿತ್ತು.

ವೈಧವ್ಯ ಶಾಪವಾಗಿ ಶೂದ್ರ ಹೆಣ್ಣುಮಗಳನ್ನು ತಟ್ಟಲಿಲ್ಲ. ಕೂಡಿಕೆಯ ಸಂಬಂಧಗಳು ಸಲೀಸಾಗಿ ನಡೆಯುತ್ತಿದ್ದವು. ಶೋಷಣೆಗೆ ಬಗ್ಗದ ಹೆಣ್ಣಿನ ಧ್ವನಿಯಾಗಿ ತುಳುನಾಡಿನ ಸಿರಿಯ ಪಾಡ್ದನವಿದೆ.

ಇಂಗ್ಲೀಷರ ಆಡಳಿತ ಶಿಕ್ಷಣವನ್ನು ಲಿಂಗಭೇದವಿಲ್ಲದೆ ಸಾರ್ವಜನಿಕಗೊಳಿಸಿದಾಗ ಇಲ್ಲಿಯ ಹೆಣ್ಣು ಮಕ್ಕಳು ವಿದ್ಯೆಯ ಸಮ್ಮೋಹಿನಿಗೊಳಗಾದರು. ಗಾಂಧೀಜಿಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ತ್ರೀಯರಿಗೆ

ಮುಕ್ತ ಪ್ರವೇಶ ನೀಡಿದ್ದು ಮಾತ್ರವಲ್ಲ, ಕೇವಲ ಪುರುಷರಿಂದ ಸ್ವಾತಂತ್ರ್ಯದಲ್ಲಿ ಜಯ ಗಳಿಸಲು ಸಾಧ್ಯವಿಲ್ಲವೆಂದು ಸಾರಿದಾಗ ನಮ್ಮ ನಾಡಿನ ಅನೇಕ ಮಹಿಳೆಯರು ಈ ಚಳುವಳಿಯಲ್ಲಿ ಧುಮುಕಿ ಹೋರಾಡಿದ್ದು ಈಗ ಚರಿತ್ರೆ.

ಮಹಾತ್ಮಾ ಗಾಂಧೀಜಿಯವರ ಸುಧಾರಣೆಯಿಂದಾಗಿ ನಮ್ಮ ಹೆಣ್ಣುಗಳು ಹೊಸ್ತಿಲಿಂದ ಅಂಗಳಕ್ಕೆ ಇಳಿದರು. ಕಮಲಾದೇವಿ ಚಟ್ಟೋಪಾಧ್ಯಾಯರಂತಹ ಹೋರಾಟಗಾರ್ತಿ ಕೇವಲ ಸ್ವಾತಂತ್ರ್ಯ ಚಳವಳಿಯಲ್ಲಿ ಮಾತ್ರ ತಮ್ಮ ಸೇವೆಯನ್ನು ಮುಡಿಪಾಗಿಡದೆ ಈ ನಾಡಿನ ಸಾಂಸ್ಕೃತಿಕ ಪುನರುತ್ಥಾನಕ್ಕೂ ಕಾರಣಕರ್ತೆಯಾದರು. ಇಪ್ಪತ್ತನೆಯ ಶತಮಾನದ ಆದಿಭಾಗದಿಂದಲೇ ಈ ನಾಡು ಗಿರಿಬಾಲೆಯಂತಹ ದಿಟ್ಟ ಲೇಖಕಿಯರಿಗೂ ಸ್ಫೂರ್ತಿಯ ಸೆಲೆಯಾದುದು ಮಾತ್ರವಲ್ಲ ಇವರ ಸಂತತಿ ಸಮೃದ್ಧವಾಗಿ ಬೆಳೆಯಿತು. ಕನ್ನಡ ಸಾಹಿತ್ಯದಲ್ಲಿ ತುಳುನಾಡಿನ ಸಾಹಿತಿಗಳಿಗೆ ವಿಶಿಷ್ಟವಾದ ಗೌರವಾದರಗಳಿರುವಂತೆ ಬರಹಗಾರ್ತಿಯರಿಗೂ, ಕತೆಗಾರ್ತಿಯರಿಗೂ ವಿಶಿಷ್ಟವಾದ ಸ್ಥಾನವಿದೆ. ಹೆಣ್ಮಕ್ಕಳ ಶಿಕ್ಷಣಕ್ಕೆ ಇಲ್ಲಿಯ ಜನ ಕೊಟ್ಟ ಪ್ರೋತ್ಸಾಹವೇ ಅವರ ಏಳಿಗೆಗೆ ಕಾರಣವಾಗಿದೆ. ಇಲ್ಲಿನ ಸ್ತ್ರೀಯರ ಮೇಲೆ ಆಗುವ ದೌರ್ಜನ್ಯ ಕಡಿಮೆಯಾಗಲು ಅಕ್ಷರ ಸಂಸ್ಕೃತಿಯೇ ಕಾರಣವಾಗಿದೆ.

ಮಾತೃಮೂಲೀಯ ಪದ್ಧತಿಯ ವ್ಯವಸ್ಥೆಯಲ್ಲಿ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯದ ಸವಿಯುಂಡೇ ಬೆಳೆದ ಈ ತುಳುನಾಡಿನ ಮಹಿಳೆಯರು, ವೀರಶೈವ ಧರ್ಮದ ಕ್ರಾಂತಿಕಾರಕವಾದ ತತ್ವಗಳಿಂದ ಗಾಢವಾಗಿ ಪ್ರಭಾವಿತರಾಗಲೂಬಹುದು. ಆದುದರಿಂದಲೇ ಎಷ್ಟೋ ಮನೆತನಗಳಲ್ಲಿ ಆಡಳಿತವೆಲ್ಲ ಮನೆಯ ಯಜಮಾನ್ತಿಯ ಕೈಯಲ್ಲಿರುತ್ತದೆ. ಹೆಗ್ಗಡೆಗಿಂತ ಹೆಗ್ಗಡ್ತಿಯರು, ಶೆಟ್ಟರಿಗಿಂತ ಶೆಡ್ತಿರು ಜಮೀನ್ದಾರಿಕೆಯ ಆಯವ್ಯಯಗಳನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಧೈರ್ಯವಂತ ಚಾಣಾಕ್ಷೆಯರು ಆಗಿದ್ದರು. ತುಳುನಾಡಿನ ಹೆಣ್ಣಿಗೆ ಶಕ್ತಿ ಇದೆ ಎಂಬುದು ಮೊದಲೇ ಗೊತ್ತಿತ್ತು.

ಬೇರೆ ಕಡೆಯಲ್ಲಿ ಸ್ತ್ರೀಯರು ಮಾಡಿದ ಸಾಧನೆಗಳ ಉಲ್ಲೇಖಗಳು ಚರಿತ್ರೆಯಲ್ಲಿವೆ. ಅವುಗಳಲ್ಲಿ ಹೆಚ್ಚಿನವು ಗಂಡನ, ತಂದೆಯ ಮಗನ ನೆರಳಿನಡಿಯಲ್ಲೇ ಮಾಡಿದವುಗಳು ಎಂಬುದನ್ನು ಗಮನಿಸಬೇಕು. ಆದರೆ ತುಳುನಾಡಿನ ಸ್ತ್ರೀಯರು ಸ್ವಂತಿಕೆಯುಳ್ಳವರು. ಅವರು ಬಳುಕುವ ಬಳ್ಳಿಗಳಲ್ಲ ಆಲಂಬನೆ ಬೇಡ. ಕೈಗೆ ಸಟ್ಟುಗ, ತೊಟ್ಟಿಲು ಮಾತ್ರ ಶೋಭೆಯಲ್ಲ. ಖಡ್ಗ ಸತ್ತಿಗೆಯೂ ಕೈಯೊಳಗಿರಬಲ್ಲುದು ಎಂಬುದಕ್ಕೆ

ಸಾಕ್ಷಿಯಾಗಿ ರಾಣಿ ಅಬ್ಬಕ್ಕ ರಾಣಿ ಇದ್ದಳು. ಈಕೆ ತುಳುನಾಡಿನ ಸ್ತ್ರೀಯರ ಸ್ವಾತಂತ್ರ್ಯ ಮತ್ತು ಸ್ವಾಭಿಮಾನಕ್ಕೆ ಕಲಶಪ್ರಾಯವಾಗಿದ್ದಾಳೆ.

ತುಳುನಾಡಿನ ಮಹಿಳೆಗೆ ಸಮೃದ್ಧವಾದ ಹಿನ್ನೆಲೆ ಇದ್ದುದರಿಂದ ಪ್ರತಿಯೊಂದು ಕ್ಷೇತ್ರದಲ್ಲಿ ಅವಳ ಮುನ್ನಡೆ ಸಾಧ್ಯವಾಯಿತು. ಇದು ಸಾಧ್ಯವಾದದ್ದು ಇಲ್ಲಿಯ ಸಹೃದಯಿ ಸಂಪನ್ನರಾದ ಪುರುಷ ವರ್ಗದಿಂದ ಅವರ ಬೆಂಬಲದಿಂದ ಎಂದು ಸ್ಮರಿಸಬೇಕು. ನಾಟಕ, ಸಿನಿಮಾ ಕ್ಷೇತ್ರಗಳಲ್ಲಿ ಮಿಂಚಿದ, ಕಲ್ಪನಾ, ಜಯಮಾಲಾ, ಲೀಲಾವತಿ, ಹರಿಣಿ, ವಿನಯಪ್ರಸಾದ್ ಮುಂತಾದವರು ಮಾಡಿದ ಅದ್ವಿತೀಯ ಸಾಧನೆ ಪಡೆದ ಸಿದ್ಧಿ ಅಭಿಮಾನಪಡಬೇಕಾದದ್ದು. ಹಾಗೆಂದು ಮಹಿಳೆಯ ಎಲ್ಲ ಸಾಧನೆಗಳಿಗೂ ಪುರುಷರು ಹೂವಿನ ಹಾರ ಹಾಕಿ ಸ್ವಾಗತಿಸಿದರು ಎಂದು ತಿಳಿಯಬೇಕಾಗಿಲ್ಲ.

ತುಳುನಾಡ ಹೆಣ್ಣಿನ ಶಕ್ತಿ ಸಾಮರ್ಥ್ಯಗಳನ್ನು ಅಸಹನೆಯಿಂದ ನೋಡಲಿಲ್ಲ. ಆದರೆ, ಖಂಡಿತವಾಗಿಯೂ ಪುರುಷ ವರ್ಗ ಸಂಶಯದಿಂದ ಕಂಡಿದೆ. ಆದರೂ ಕೊನೆಕೊನೆಗೆ ಮೆಚ್ಚುಗೆಯಿಂದ ಹಾರೈಸಿದೆ. ಹಾಗೆಂದು ತಲೆ ಕಡಿವ, ತಳ ತಪ್ಪಿಸುವ ಹುನ್ನಾರ ಪುರುಷವರ್ಗದಿಂದ ಆದದ್ದು ಕಡಿಮೆ ಎಂದು ಹೆಮ್ಮೆಯಿಂದ ಹೇಳಬಹುದು. ಅದಕ್ಕೆ ಇಲ್ಲಿಯ ಮಣ್ಣಿನ ಸಂಸ್ಕೃತಿಯೇ ಕಾರಣವಾಗಿರಬಹುದು. ಇವೆಲ್ಲ ಪ್ರಗತಿ ಸಾಧನೆಯಾದದ್ದು ಮಧ್ಯಮದ ವರ್ಗದ ಮಹಿಳೆಯರಲ್ಲಿ ಎಂಬುದನ್ನು ಗಮನಿಸಬೇಕು.

ಯಾಕೆಂದರೆ ಬೆಳೆಯುತ್ತಿರುವ ಕೈಗಾರೀಕರಣ ದುಷ್ಪರಿಣಾಮಗಳೆಲ್ಲಾ ಮೊದಲು ತಟ್ಟುವುದು ಮಹಿಳೆಗೆ, ಅಂದು ಅಬ್ಬಕ್ಕನಿಗೆ ವೈರಿಗಳನ್ನು ಸದೆಬಡಿಯಲು ನೆರವಾದ ಮೊಗವೀರ ಮಹಿಳೆಯರ ಕೆಚ್ಚು ಇಂದಿಗೂ ಕುಂದಿಲ್ಲ. ಹೀಗೆ ಕಲೆ, ಸಾಹಿತ್ಯ, ಸಂಸ್ಕೃತಿ, ಪರಾಕ್ರಮ ಎಲ್ಲದರಲ್ಲೂ ತುಳುನಾಡಿನ ಮಹಿಳೆ, ಇತರರು ಬೆರಗುಪಡುವಷ್ಟು ಮಹತ್ಕಾರ್ಯಗಳನ್ನು ಮಾಡಿದ್ದಾಳೆ ಎಂಬುದರಲ್ಲಿ ಸಂಶಯವಿಲ್ಲ. ಹೆಣ್ಣು ಮಕ್ಕಳಿಗೆ ವಿದ್ಯಾಭ್ಯಾಸವನ್ನು ನಿರಾಕರಿಸಿದಂತಹ ಕಾಲ ಕೂಡ ಹಿಂದೆ ಇತ್ತು. ವಚನ ಯುಗವನ್ನು ಬಿಟ್ಟರೆ ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಉಚ್ಚವರ್ಗದ ಕೆಲವು ಹೆಣ್ಣು ಮಕ್ಕಳಿಗೆ ಶಿಕ್ಷಣದ ಅವಕಾಶ ದೊರಕಲಾರಂಭಿಸಿದರೂ ಉನ್ನತ ಶಿಕ್ಷಣವನ್ನು ಪಡೆದು ತನ್ನ ವ್ಯಕ್ತಿತ್ವದ ಪರಿಧಿಯನ್ನು ಹಿಗ್ಗಿಸಿಕೊಂಡು ಯೋಚಿಸುವಂತಹ ಅವಕಾಶ ಹೆಚ್ಚಿನ ಪ್ರಮಾಣದಲ್ಲಿ ಆಗಲಾರಂಭಿಸಿದ್ದು ೨೦ರ ದಶಕದಲ್ಲಿ.

ಹೀಗೆ ಶತಮಾನಗಳ ಕಾಲ ವಿದ್ಯೆಯಿಂದ ವಂಚಿತಳಾದ ಸ್ತ್ರೀ ತಾನೇ ತನಗನಿಸಿದ್ದನ್ನು ಅಭಿವ್ಯಕ್ತಿಸುವ ಅವಕಾಶ ಪಡೆದುಕೊಂಡಿದ್ದು ಇತ್ತೀಚೆಗಷ್ಟೇ. ಪುರುಷ ಮತ್ತು ಮಹಿಳೆಯ ಆಲೋಚನಾ

ಕ್ರಮಗಳಲ್ಲಿ ಸಂವೇದನಗಳಲ್ಲಿ ಅನನ್ಯತೆ ಹಾಗೂ ವಿಭಿನ್ನತೆಗಳಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಸ್ವಲ್ಪ ವಿವೇಚಿಸಿ ನೋಡಿದರೆ ಮಹಿಳೆ ಬರೆಯುವಂತಹ ಕೃತಿಗಳ ಹಿಂದೆ ಒಂದು ಹೆಣ್ಣುತನ ಇರುವುದು ಗೋಚರಿಸುತ್ತದೆ. ಹೆಣ್ಣುತನವೆಂದರೆ ಮತ್ತೆ ಸಾಂಪ್ರದಾಯಿಕವಾಗಿ ಹೇಳುವಂತಹ ತ್ಯಾಗ ಔದಾರ್ಯ, ಕ್ಷಮಾಶೀಲತೆ, ಮಾರ್ದವತೆ, ಮಾಗುವಿಕೆ ಎಂದಷ್ಟೇ ಅರ್ಥೈಸಬೇಕಿಲ್ಲ.

ನಿಜವಾಗಿ ಹೆಣ್ಣುತನವೆಂದರೆ ಪುರುಷ ಪ್ರಧಾನ ಮೌಲ್ಯಗಳನ್ನೊಳಗೊಂಡ ಗಂಡುತನದ ಅಭಿವ್ಯಕ್ತಿಯನ್ನು ನಿರಾಕರಿಸಿ, ಅದಕ್ಕೆ ಸಹಜವಾಗಿ ಎದುರಾಗಿರುವಂತಹ ಒಂದು ಅಭಿವ್ಯಕ್ತಿಯನ್ನು ರೂಪಿಸಿಕೊಳ್ಳುವುದೇ ಆಗಿರುತ್ತದೆ. ಪುರುಷನಿಗೆ ತಾನು ಮಹಿಳೆಗಿಂತ ಶ್ರೇಷ್ಠ, ಅನನ್ಯ ಎನ್ನುವಂತಹ ಪ್ರಬಲವಾದ ನಂಬಿಕೆ ಇರುತ್ತದೆ. ಆದರೆ ಪುರುಷ ನಿರ್ಮಿತ ಈ ಸಮಾಜದಲ್ಲಿ ಮಹಿಳೆ ಕೂಡಾ ತಾನು ಪುರುಷನ ಪ್ರತಿರೂಪ; ಪಡಿಯಚ್ಚು ಆಗುವುದರಲ್ಲೇ ತನ್ನ ಸಾರ್ಥಕತೆ ಇದೆ ಎಂದು ಭಾವಿಸಿದ್ದಾಳೆ. ಕೆಲವೊಮ್ಮೆ ಅದು ಅನಿವಾರ್ಯ ಕೂಡ ಆಗಿರುತ್ತದೆ. ಆದರೆ ಅವಳು ಅವನಂತೆಯೇ ಇರಬೇಕಿಲ್ಲ, ಯೋಚಿಸಬೇಕಿಲ್ಲ, ಬರೆಯಬೇಕಿಲ್ಲ.

ತುಳುನಾಡಿನಲ್ಲಿ ಬಹುತೇಕ ಮಾತೃಮೂಲೀಯ ಪದ್ಧತಿ ಪ್ರಚಲಿತವಾಗಿದೆ. ಈ ವ್ಯವಸ್ಥೆಯಡಿಯಲ್ಲಿ ಬೆಳೆದ ಹೆಣ್ಣು ಕಾಲಕಸವಾಗಿ ಬೀದಿ ನಾಯಿಯಂತೆ ಬಾಳುವ ಪ್ರಮೇಯ ತೀರಾ ಕಡಿಮೆ. ಇಲ್ಲಿ ಹೆಣ್ಣಿಗೆ ಒಂದಿಷ್ಟು ಗೌರವವಿದೆ. ಆಸ್ತಿಯ ಹಕ್ಕು ಇದೆ. ಹಾಗೆಂದು ಇಲ್ಲಿ ಶೋಷಣೆಯೇ ಇಲ್ಲವೆಂದು ತಿಳಿಯಬೇಕಾಗಿಲ್ಲ. ಸೋದರ ಸೊಸೆಯಂದಿರನ್ನು ಸೋದರ, ಮಾವಂದಿರು ಸರ್ವಾಧಿಕಾರೀ ಪ್ರವೃತ್ತಿಯಿಂದ ತಮ್ಮಿಷ್ಟದಂತೆ ನಡೆಸಿಕೊಂಡ ಎಷ್ಟೊ ಮನೆತನಗಳಿವೆ. ಆದರೂ ಉಚ್ಚವರ್ಣದ ಹೆಣ್ಣುಮಗಳಂತೆ ಕೊಟ್ಟ ಹೆಣ್ಣುಕುಲಕ್ಕೆ ಹೊರಗೆ ಎಂಬ ಭಾವನೆ ಇಲ್ಲ. ಗಂಡನಿಂದ ವಂಚಿತೆ, ಶೋಷಿತೆಯಾದ ಅಥವಾ ಗಂಡ ಸತ್ತರೆ ಇಲ್ಲಿಯ ಹೆಣ್ಣಿಗೆ ತವರು ಮನೆಯ ಬಾಗಿಲು ಮುಚ್ಚಿರುವುದಿಲ್ಲ. ಸದಾ ತೆರೆದಿರುತ್ತದೆ.

ಇಂದು ಸ್ತ್ರೀಪರವಾದ ಕಾಳಜಿಗಳು ಬದುಕನ್ನು ಪ್ರವೇಶಿಸುತ್ತಿದೆ. ಹೇಗೆ ತನ್ನ ಅಸ್ತಿತ್ವವನ್ನು ರೂಪಿಸಿಕೊಳ್ಳಲು ತನಗೆ ಸಂಬಂಧಿಸಿದ ಕ್ಷೇತ್ರಗಳನ್ನು ಆಯ್ಕೆ ಮಾಡಲು ಮಹಿಳೆಗೆ ಅವಕಾಶಗಳನ್ನು ನಿರ್ಬಂಧಿಸುತ್ತಿದ್ದಂತೆ ಮಹಿಳೆಯೂ ಕೂಡಾ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪುರುಷನ ಕಟ್ಟಳೆಗಳನ್ನು ವಿರೋಧಿಸುತ್ತಿದ್ದಾಳೆ. ಇಂದು ಸಾಂಪ್ರದಾಯಿಕ ಮನೋಧರ್ಮಕ್ಕೆ ತೀರಾ ವಿರೋಧಿ ಪ್ರಕ್ರಿಯೆಯಾಗಿದೆ.

ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಸ್ತ್ರೀಪಾತ್ರಗಳ ಮೂಲಕ ಅಭಿವ್ಯಕ್ತಿಗೊಂಡ ಪ್ರತಿರೋಧದ ಸ್ವರೂಪ ಮತ್ತು ಧೋರಣೆಯ ನೆಲೆ ಹಲವು ರೀತಿಯನ್ನೊಳಗೊಂಡಿದೆ. ತಮ್ಮ ಅಸ್ತಿತ್ವಕ್ಕಾಗಿ ಹೋರಾಡುವ ಈ ಪಾತ್ರಗಳು ಮಾನವೀಯ ಸ್ತ್ರೀ ಸಂವೇದನೆಯ ನೆಲೆಯವು ಸರ್ವಸಮಾನತೆಯ ಸಮಾಜ ನಿರ್ಮಾಣದ ತುಡಿತವೂ ಆಗಿದೆ.

ಪುರುಷ ಪ್ರಧಾನ ಸಂಸ್ಕೃತಿಯಿಂದಾಗಿ ಲಿಂಗಬೇಧ ಶ್ರಮವಿಭಜನೆಯ ಕಾರಣ ಮತ್ತು ಸಾಂಸ್ಕೃತಿಕ ಸಂಸ್ಕಾರಗಳಿಂದಾಗಿ ಮಹಿಳೆಯ ಕಾರ್ಯಕ್ಷೇತ್ರ ಬಹುಸೀಮಿತವಾಗಿದೆ. ಮಹಿಳೆ ಎಂದೊಡನೆ ಅಬಲೆ, ಪರಾವಲಂಬಿ ಮತ್ತು ಸೂಕ್ಷ್ಮಜೀವಿ ಎಂಬ ಮುದ್ರೆ ಗುರುತುಗಳನ್ನು ನಿರ್ದಿಷ್ಟಗೊಳಿಸಿರುವುದು ಗಮನಾರ್ಹವಾಗಿದೆ. ಒಲೆ ಮತ್ತು ಮಕ್ಕಳು ಇವೇ ಅವರ ಮುಖ್ಯ ಕಾರ್ಯಕ್ಷೇತ್ರಗಳು, ಅವುಗಳಿಂದ ಹೊರ ಬರಬಾರದೆಂಬ ವೈಚಾರಿಕ ನಿರ್ಬಂಧ ರೂಪಿಸಲಾಗಿದೆ. ನೀತಿ, ತ್ಯಾಗ, ಪಾವಿತ್ರ್ಯ, ಮರ್ಯಾದೆ, ಸಹನಶೀಲತೆ ಈ ರೀತಿಯ ಗುಣಗಳನ್ನು ಮಹಿಳೆಗೆ ನೀಡಲಾಗಿದೆ. ಹೀಗಾಗಿ ಮಹಿಳೆಯರ ಬದುಕಿನಲ್ಲಿ ದಾಸ್ಯ, ಪರಾವಲಂಬಿ ಜೀವನ, ನಿರ್ಣಯಗಳಲ್ಲಿ ಅಶಕ್ತತೆ, ಗುಲಾಮಗಿರಿ ಮನೆಮಾಡಿಕೊಂಡಿವೆ.

ಇತ್ತೀಚಿನ ವರ್ಷಗಳಲ್ಲಿ ಲಿಂಗತ್ವ ಸಮನ್ವಯದ ಪರಿಕಲ್ಪನೆ ಬೆಳೆಯತೊಡಗಿದೆ. ಇದು ಸ್ತ್ರೀ ಪುರುಷರಿಬ್ಬರಿಗೂ ಸಮಾನ ಸ್ವಾತಂತ್ರ್ಯ, ಸ್ಥಾನಮಾನ, ಅವಕಾಶ-ಅಧಿಕಾರ ಮುಂತಾದವುಗಳ ಹಂಚುವಿಕೆಯನ್ನು ಮೌಲ್ಯವೆಂದು ಒಪ್ಪಿಕೊಳ್ಳುತ್ತದೆ. ಈಗಾಗಲೇ ಸಂವಿಧಾನದಲ್ಲಿ, ಶಾಸನ-ಕಾನೂನುಗಳಲ್ಲಿ ಒಪ್ಪಿಕೊಂಡು ಆಗಿದೆ. ಆದರೆ ಇದನ್ನು ನಮ್ಮ ಆಚಾರ-ವಿಚಾರಗಳಲ್ಲಿ, ನಡೆನುಡಿಗಳಲ್ಲಿ, ಮನಸ್ಸಿನಲ್ಲಿ, ಒಟ್ಟಾರೆ ನಮ್ಮ ಜೀವನಕ್ರಮದಲ್ಲಿ ಅಳವಡಿಸಿಕೊಂಡು ಚಲಾವಣೆಗೆ ತರಲಾಗಿಲ್ಲದಿರುವುದೇ ಮಹಿಳೆಯ ಸ್ಥಾನ ಸಮಾಜದಲ್ಲಿ ಎರಡನೆಯ ದರ್ಜೆಯಲ್ಲುಳಿಯುವುದಕ್ಕೆ ಮುಖ್ಯ ಕಾರಣವಾಗಿದೆ.

ಗಂಡು ಹೆಣ್ಣಿನ ವರ್ಗೀಕರಣಕ್ಕೆ ಅವರೊಳಗಿನ ಜೈವಿಕ ಭಿನ್ನತೆಗಳು ಮೂಲ ಆಧಾರ. ನಿಸರ್ಗದತ್ತವಾದ ಭಿನ್ನತೆ ಸಂತಾನೋತ್ಪತ್ತಿಗೆ ಪೂರಕವಾಗುವಂತೆ ಅವರ ದೈಹಿಕ, ಮಾನಸಿಕ ರಚನೆಗಳಿರುತ್ತವೆ. ಇಬ್ಬರಿಗೂ ಅವರದ್ದೇ ಆದ ನಿರ್ದಿಷ್ಟ ಜವಾಬ್ದಾರಿಗಳಿರುತ್ತವೆ. ಈ ಜೈವಿಕ ಭಿನ್ನತೆಯನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಹಿಗ್ಗಿಸಲಾಗಿದೆ.

ಈ ಭಿನ್ನತೆಯ ಆಧಾರದಿಂದಲೇ ಶ್ರೇಷ್ಠತೆ-ಕನಿಷ್ಠತೆಯೆಂಬ ಶ್ರೇಣೀಕರಣ ಸಮಾಜದಲ್ಲಿ ಮೂಡಿದೆ. ಲಿಂಗತ್ವದ ರಾಜಕಾರಣವು ಅವರಲ್ಲಿರುವ ಭಿನ್ನತೆಯನ್ನು ಎತ್ತಿ ತೋರಿಸಿ ಅವರಲ್ಲಿರುವ ಸೌಮ್ಯತೆಯನ್ನು

ಉದ್ದೇಶಪೂರ್ವಕವಾಗಿ ಮರೆಮಾಚಿದೆ. ಧೈರ್ಯ–ಸಾಹಸ, ಆಕ್ರಮಣಶೀಲತೆ, ಬುದ್ಧಿವಂತಿಕೆ, ಮುಂದಾಳತ್ವ, ಒರಟುತನ, ಕ್ರಿಯಾಶೀಲತೆ ಗಂಡು ಗುಣಗಳು ಎಂದೂ, ನಾಚಿಕೆ, ಸಂಕೋಚ, ಸಹನೆ, ತಾಳ್ಮೆ, ಪುಕ್ಕಲುತನ, ಹಿಂಬಾಲಕತ್ವಗಳು ಹೆಣ್ಣು ಗುಣಗಳೆಂದೂ ವಿಭಾಗಿಸಲಾಗಿದೆ.

ಅಂತಹ ಗುಣಗಳಿರುವ ಕಾರಣಕ್ಕೆ ಗಂಡಸರು ಶ್ರೇಷ್ಠರು ಮತ್ತು ಹೆಂಗಸರು ಕನಿಷ್ಠರು ಎಂಬ ಮನೋಭಾವ ಹುಟ್ಟಿಕೊಂಡಿದೆ. ತೋಳ್ಬಲದ ದೃಷ್ಟಿಯಿಂದ ಗಂಡಸರು ಬಲಿಷ್ಠರಾದುದರಿಂದ ಅವರು ಆಳಬೇಕಾದವರು, ಹೆಂಗಸರು ದುರ್ಬಲರಾದುದರಿಂದ ಅವರು ಆಳಿಸಿಕೊಳ್ಳಬೇಕಾದವರು ಎಂದು ಶತಮಾನಗಳಿಂದ ನಂಬಿಸುತ್ತಾ ಬರಲಾಗಿದ್ದು ಇದರ ಆಧಾರದಿಂದಲೇ ಸ್ತ್ರೀಪುರುಷರ ನೆಲೆ ಬೆಲೆಗಳನ್ನು ಗುರುತಿಸುತ್ತಾ ಬರಲಾಗಿದೆ. ಆದರೆ ವಾಸ್ತವವಾಗಿ ಬಲ ಎನ್ನುವ ಕಲ್ಪನೆಯೇ ಪೂರ್ವಾಗ್ರಹ ಪೀಡಿತವಾದುದು.

ಮನಃಶಾಸ್ತ್ರಜ್ಞರ ಪ್ರಕಾರ ನೂರಕ್ಕೆ ನೂರು ಗಂಡು–ಹೆಣ್ಣು ಗುಣಗಳನ್ನು ಹೊಂದಿರುವವರು ಯಾರೂ ಇಲ್ಲ. ಮುಖ್ಯವಾಗಿ ನಮ್ಮ ಕುಟುಂಬ ವ್ಯವಸ್ಥೆಯೇ ಅಸಮಾನತೆಯ ಆಧಾರದಲ್ಲಿ ನಿಂತಿರುವಂತದ್ದಾಗಿದೆ. ಇಲ್ಲಿ ಹುಟ್ಟಿನಿಂದಲೇ ಗಂಡು–ಹೆಣ್ಣು ಮಕ್ಕಳನ್ನು ಬೆಳೆಸುವ ವಿಧಾನದಲ್ಲೇ ಭಿನ್ನತೆಯಿದೆ. ಇಲ್ಲಿಂದಲೇ ಅಸಮಾನತೆಯ ಬೀಜ ಮೊಳಕೆಯೊಡೆದು ಸಮಾಜದಲ್ಲಿ ಬೆಳೆಯುತ್ತದೆ.

ಮದುವೆಯಾಗಿ ಮಹಿಳೆ ಗಂಡನ ಮನೆಗೆ ಹೋಗಿ, ತನ್ನ ಹಿಂದಿನ ಪರಿಸರವನ್ನು ಮರೆತು ಅಲ್ಲಿನ ಪರಿಸರವನ್ನೇ ತನ್ನ ಪರಿಸರವೆಂದು ನಂಬಿ ಆ ಕುಟುಂಬದ ಎಲ್ಲಾ ಜವಾಬ್ದಾರಿಗಳನ್ನು ಗೃಹಕೃತ್ಯ, ಮನೆವಾರ್ತೆ, ಮಕ್ಕಳ–ವೃದ್ಧರ ಪಾಲನೆ... ಇತ್ಯಾದಿಗಳನ್ನು ನಿರ್ವಹಿಸಬೇಕೆಂಬ ಕಟ್ಟುಪಾಡಿನ ಹಿಂದೆ ನಮ್ಮ ಪುರುಷ ನಿರ್ಮಿತ ಸಮಾಜ ಹಾಗೂ ಸಂಸ್ಕೃತಿಯ ಏಕಪಕ್ಷೀಯ ಸ್ವಾರ್ಥವಿದೆ. ಸಮಾಜ ಮತ್ತು ಸಂಸ್ಕೃತಿಯನ್ನು ತನಗೆ ಬೇಕಾದಂತೆ ಸೃಷ್ಟಿ ಮಾಡಿಕೊಂಡಿರುವವನು ಪುರುಷ.

ಪುರುಷ ನಿರ್ಮಿತ ಈ ಸಂಸ್ಕೃತಿಯನ್ನು ಹೆಣ್ಣು ಪಾಲಿಸಬೇಕು, ಸಂರಕ್ಷಿಸಬೇಕಷ್ಟೇ. ಅದರಲ್ಲಿ ಕೊಂಚ ಏರುಪೇರಾದರೂ ಅಲ್ಲೋಲಕಲ್ಲೋಲ. ಆದರೆ ಈ ಕುಟುಂಬ, ಸಮಾಜ, ನೈತಿಕತೆಯ ಚೌಕಟ್ಟುಗಳನ್ನು ಕಾಲದಿಂದ ಕಾಲಕ್ಕೆ ಪುರುಷ ತನಗೆ ಬೇಕಾದಂತೆ ಬದಲಾಯಿಸಿಕೊಳ್ಳುತ್ತಾ ಹೋಗಿರುವುದು ಚರಿತ್ರೆಯ ಪುಟಗಳಲ್ಲಿ ದಾಖಲಾಗಿದೆ.

ಹೆಣ್ಣಿಗೆ ನೀನು ಹೀಗಿರಬೇಕು, ಹೀಗೆ ಮಾಡಬೇಕು ಎಂದು ನಿರ್ದೇಶಿಸಿ ಅವಳನ್ನು ತನಗೆ ಬೇಕೆಂದಂತೆ ಒಂದು ಚೌಕಟ್ಟಿನಲ್ಲಿ ನಿಯಂತ್ರಿಸುವುದು, ಸಂಸ್ಕೃತಿಯ ಸಂಕೋಲೆಯಲ್ಲಿ ಬಂಧಿಸಿರುವುದು, ಅಸಮಾನತೆಯ ನೆಲೆಯ ಬಲಿಷ್ಠ ಮತ್ತು ಅಸಹಾಯಕತೆಯ ನಡುವಿನ ಆಧಾರದಿಂದ ಸೃಷ್ಟಿಯಾದದ್ದು ನಮ್ಮ ಪುರುಷ ಕೇಂದ್ರಿತ ಸಮಾಜ.

ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಗೆ ಸಮಾನತೆ, ಸ್ವಾತಂತ್ರ್ಯಗಳಿಲ್ಲದೇ ಅವನ ಆಶಯ, ಅವಶ್ಯಕತೆ, ಅನಿವಾರ್ಯತೆಗೆ ತಕ್ಕಂತೆ ಬದುಕಿ ಬಂದ ಮಹಿಳೆಗೆ ಇಂದಿಗೂ ಎರಡನೆಯ ಸ್ಥಾನವೇ. ಮಹಿಳೆ ರೂಪಿಸಿದ ಸಾಹಿತ್ಯ ಪುರುಷ ಗಿಟ್ಟಿಸಿಕೊಳ್ಳುವ ಅವಕಾಶದಿಂದ ವಂಚಿತವಾಗುತ್ತಿದೆ. ಹಾಗೆಯೇ ಅವಳಿಗೆ ಸಮಾನತೆ ಮತ್ತು ಸ್ವಾತಂತ್ರ್ಯ ಎರಡೂ ಕುಟುಂಬ ವ್ಯವಸ್ಥೆಯಲ್ಲಿ ಮರೀಚಿಕೆಗಳಾಗಿಯೇ ಉಳಿದಿವೆ. ಮಹಿಳೆಯ ಆಶಯಗಳು ಸೀಮಿತ ಚೌಕಟ್ಟಿನಲ್ಲಿ ರೂಪುಗೊಂಡಿದ್ದರೂ ಸಿಕ್ಕ ಅವಕಾಶಗಳನ್ನು ಸದುಪಯೋಗಪಡಿಸಿಕೊಂಡು ಸುಂದರವಾದ ಬದುಕನ್ನು ಸತ್ವಯುತವಾದ ಸಾಹಿತ್ಯವನ್ನು ರೂಪಿಸುತ್ತಿದ್ದಾಳೆ. ಪುರುಷ ಸಮಾನ ಪ್ರತಿಭೆಯ ಸ್ತ್ರೀಯರಿಂದ ನವ್ಯ, ದಲಿತ, ಬಂಡಾಯ ಘಟ್ಟಗಳಲ್ಲಿ ಉತ್ಕೃಷ್ಟ ಕೃತಿಗಳು ಬಂದಿವೆ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಹೊಸಗನ್ನಡ ಸಾಹಿತ್ಯವು ಒಂದು ಪ್ರಮುಖ ಕಾಲಘಟ್ಟ. ಈ ಸಂದರ್ಭದಲ್ಲಿ ಸಾಮಾಜಿಕ ಜೀವನದಲ್ಲುಂಟಾದ ಬದಲಾವಣೆಗಳು ಸಾಹಿತ್ಯದ ಮೇಲೆ ಅನೇಕ ಪ್ರಭಾವವನ್ನುಂಟು ಮಾಡಿದವು. ಅವುಗಳಲ್ಲಿ ಮುಖ್ಯವಾಗಿ ಶಿಕ್ಷಣ, ಸಾಹಿತ್ಯ, ಕೈಗಾರಿಕೆ ಹೀಗೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಅನೇಕ ಬದಲಾವಣೆಗಳು ಆಯಿತು. ಇದರ ಜೊತೆಗೆ ಇಂಗ್ಲೀಷ್ ಸಾಹಿತ್ಯದ ಜೊತೆಗೆ ರಾಷ್ಟ್ರೀಯ ಚಳುವಳಿಯ ಸಹ ತೀವ್ರವಾದ ಪ್ರಭಾವವನ್ನು ಉಂಟು ಮಾಡಿ ಪಾಶ್ಚಾತ್ಯ ಶಿಕ್ಷಣ, ಸಂಪರ್ಕ ಸಾಮಾಜಿಕ ಚಿಂತನೆಗಳಿಂದ ಸಾಹಿತ್ಯದಲ್ಲಿ ನವೋದಯ, ಪ್ರಗತಿಶೀಲ ನವ್ಯ ಬಂಡಾಯದಂತಹ ಚಳುವಳಿಗಳು ರೂಪುಗೊಂಡವು.

ಇಪ್ಪತ್ತೊಂದನೆಯ ಶತಮಾನದಲ್ಲಿ ಮಹಿಳೆಯರಿಗೆ ಜಾಗತೀಕರಣದಿಂದ ಹಲವು ಅವಕಾಶಗಳ ಬಾಗಿಲುಗಳು ತೆರೆದುಕೊಂಡಿವೆ. ಅದರಲ್ಲಿ ಮಹಿಳೆಯರು ಹೆಚ್ಚು ಹೆಚ್ಚು ತೊಡಗಿಸಿಕೊಂಡಿದ್ದಾರೆ. ವೈಯಕ್ತಿಕ ಜೀವನದಿಂದ ಮೊದಲುಗೊಂಡು ಇಡೀ ಸಮಾಜ ಮತ್ತು ಜಗತ್ತು ಹೆಣ್ಣನ್ನು ಕಾಣುವ ದೃಷ್ಟಿ ಮಹಿಳೆಯರನ್ನು ಕಾಡಿದೆ. ಮೊದಲ ಹಂತದಲ್ಲಿ ನಿಜ ಜೀವನದಲ್ಲಿ ಎಲ್ಲವನ್ನು ಮರುಮಾತಿಲ್ಲದೆ

ಒಪ್ಪಿಕೊಳ್ಳುತ್ತ ಬಂದಂತೆಯೇ ಅದನ್ನೇ ಬರವಣಿಗೆಯಲ್ಲೂ ಮಹಿಳೆಯರು ದಾಖಲಿಸುತ್ತ ಬಂದಿದ್ದು ಕಂಡುಬರುತ್ತದೆ. ಕಾಲಕ್ರಮೇಣ ತಮ್ಮ ಕುರಿತಾದ ಸಮಾಜದ ಧೋರಣೆ ತಾವು ತಿಳಿದಂತೆ ಇಲ್ಲವೆಂಬುದನ್ನು ಹೊಸದೃಷ್ಟಿಕೋನದಿಂದ ನೋಡುತ್ತಾ ಮಹಿಳೆಯರು ತಮ್ಮ ಬರವಣಿಗೆಯಲ್ಲಿ ಅದನ್ನು ಬಿಂಬಿಸುತ್ತಿದ್ದಾರೆ.

## ೧.೧ ಅಧ್ಯಯನದ ಸಮಸ್ಯೀಕರಣ

ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಬದುಕು ಅಸಹನೀಯವಾಗಿರುತ್ತದೆ. ಮಹಿಳೆ ಬದುಕಿನಲ್ಲಿ ನೂರೆಂಟು ಕಟ್ಟುಪಾಡುಗಳಿಗೆ ಒಳಗಾಗಿರುತ್ತಾಳೆ. ಪುರುಷ ಪ್ರಧಾನ ಸಮಾಜ ಆಕೆಯ ಎಲ್ಲಾ ಬಗೆಯ ಬಯಕೆಗಳನ್ನು ಹತ್ತಿಕ್ಕಲು ಒತ್ತಾಯಿಸುತ್ತಾ ಅವಳನ್ನು ನಿಯಂತ್ರಿಸುತ್ತಾ, ಯಾವುದೇ ಬಗೆಯ ರಕ್ಷಣೆಯನ್ನು ನೀಡದೆ ಅವಳ ಮೇಲಿನ ದೌರ್ಜನ್ಯಕ್ಕೆ ಕುರುಡಾಗಿ ವರ್ತಿಸುತ್ತಾ ಬಂದಿದೆ. ಹತ್ತೊಂಭತ್ತನೆಯ ಶತಮಾನದ ಸುಧಾರಣಾವಾದಿ ಚಳುವಳಿಯಿಂದ ಮಹಿಳಾ ಶಿಕ್ಷಣಕ್ಕೆ ಅವಕಾಶ ದೊರಕಿತು. ಶಿಕ್ಷಣ ಪಡೆದ ಮಹಿಳೆಯರು ತಮ್ಮನ್ನು ಸಾಹಿತ್ಯದಲ್ಲಿ ತೊಡಗಿಸಿಕೊಂಡರು. ಮಹಿಳೆಯರು ಎದುರಿಸುವ ಸಮಸ್ಯೆಗಳ ಬಗ್ಗೆ ಬೆಳಕು ಚೆಲ್ಲಲು ಮತ್ತು ಅರಿವನ್ನು ಮೂಡಿಸಲು ಸಾಹಿತ್ಯವನ್ನು ಬಳಸಿಕೊಂಡರು. ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಕರಾವಳಿ ಲೇಖಕಿಯರ ಕಥೆಗಳಲ್ಲಿ ಹುಡುಕುವ ಸಂದರ್ಭದಲ್ಲಿ ಕೆಲವು ಪ್ರಶ್ನೆಗಳು ಎದುರಾದಾಗ ಅವುಗಳಿಗೆ ಸಾಮುದಾಯಿಕ ನೆಲೆಯಲ್ಲಿ ಉತ್ತರವನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಇಲ್ಲಿ ಎದುರಾಗುವ ಮುಖ್ಯ ಪ್ರಶ್ನೆಗಳೆಂದರೆ,

೧. ಕರಾವಳಿ ಮಹಿಳೆಯರು ಎದುರಿಸುತ್ತಿರುವ ಕೌಟುಂಬಿಕ ಸಮಸ್ಯೆಗಳು ಯಾವುವು ?

೨. ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳಲ್ಲಿ ಮಹಿಳೆಯರು ಬಂಧಿಯಾಗಿದ್ದು, ಅದರ ಕುರಿತಾಗಿ ಕರಾವಳಿ ಲೇಖಕಿಯರು ಹೇಗೆ ಜಾಗೃತಿ ಮೂಡಿಸಿದ್ದಾರೆ?

೩. ಮಹಿಳೆಯರು ಆರ್ಥಿಕ ಸ್ವಾವಲಂಬನೆಯಾಗಿ, ಸ್ವತಂತ್ರವಾಗಿ ಹೇಗೆ ಬದುಕು ಸಾಗಿಸಿದ್ದಾರೆ?

೪. ಕರಾವಳಿ ಮಹಿಳೆಯರು ಸಾಂಪ್ರದಾಯಿಕ ನೆಲೆಯನ್ನು ಮೀರಿ ಸ್ವಾತಂತ್ರ್ಯ ವಿಮೋಚನೆಯ ನೆಲೆಯಲ್ಲಿ ತಮ್ಮ ಬದುಕನ್ನು ಹೇಗೆ ಕಟ್ಟಿಕೊಂಡಿದ್ದಾರೆ?

ಈ ಮೇಲಿನ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳೆ ಬಹಳ ವರ್ಷಗಳು ಹಿಂದೆಯೇ ಅತ್ಯಂತ ಸಕ್ರಿಯಳಾಗಿದ್ದಳು. ಆರ್ಥಿಕ ಸಬಲತೆಯನ್ನು ಕಂಡುಕೊಳ್ಳುವಲ್ಲಿ ಮೊದಲಿಗಳು. ಮೊಗವೀರ ಮಹಿಳೆಯರು ಮೀನುಮಾರುವ ವ್ಯವಸ್ಥೆಯಿಂದಾಗಿಯೇ ಆರ್ಥಿಕ ಸ್ವಾವಲಂಬನೆಯನ್ನು ಕಂಡುಕೊಂಡವರು. ಬಂಟ ಮಹಿಳೆಯರು ಕುಟುಂಬ ವ್ಯವಸ್ಥೆಯನ್ನು ನಿಯಂತ್ರಣ ಮಾಡುವಲ್ಲಿ ಮೇಲುಗೈ ಸಾಧಿಸಿದವರು. ಉಳಿದ ಜಿಲ್ಲೆಗಳಿಗಿಂತ ಕರಾವಳಿ ಜಿಲ್ಲೆಯ ಮಹಿಳೆ ಸ್ಥಾನ ವ್ಯತ್ಯಸ್ಥವಾದುದು. ಕರಾವಳಿಯಲ್ಲಿ ಕಾದಂಬರಿ, ಕಥೆಗಳು ಪ್ರಾರಂಭವಾಗುವುದಕ್ಕಿಂತ ಮೊದಲೇ ಕುಟುಂಬ, ಸಮಾಜ, ವ್ಯವಹಾರಗಳಲ್ಲಿ ಮಹಿಳೆಗೆ ಸ್ಥಾನಮಾನ, ಪ್ರಾಧಾನ್ಯತೆ ಇತ್ತು. ಇದುವೇ ಕರಾವಳಿ ಲೇಖಕಿಯರಿಗೆ ಒಂದಲ್ಲಾ ಒಂದು ರೀತಿಯಲ್ಲಿ ಸಾಹಿತ್ಯ ರಚನೆಗೆ ಪ್ರಚೋದನೆ ಕೊಟ್ಟಿರಬಹುದು.

ಮಹಿಳೆ ಶತಮಾನಗಳಿಂದ ಅಸಮಾನತೆ, ಅನ್ಯಾಯ, ಶೋಷಣೆ ಅನುಭವಿಸುತ್ತ ಬಾಳಿದ, ಅಂಚಿನಲ್ಲಿರುವ ದಮನಿತ ಸಮುದಾಯವೆಂದು ಗುರುತಿಸಲಾಗುವ ಮಹಿಳೆಯರ ಪ್ರತಿರೋಧವನ್ನು ಮಹಿಳಾ ಕಥಾ ಸಾಹಿತ್ಯದ ಹಿನ್ನೆಲೆಯಲ್ಲಿ ಗ್ರಹಿಸುವ ಉದ್ದೇಶವನ್ನು ಹೊಂದಲಾಗಿದೆ.

ಕರಾವಳಿಯ ಕತೆಗಳು ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆಗಳ ಕಾಲಘಟ್ಟಗಳನ್ನು ಒಳಗೊಂಡಿದೆ. ಆಯಾ ಕಾಲಕ್ಕನುಗುಣವಾಗಿ ಉಂಟಾದ ಬದಲಾವಣೆಯನ್ನು ಒಳಗೊಳ್ಳುತ್ತಲೇ ಕಥೆಗಳು ವಿಶಿಷ್ಟವಾಗಿ ರಚನೆಗೊಂಡಿದೆ. ಸಾರಾ ಅಬೂಬಕ್ಕರ್‌ನಿಂದ ಹಿಡಿದು ಅನುಪಮಾ ಪ್ರಸಾದ್‌ರವರೆಗೆ ಆರು ಲೇಖಕಿಯರು ಬರೆದಿರುವ ಕಥೆಗಳಲ್ಲಿ ಕಂಡುಬರುವ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಲಾಗಿದೆ.

ಮೇಲಿನ ಸಮಸ್ಯೀಕರಣವನ್ನು ಇಟ್ಟುಕೊಂಡು ಈ ಮಹಾಪ್ರಬಂಧದ ಉದ್ದೇಶವನ್ನು ಕೆಳಗಿನಂತೆ ಗುರುತಿಸಿಕೊಳ್ಳಲಾಗಿದೆ.

೧. ತಾಯ್ತನ, ಗೃಹಿಣಿತ್ವ, ಮಗಳು – ಸೊಸೆ, ವೈಧವ್ಯ, ವೃದ್ಧಾಪ್ಯ, ಲೈಂಗಿಕತೆ ಮೊದಲಾದ ಕೌಟುಂಬಿಕ ಸಮಸ್ಯೆಗಳನ್ನು ಗುರುತಿಸಲಾಗಿದೆ.

೨. ಸಾಮಾಜಿಕ, ಧಾಮಿಕ ಕಟ್ಟುಪಾಡುಗಳಾದ ಬಡತನ, ಜಾತಿ-ಧರ್ಮ, ಶಿಕ್ಷಣ, ವಿಷಯಗಳಲ್ಲಿ ಇರುವ ವ್ಯತ್ಯಾಸಗಳನ್ನು ಕಂಡುಕೊಳ್ಳಲಾಗಿದೆ.

೩. ಸ್ತ್ರೀಯರ ಶೋಷಣೆಗೆ ಕಾರಣವಾದ ಸಾಮಾಜಿಕ, ಶಿಕ್ಷಣ, ಧಾರ್ಮಿಕ ಮೌಲ್ಯಗಳನ್ನು ಪ್ರಶ್ನಿಸುವ ಮನೋಭಾವ ಕತೆಗಾರ್ತಿಯರಲ್ಲಿ ಹೇಗೆ ಕಂಡುಕೊಳ್ಳಲಾಗಿದೆ ಎಂಬುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

೪. ಮಹಿಳೆಯರನ್ನು ಕುರಿತು ಮಹಿಳೆಯರೇ ಬರೆದಿರುವ ಕಥೆಗಳಲ್ಲಿ ಭಾಷಿಕ ಅನನ್ಯತೆ, ಸೌಹಾರ್ದತೆಯ ನೆಲೆಗಳನ್ನು ವಿಮೋಚನೆಯ ನೆಲೆಗಳನ್ನು ವಿವೇಚಿಸುವುದು ಆಶಯವಾಗಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಥಾಪ್ರಕಾರವು ವಿಶಿಷ್ಟವಾಗಿವೆ. ಕಥೆಯು ಪಾಶ್ಚಾತ್ಯ ಪ್ರಭಾವವನ್ನು ಹೊಂದಿದ್ದರೂ, ಕನ್ನಡ ಸಾಹಿತ್ಯದಲ್ಲಿ ಬಹಳ ಬೆಳವಣಿಗೆಯನ್ನು ಕಂಡಿದೆ. ಸಹಜವಾಗಿ ಕನ್ನಡ ಕಥೆಗಳು ತಮ್ಮ ಒಡಲಾಳದ ಅಳಲನ್ನು ಓದುಗರ ಮುಂದೆ ತೋಡಿಕೊಳ್ಳುತ್ತದೆ. ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯ, ಮತ್ತು ಸ್ತ್ರೀ ಸಂವೇದನೆ ಮುಸ್ಲಿಂ ಸಂವೇದನೆಗಳ ಕಾಲಘಟ್ಟಗಳನ್ನು ಒಳಗೊಂಡಿದೆ.

ಆಧುನಿಕ ಸಂವೇದನೆಗಳಿಗೆ ತಕ್ಕ ರೂಪವಾಗಿದ್ದರೂ ನಿಜವಾದ ಅರ್ಥದಲ್ಲಿ ಅತ್ಯಂತ ಕ್ಷಿಪ್ರವಾಗಿ ವೈವಿಧ್ಯಪೂರ್ಣವಾಗಿ ಬೆಳವಣಿಗೆಯ ಸ್ಥಿತ್ಯಂತರಗಳು ಇಲ್ಲಿ ಕಂಡುಬರುತ್ತವೆ. ತೊಂಭತ್ತರ ದಶಕದಲ್ಲಿ ಸೃಷ್ಟಿಯಾದ ಆಧುನಿಕ ಕನ್ನಡ ಕಥಾಸಾಹಿತ್ಯ ಕೂಡ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಒತ್ತಡಗಳನ್ನು ಸಂಘರ್ಷಿಸಿಯೇ ಸೃಷ್ಟಿಯಾದ ಕಥಾಸಾಹಿತ್ಯವಾಗಿದೆ.

ತೊಂಭತ್ತರ ದಶಕದಲ್ಲಿ ಸೃಷ್ಟಿಯಾದ ಕಥಾಸಾಹಿತ್ಯಕ್ಕೆ ಒಂದು ಹೊಸತಿರುವು ಬಂದದ್ದು ಆ ಕಾಲದಲ್ಲಿ ಹುಟ್ಟಿದ ಹೊಸ ಲೇಖಕ ಮತ್ತು ಲೇಖಕಿಯರಿಂದಲೇ. ಹೆಣ್ಣುಮಕ್ಕಳ ಬದುಕಿನ ಸಂಕೀರ್ಣದ ಕಡೆಗೆ ಆಸಕ್ತಿಯಿಂದ ನೋಡುತ್ತಾ ತಮ್ಮ ಅನುಭವಗಳನ್ನು ಭಾಷೆಯ ಮೂಲಕ ಕಟ್ಟುವ ಪ್ರಯತ್ನ ಮಾಡಿದ್ದಾರೆ.

ಪುರುಷ ಪ್ರಧಾನ ಸಮಾಜದ ಪರಂಪರಾಗತ ಮೌಲ್ಯಗಳನ್ನು ಪ್ರಶ್ನಿಸುವ, ವಿರೋಧಿಸುವ ಅವಲೋಕಿಸುವ ಸ್ತ್ರೀಪರವಾದ ಕಾಳಜಿಗಳನ್ನು ಕೇಂದ್ರವಾಗಿರಿಸಿಕೊಂಡು ಕಥೆಗಳು ರಚನೆಯಾಗ ತೊಡಗಿದವು. ಮಹಿಳೆಗೆ ಧರ್ಮ ಮತ್ತು ಪ್ರಭುತ್ವದ ನೆಲೆಯೊಳಗೆ ಹೆಣ್ಣನ್ನು ಬಂಧಿಸಲಾದ ಸಂದರ್ಭಗಳಲ್ಲಿ ಅವಳಿಗೆ ತನ್ನದೇ ಆದ ಕಟ್ಟುಪಾಡುಗಳನ್ನು ವಿಧಿಸಿದರು. ಆದರೆ ಶಿಕ್ಷಣ ಈ ಕಟ್ಟುಪಾಡುಗಳನ್ನು ಮೀರಿ ತಾವು ಕಂಡುಕೊಂಡ ಅನುಭವಗಳನ್ನು, ಅಲ್ಲದೇ ಕಣ್ಮುಂದೆ ನಡೆದ ವಿಚಾರಗಳನ್ನು ಕಥೆಗಳ ಮೂಲಕ ಬರೆದರು. ಸ್ತ್ರೀಪರ ಕಾಳಜಿಗಳನ್ನು ಕೇಂದ್ರವಾಗಿರಿಸಿಕೊಂಡು ಕಥೆ, ಕಾದಂಬರಿಗಳನ್ನು ರಚಿಸಿದರು. ನವೋದಯ ಸಾಹಿತ್ಯದ ಸಂದರ್ಭದಲ್ಲಿ ತಿರುಮಲಾಂಬರವರು, ಕೊಡಗಿನ ಗೌರಮ್ಮನವರು ಕನ್ನಡ ಕಥೆಗಳನ್ನು ಬರೆಯತೊಡಗಿದರೆ ಪ್ರಗತಿಶೀಲ ಸಂದರ್ಭದಲ್ಲಿ ತ್ರಿವೇಣಿ, ಅನುಪಮಾ ನಿರಂಜನರು ಸಾಹಿತ್ಯ ಸೃಷ್ಟಿಗೆ ತೊಡಗಿದರು. ನವ್ಯ ಸಂದರ್ಭದಲ್ಲಿ ರಾಜಲಕ್ಷ್ಮಿ ಎನ್. ರಾವ್, ವೀಣಾ ಶಾಂತೇಶ್ವರರವರು, ಹೀಗೆ ಬೆರಳೆಣಿಕೆಯಷ್ಟೇ ಮಹಿಳೆಯರು ಬರವಣಿಗೆಯನ್ನು ತೊಡಗಿಸಿಕೊಂಡರು. ಮುಂದೆ ದಲಿತ ಮತ್ತು ಬಂಡಾಯದ ಸಂದರ್ಭದಲ್ಲಿ ಅನೇಕ ಕಥೆಗಾರ್ತಿಯರು ಬರವಣಿಗೆಗೆ ತೊಡಗಿಸಿಕೊಂಡರು. ೧೯೭೦ರ ನಂತರ ಅನೇಕ ಕತೆಗಾರ್ತಿಯರು ಮಹಿಳಾಪರ ಕಾಳಜಿಯನ್ನು ಇಟ್ಟುಕೊಂಡು ಸ್ತ್ರೀ ಸಂವೇದನೆ, ಮುಸ್ಲಿಂ ಸಂವೇದನೆಯ ನೆಲೆಗಟ್ಟಿನಲ್ಲಿ ಕಥೆಗಳನ್ನು ರಚಿಸಿದರು. ಕನ್ನಡದ ಮಹತ್ವದ ಲೇಖಕಿಯರಲ್ಲಿ ಕರಾವಳಿಯವರೂ ಇದ್ದಾರೆ.

ಕರಾವಳಿ ಭಾಗದ ಕಥಾಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು ಕುರಿತಾಗಿ ಅಧ್ಯಯನ ಕೈಗೊಳ್ಳುವ ದೃಷ್ಟಿಯಿಂದ ದಕ್ಷಿಣಕನ್ನಡ ಜಿಲ್ಲೆಯ ಬಡಗು ಕರಾವಳಿ ಭಾಗದ ವೈದೇಹಿ, ಹಿರಿಯ ಕತೆಗಾರ್ತಿ ಗಂಗಾಪಾದೇಕಲ್, ಕರಾವಳಿಯಲ್ಲಿ ಕಥಾಸಾಹಿತ್ಯಕ್ಕೆ ಹೊಸ ಸಂವೇದನೆಯೊಂದನ್ನು ಪರಿಚಯಿಸಿದ ಸಾರಾ ಅಬೂಬಕ್ಕರ್, ಮೂಲತಃ ದ.ಕನ್ನಡದವರೇ ಆದ ಮುಂಬೈಯಂತಹ ಮಹಾನಗರದಲ್ಲಿ ಬದುಕಬೇಕಾದ ಅನಿವಾರ್ಯತೆಯಲ್ಲಿ ಬರೆಯುತ್ತಿರುವ ಮಿತ್ರಾವೆಂಕಟ್ರಾಜ್, ಕರಾವಳಿಯ ಎಚ್. ನಾಗವೇಣಿ ಹಾಗೂ ಕಾಸರಗೋಡಿನವರಾದ ಅನುಪಮಾ ಪ್ರಸಾದ್ ಇವರುಗಳ ಮೂಲಕ ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದಲ್ಲಿ ಕತೆಗಳ ಮೂಲಕ ವ್ಯಕ್ತವಾದ ಸ್ತ್ರೀಸಂವೇದನೆಗಳನ್ನು ಗುರುತಿಸುವುದು.

ಸ್ತ್ರೀಯರ ಶೋಷಣೆಗೆ ಕಾರಣವಾದ ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ಪ್ರಶ್ನಿಸುವ ಮನೋಭಾವ ಕತೆಗಾರ್ತಿಯರಲ್ಲಿ ಹೇಗಿದೆ? ಆರ್ಥಿಕ, ಸಾಮಾಜಿಕ, ಅಸಮಾನತೆ, ಸ್ತ್ರೀಶಿಕ್ಷಣ ಹಕ್ಕು,

ಸ್ವಾತಂತ್ರ್ಯ, ಜಾತಿವ್ಯವಸ್ಥೆ, ಧರ್ಮ ಮುಂತಾದ ಸಮಸ್ಯೆಗಳನ್ನು ಕಥೆಗಳಲ್ಲಿ ಪ್ರಧಾನ ವಸ್ತುವಾಗಿ ಲೇಖಕಿಯರು ಹೇಗೆ ಕಾಣುತ್ತಾರೆ ಎಂಬ ಅಂಶವನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

## ೧.೪ ಅಧ್ಯಯನದ ವಿಧಾನ

ಸ್ವಾತಂತ್ರ್ಯಪೂರ್ವದ ಆರಂಭದ ಹಂತದಲ್ಲಿ ದ.ಕ.ದಲ್ಲಿ ಬರೆಯತೊಡಗಿದ ಲೇಖಕಿಯರಲ್ಲಿ ಹೆಚ್ಚಿನವರು ಮೇಲ್ವರ್ಗದವರೇ ಆಗಿದ್ದರು. ಬಾಲ್ಯವಿವಾಹ ಅಸಮ ವಿವಾಹ, ವಿಧವಾ ಕೇಶಮುಂಡನ, ವಿಧವಾ ಸಮಸ್ಯೆ, ವರದಕ್ಷಿಣೆಯ ಸಮಸ್ಯೆ, ಸ್ತ್ರೀ ವಿದ್ಯಾಭ್ಯಾಸ, ಬಡತನ ಪ್ರೌಢವಿವಾಹಗಳಿಗೆ ಪ್ರೋತ್ಸಾಹ ಮುಂತಾದ ವಿಚಾರಗಳೇ ಮೊದಲ ತಲೆಮಾರಿನ ಲೇಖಕಿಯರ ಕಥಾಸಾಹಿತ್ಯದ ಆಶಯಗಳಾಗಿದ್ದವು.

ಎರಡನೇಯ ತಲೆಮಾರಿನ ಕಾಲಕ್ಕೆ ಹುಟ್ಟಿಕೊಂಡ ಸ್ವಾತಂತ್ರ್ಯ ಚಳುವಳಿ ಅದರ ಭಾಗವಾಗಿದ್ದ ಸಮಾಜ ಸುಧಾರಣಾ ಚಳುವಳಿಗಳು ತುಂಬಾ ಸಕ್ರಿಯವಾಗಿದ್ದ ಕಾಲ. ಮಹಿಳೆಯರು ಮನೆಯ ಸಾಹಿತ್ಯಿಕ ನೆಲೆಯಿಂದ ಸ್ಫೂರ್ತಿಗೊಂಡು ಬರೆಯಲಾರಂಭಿಸಿದರು. ತಮಗೆ ಸಿಕ್ಕಿದ ಸೀಮಿತ ಚೌಕಟ್ಟಿನಲ್ಲಿ ತಮ್ಮ ಮನೆ ವಾರ್ತೆಯ ಎಲ್ಲಾ ಹೊರೆಗಳೊಂದಿಗೆ ಸಮಯವನ್ನು ಹೊಂದಾಣಿಕೆ ಮಾಡಿಕೊಂಡು ಬರೆದರು.

ಮೂರನೇಯ ತಲೆಮಾರಿನ ಬರಹಗಾರರಲ್ಲಿ ಕರಾವಳಿಯ ಬರಹಗಾರ್ತಿಯರೂ ಇದ್ದಾರೆ. ೭೦ರ ದಶಕದ ನಂತರ ಬಂದ ಲೇಖಕಿಯರು ತಮ್ಮ ಸುತ್ತಮುತ್ತಲ ಸ್ತ್ರೀಯರು ಅನುಭವಿಸುವ ನೋವು, ಪುರುಷ, ದಬ್ಬಾಳಿಕೆ, ಜಾತಿವ್ಯವಸ್ಥೆ, ಲಿಂಗತಾರತಮ್ಯ, ಪ್ರೇಮ ಕಾಮ ಮುಂತಾದ ಜೀವನದಲ್ಲಿನ ಸತ್ಯಸಂಗತಿಗಳನ್ನು ಕಥಾವಸ್ತುವನ್ನಾಗಿ ಇಟ್ಟುಕೊಂಡು ಬರೆಯತೊಡಗಿದರು. ಸ್ತ್ರೀಪರ ಕಾಳಜಿಗಳನ್ನು ಕೇಂದ್ರವಾಗಿರಿಸಿಕೊಂಡು ಕಥೆ, ಕಾದಂಬರಿ, ಕವನಗಳನ್ನು ರಚಿಸಿದರು, ಪತ್ರಿಕೆಗಳನ್ನು ನಡೆಸಿದರು. ಮಹಿಳಾ ಸಾಹಿತ್ಯವನ್ನು ಬಹಳವಾಗಿ ಪ್ರಭಾವಿಸಿರುವುದು ಸ್ತ್ರೀವಾದವೇ ಆದರೂ ಅದು ಕಾವ್ಯದಲ್ಲಿ ಕಂಡಷ್ಟು ಪ್ರಖರವಾಗಿ ಕಥಾ ಸಾಹಿತ್ಯದಲ್ಲಿ ಕಾಣುವುದಿಲ್ಲ. ಅಂದರೆ, ಹೆಣ್ಣಿನ ವೈಯಕ್ತಿಕ ತಾಕಲಾಟಗಳ ಚಿತ್ರಣ ಎಂಬ ಅರ್ಥದಲ್ಲಿ ಅದು ಕಥೆಗಳಲ್ಲಿ ಹೆಚ್ಚಾಗಿ ಕಾಣುವುದಿಲ್ಲ. ಬದಲಿಗೆ ಇಲ್ಲಿ ಸ್ತ್ರೀ ಪರವಾದ ಸಾಮಾಜಿಕ ಕಾಳಜಿಗಳು ಮುಖ್ಯವಾಗಿವೆ. ಈ ಕಾಳಜಿ ವ್ಯಕ್ತವಾಗಿರುವ ರೀತಿಯೂ ಲೇಖಕಿಯಿಂದ ಲೇಖಕಿಗೆ ಭಿನ್ನ ಆದರೆ ಕಥಾ ಸಾಹಿತ್ಯದಲ್ಲಿ ವಿಪುಲ ಹಾಗೂ ವಿಭಿನ್ನ ಪ್ರಾದೇಶಿಕ ಅನುಭವಗಳು

ದಾಖಲಾಗಿವೆ. ಈ ಶತಮಾನದ ಆರಂಭದಿಂದ ಈ ವರೆಗೂ ಕಥೆ ಲೇಖಕಿಯರ ಪ್ರಿಯವಾದ ಅಭಿವ್ಯಕ್ತಿ ಪ್ರಕಾರವಾಗಿ ಬೆಳೆದು ಬಂದಿದೆ. ಕಥನ ಕಲೆ ಹೆಣ್ಣಿನ ಜನ್ಮಜಾತ ಗುಣ ಎಂದು ಹೇಳಬಹುದಾದಷ್ಟು ಅದು ಆಕೆಗೆ ಕರಗತ.

ಸ್ತ್ರೀಯರು ಕಥೆ ಬರೆದವರು ಮಾತ್ರವಲ್ಲ, ಜನಪದ ಕಥೆಗಳನ್ನು ಹೇಳುವುದರಲ್ಲಿ ಸಿದ್ಧ ಹಸ್ತರು ಎಂಬುದನ್ನು ಗಮನಿಸಬಹುದು. ಸಾಹಿತ್ಯದ ಅಭಿವ್ಯಕ್ತಿಗೆ ಜನಜೀವನದ ಅಥವಾ ಸಂಸ್ಕೃತಿಯ ಆಧಾರ ಮುಖ್ಯವಾಗಿರುತ್ತದೆ. ಹೀಗೆ ಒಂದು ಕಾಲಮಾನದಲ್ಲಿ ರಚನೆಯಾದ ಕಥೆಗಳಲ್ಲಿ ವಿಭಿನ್ನ ಸಂಸ್ಕೃತಿ ಆಧುನಿಕ ಶಿಕ್ಷಣ, ಪ್ರತಿರೋಧ ಮತ್ತು ಭಾಷಿಕ ಅನನ್ಯತೆಗಳನ್ನು ಅಧ್ಯಯನ ಮಾಡುವುದು ಇಲ್ಲಿನ ಉದ್ದೇಶವಾಗಿದೆ. ಅಲ್ಲದೇ ಸನಾತನ ನಂಬಿಕೆಗಳನ್ನು ಮೌಲ್ಯಗಳನ್ನು ಚರ್ಚಿಸುವ ಮೂಲಕ ಎಲ್ಲವನ್ನು ಪ್ರಶ್ನಿಸತೊಡಗಿದರು. ಸ್ತ್ರೀವಾದವು ಒಂದು ಹೆಣ್ಣಿನ ಸರ್ವತೋಮುಖ ಬೆಳವಣಿಗೆಗೆ ಆಗಬೇಕು. ಅವಳಿಗೆ ಎಲ್ಲಾ ರೀತಿಯಲ್ಲೂ ಸಮಾಜದಲ್ಲಿ ಪುರುಷನಷ್ಟೇ ಸಮಾನತೆ ಲಭ್ಯವಾಗಬೇಕೆಂದು ಸ್ತ್ರೀವಾದ ಪ್ರತಿಪಾದಿಸುತ್ತದೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದ, ಸಾಮಾಜಿಕ ವಿಧಾನ, ಆರ್ಥಿಕ ಚಿಂತನೆಗಳನ್ನು ಇಟ್ಟುಕೊಂಡು ಅದರಲ್ಲೂ ಮುಖ್ಯವಾಗಿ ಸ್ತ್ರೀವಾದದ ಹಿನ್ನೆಲೆಯಲ್ಲಿ ಕರಾವಳಿ ಸಾಹಿತ್ಯವನ್ನು ಅಧ್ಯಯನ ಮಾಡಲಾಗಿದೆ.

## ೧.೫ ಕರಾವಳಿ ಕಥೆಗಳ ಕುರಿತು ಈವರೆಗಿನ ಅಧ್ಯಯನದ ಸಮೀಕ್ಷೆ

ಕರಾವಳಿ ಕಥಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು ಲೇಖನ ರೂಪದ ಬರಹಗಳು ಬಂದಿವೆ. ದ.ಕ. ಜಿಲ್ಲೆಯ ಸಣ್ಣ ಕಥೆಗಳನ್ನು ಕೇಂದ್ರೀಕರಿಸಿಕೊಂಡು ಡಾ. ಸಬೀಹಾ ಭೂಮಿಗೌಡರು "ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣಕಥೆಗಳ ಹುಟ್ಟು ಮತ್ತು ಬೆಳವಣಿಗೆ" (ಮಂಗಳೂರು ವಿಶ್ವವಿದ್ಯಾನಿಲಯ ೧೯೯೨) ಎಂಬ ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ.

ಎಂ. ಮನೋರಮಾ ಭಟ್‌ರವರು ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ೧೯೯೯ರಲ್ಲಿ ಪ್ರಕಟವಾದ ಲೇಖ-ಲೋಕ ೨ ರಲ್ಲಿ (ಕರ್ನಾಟಕ ಲೇಖಕಿಯರ ಸಂಘ, (ರಿ), ಬೆಂಗಳೂರು) ಕರಾವಳಿಯ ಕಥೆಗಾರ್ತಿಯರರಾದ ಪ್ರೇಮಾ ಭಟ್ ಹಾಗೂ ವೈದೇಹಿಯವರ ಜೀವನ – ಸಾಧನೆಗಳ ಕುರಿತಾದ ಮಾಹಿತಿಗಳಿವೆ. ೧೯೯೯ ರಲ್ಲಿ ಡಾ. ಗಾಯತ್ರಿ ನಾವಡರವರ ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು ಎಂಬ ಸಂಶೋಧನಾ ಕೃತಿ ಪ್ರಕಟವಾಗಿದೆ.

"ಪ್ರೇಮಾಭಟ್ ಸಾಹಿತ್ಯದ ನೆಲೆಗಳು" ಎಂಬ ಪುಸ್ತಕವನ್ನು ಡಾ. ಶಶಿಕಲಾ ಡಿ.ಎಸ್. ಪ್ರಕಟಿಸಿರುತ್ತಾರೆ (೨೦೦೨), ಬಿ. ಜನಾರ್ಧನ ಭಟ್‌ರವರು 'ದಕ್ಷಿಣ ಕನ್ನಡದ ಶತಮಾನದ ಕಥೆಗಳು' ಎಂಬ ಪುಸ್ತಕವನ್ನು ೨೦೦೩ ರಲ್ಲಿ ಸಂಪಾದಿಸಿದ್ದಾರೆ. ಗಂಗಾ ಪಾದೇಕಲ್‌ರವರ ಕಥೆಗಳ ಕುರಿತಾದ ಅಧ್ಯಯನಕ್ಕೆ ಶೀಲಾ ಅವರು ಎಂ.ಫಿಲ್ ಪದವಿಯನ್ನು ೨೦೦೩ ರಲ್ಲಿ ಕಣ್ಣೂರು ವಿ.ವಿ. ಯಿಂದ ಪಡೆದಿರುತ್ತಾರೆ.

೨೦೦೩ರಲ್ಲಿ ಪ್ರಕಟವಾದ 'ಲೇಖ-ಲೋಕ' ೪ರಲ್ಲಿ (ಕರ್ನಾಟಕ ಲೇಖಕಿಯರ ಸಂಘ, (ರಿ) ಬೆಂಗಳೂರು' ಕರಾವಳಿಯ ಕಥೆಗಾರ್ತಿ ಗಂಗಾ ಪಾದೇಕಲ್‌ರವರ 'ಜೀವನ-ಸಾಧನೆ'ಗಳ ಕುರಿತಾದ ಮಾಹಿತಿಗಳಿವೆ. 'ವೈದೇಹಿಯವರ ಸಾಹಿತ್ಯ – ಒಂದು ಅಧ್ಯಯನ' ಎಂಬ ವಿಷಯದಲ್ಲಿ ಡಾ. ಸುರೇಖಾ ಕೆ. ಪ್ರೌಢ ಪ್ರಬಂಧವನ್ನು ರಚಿಸಿರುತ್ತಾರೆ. (ಮೈಸೂರು ವಿಶ್ವವಿದ್ಯಾನಿಲಯ, (೨೦೦೩), ಡಾ. ನಿಕೇತನರವರ ಸ್ತ್ರೀದೃಷ್ಟಿ (೨೦೦೫) ಕೃತಿಯಲ್ಲಿ ಕರಾವಳಿ ಸಾಹಿತ್ಯದ ಉಲ್ಲೇಖವಿದೆ. ಡಾ. ಎಚ್. ಎಸ್. ಶ್ರೀಮತಿಯವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾದ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ' (೨೦೦೬) ರಲ್ಲಿ ಕರಾವಳಿಯ ಲೇಖಕಿಯರ ಬರಹಗಳ ಕುರಿತಾದ ವಿಶ್ಲೇಷಣೆಗಳು ಸಿಗುತ್ತವೆ.

೨೦೦೬ರಲ್ಲಿ ಡಾ. ಕೆ. ಚಿನ್ನಪ್ಪಗೌಡ ಹಾಗೂ ಡಾ. ಸಬೀಹಾರವರ ಸಂಪಾದಕತ್ವದಲ್ಲಿ 'ಕರಾವಳಿಯ ಕತೆಗಳು' ಎಂಬ ಪುಸ್ತಕ ಪ್ರಕಟವಾಗಿದ್ದು (ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿ.ವಿ. ಪ್ರಕಟಣೆ) ೧೯೩೦ ರಿಂದ ೧೯೮೭ ರ ಅವಧಿಯ ಪತ್ರಿಕೆಗಳಿಂದ ಆಯ್ದ ಕಥೆಗಳು ಇದರಲ್ಲಿವೆ. ೨೦೦೭ ರಲ್ಲಿ ಬಿ. ಜನಾರ್ಧನ ಭಟ್ ಸಂಪಾದಿಸಿರುವ 'ಉಡುಪಿ ಜಿಲ್ಲೆಯ ಶತಮಾನದ ಕಥೆಗಳು' ಎಂಬ ಪುಸ್ತಕದಲ್ಲಿ ಉಡುಪಿ ಜಿಲ್ಲೆಗೆ ಸೇರಿದ ಲೇಖಕಿಯರ ಕಥೆಗಳಿವೆ.

೨೦೦೭ರಲ್ಲಿ ಉಡುಪಿಯಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಕರಾವಳಿ ಲೇಖಕಿಯರ ಬಗೆಗಿನ ಕೃತಿಗಳು ಬಿಡುಗಡೆಗೊಂಡಿವೆ. ಸುಶೀಲಾ ಆರ್. ರಾವ್‌ರವರ ಆನಂದಿ ಸದಾಶಿವ ರಾವ್ ಬದುಕು-ಬರಹ ಎಂಬ ಕೃತಿಯನ್ನು ಬರೆದಿದ್ದಾರೆ.

ಶ್ರೀಮತಿ ಸಾವಿತ್ರಿ ಮನೋಹರ್‌ರವರ 'ಇಂದಿರಾ ಹಾಲಂಬಿ ಬದುಕು ಬರಹ' ಎಂಬ ಕೃತಿ, ಶಾಲಿನಿ ಬಿ. ಪಂಡಿತ್‌ರವರ 'ಸುಮತಿ ಪಾಂಗಾಳ ಬದುಕು-ಬರಹ ಎಂಬ ಕೃತಿ, ಅ.ನಾ.

ಪೂರ್ಣಿಮಾರವರ 'ಮನೋರಮಾ ಎಂ. ಭಟ್ ಬದುಕು-ಬರಹ' ಎಂಬ ಕೃತಿ, ಬಿ.ಎಂ. ರೋಹಿಣಿಯವರ 'ಲಲಿತಾ ಆರ್. ರೈ ಬದುಕು-ಬರಹ' ಎಂಬ ಕೃತಿ, ನಾಗವೇಣಿ ಮಂಚಿಯವರ 'ಬೆಳ್ಳೆ ಸೀತಾರತ್ನ ಬದುಕು-ಬರಹ' ಎಂಬ ಕೃತಿ, ಗಂಗಾ ಪಾದೇಕಲ್ ರವರ 'ಮುಳಿಯ ಮೂಕಾಂಬಿಕೆ ಬದುಕು-ಬರಹ ಎಂಬ ಕೃತಿ – ಹೀಗೆ ಕೃತಿಗಳು ಪ್ರಕಟವಾಗಿದ್ದು ಇವುಗಳಲ್ಲಿ ಆಯಾ ಲೇಖಕಿಯರ ಬದುಕು-ಬರಹಕ್ಕೆ ಸಂಬಂಧಿಸಿದ ಮಾಹಿತಿಗಳಿವೆ.

ಶೇಖರ ಅಜೆಕಾರ್‌ರವರು ಕರಾವಳಿಯ ತುಳು ಲೇಖಕಿ ಜಯಂತಿ ಎಸ್. ಬಂಗೇರವರ ಕುರಿತ 'ಸಾಹಿತ್ಯ ಸಿರಿ' (೨೦೦೭) ಎಂಬ ಪುಸ್ತಕವನ್ನು ಪ್ರಕಟಿಸಿರುತ್ತಾರೆ. ಉಷಾ ಕಟ್ಟೇಮನೆ ಹಾಗೂ ಡಾ. ಪುರುಷೋತ್ತಮ ಬಿಳಿಮಲೆಯವರ ಸಂಪಾದಕತ್ವದಲ್ಲಿ 'ಕಡಲ ತಡಿಯ ತಲ್ಲಣಗಳು' (೨೦೦೯) ಎಂಬ ಕೃತಿ ಬಂದಿದೆ. ಇದರಲ್ಲಿ ಕರಾವಳಿ ಲೇಖಕ ಲೇಖಕಿಯರ ಉಲ್ಲೇಖಗಳಿವೆ. ೨೦೦೯ರಲ್ಲಿ ಸಾರಾ ಅಬೂಬಕ್ಕರ್‌ರವರ ಅಭಿನಂದನಾ ಗ್ರಂಥ 'ಚಂದ್ರಗಿರಿ' ಡಾ. ಸಬೀಹಾರವರ ಸಂಪಾದಕತ್ವದಲ್ಲಿ ಪ್ರಕಟವಾಗಿದೆ. ಈ ಅಭಿನಂದನಾ ಗ್ರಂಥದಲ್ಲಿ ಸಾರಾರವರ ಸಮಗ್ರ ಸಾಹಿತ್ಯದ ಅವಲೋಕನವಿದೆ.

ಟಿ.ಪಿ. ಅಶೋಕ್‌ರವರು 'ವೈದೇಹಿ ವಾಚಿಕೆ' (೨೦೦೯) ಎಂಬ ಕೃತಿಯನ್ನು ಪ್ರಕಟಿಸಿದ್ದು, ಇದರಲ್ಲಿ ವೈದೇಹಿಯವರ ಸಾಹಿತ್ಯ ಹಾಗೂ ಸಂದರ್ಶನದ ಆಯ್ದ ಭಾಗಗಳಿವೆ. ಡಾ. ಶೈಲಾ ಯಂ. ರವರು 'ಮಹಿಳೆನೆಲೆ ಬೆಲೆ' (೨೦೧೦) ಎಂಬ ಪುಸ್ತಕದಲ್ಲಿ ಸಾರಾ ಅಬೂಬಕ್ಕರ್, ಎ.ಪಿ. ಮಾಲತಿ ಹಾಗೂ ಡಾ. ಸಬಿಹಾ ಭೂಮಿಗೌಡರ ಬದುಕು ಮತ್ತು ಸಾಹಿತ್ಯ ಸಾಧನೆಗಳ ಕುರಿತಾಗಿ ವಿವರಿಸಿದ್ದಾರೆ.

ಬಿ.ಕೆ. ಮಂಜುಳಾರವರ "ಆಧುನಿಕ ಮಹಿಳಾ ಕಥಾ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ಒಂದು ಅಧ್ಯಯನ" ಎಂಬ ಸಂಶೋಧನಾ ಮಹಾಪ್ರಬಂಧವನ್ನು ರಚಿಸಿದ್ದಾರೆ. ಈ ಪ್ರಬಂಧದಲ್ಲಿ ಸ್ತ್ರೀವಾದದ ಬಗೆಗಳು, ಸ್ತ್ರೀ ವಾದದ ಉಗಮ, ಬೆಳವಣಿಗೆ ಮತ್ತು ವ್ಯಾಪ್ತಿ, ಭಾರತೀಯ ಸ್ತ್ರೀ ವಾದ, ಕರ್ನಾಟಕ ಸ್ತ್ರೀವಾದಿ ಚಿಂತನೆಯ ಬಗ್ಗೆ ಚರ್ಚಿಸಲಾಗಿದೆ. ಸಾಮಾಜಿಕ ತಾರತಮ್ಯದಲ್ಲಿ, ಸಮಾಜದಲ್ಲಿ ಮಹಿಳೆಯರು ಹಲವಾರು ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆ. ವಿವಾಹದ ಸಮಸ್ಯೆ, ವಿಚ್ಛೇದನ, ವರದಕ್ಷಿಣೆ, ಭ್ರೂಣಹತ್ಯೆ, ಶಿಶುಹತ್ಯೆ,ಅತ್ಯಾಚಾರ, ವೈಧವ್ಯ ಮೊದಲಾದ ಸಮಸ್ಯೆಗಳ ಬಗ್ಗೆ ಚರ್ಚಿಸಲಾಗಿದೆ.

'ವಿಜಯಾನ್ವೇಷಣೆ' (ಸಂ) ಡಾ। ವಿಜಯಾ ದಬ್ಬೆ ಅಭಿನಂದನೆ ಗ್ರಂಥ ಸಮಿತಿ (೨೦೦೪) ಈ ಪುಸ್ತಕದಲ್ಲಿ ಕರಾವಳಿ ಲೇಖಕಿಯರ ಬರಹಗಳ ಬಗ್ಗೆ ಲೇಖನಗಳಿವೆ, ೨೦೦೬ರಲ್ಲಿ ಎಂ.

ರಂಗಸ್ವಾಮಿಯವರು ಸ್ತ್ರೀವಾದಿ ಹಿನ್ನೆಲೆಯಲ್ಲಿ ಕನ್ನಡ ಮತ್ತು ತಮಿಳು ಮಹಿಳಾ ಸಾಹಿತ್ಯದ ಅಧ್ಯಯನ" ಎಂಬ ಸಂಶೋಧನಾ ಪ್ರಬಂಧವನ್ನು ರಚಿಸಿದ್ದಾರೆ. ೨೦೦೦ಲರಲ್ಲಿ ಕೆ.ಎಂ. ವಿಜಯಲಕ್ಷ್ಮಿಯವರು ಹೊಸಗನ್ನಡದ ೭೫ ಲೇಖಕಿಯರು ಎಂಬ ಪುಸ್ತಕವನ್ನು ರಚಿಸಿದ್ದಾರೆ. ಇದರಲ್ಲಿ ಕರಾವಳಿ ಲೇಖಕಿಯರ ಬದುಕು ಬರಹ ಮತ್ತು ಸಾಧನೆ ಬಗ್ಗೆ ಲೇಖನಗಳಿವೆ.

ಕನ್ನಡ ವಿಮರ್ಶೆ ಮತ್ತು ಸಂಶೋಧನೆಗೆ ಸ್ತ್ರೀವಾದಿ ತಾತ್ವಿಕತೆಯನ್ನು ನೀಡುವ ಪ್ರಯತ್ನವು ಹೊಸಗನ್ನಡದಲ್ಲಿ ಸಾಕಷ್ಟು ನಡೆದಿವೆ. ಡಾ. ಎಚ್. ಎಸ್. ಶ್ರೀಮತಿ, ಡಾ. ಬಿ. ಎನ್. ಸುಮಿತ್ರಾಬಾಯಿ, ಡಾ. ಪ್ರೀತಿ ಶುಭಚಂದ್ರ, ಡಾ. ಎಸ್. ಉಷಾ, ಡಾ. ಎಂ. ಇಂದಿರಾ, ಡಾ. ಮಂಗಳಾ ಪ್ರಿಯದರ್ಶಿನಿ, ಡಾ. ಎಸ್. ವಿ. ಪ್ರಭಾವತಿ, ಡಾ. ಕೇಶವ ಶರ್ಮ, ಡಾ. ಹಾಲತಿ ಸೋಮಶೇಖರ ಮುಂತಾದವರ ಕೃತಿಗಳು ಸ್ತ್ರೀವಾದಿ ಚಳವಳಿ ಮತ್ತು ಸಿದ್ಧಾಂತಗಳ ಪರಿಚಯವನ್ನು ಕನ್ನಡ ಸಾರಸ್ವತ ಲೋಕಕ್ಕೆ ಮಾಡಿಕೊಟ್ಟಿದೆ. ಡಾ. ಸಬೀಹಾ ಭೂಮಿಗೌಡ, ಡಾ. ವಿಜಯ ದಬ್ಬೆ, ಎಚ್. ಎಚ್. ಶ್ರೀಮತಿ, ಡಾ. ಪ್ರೀತಿ ಶುಭ ಚಂದ್ರ, ಆಶಾದೇವಿ, ಎಲ್. ಸಿ. ಸುಮಿತ್ರಾ, ಯು. ಮಹೇಶ್ವರಿ, ಗಾಯತ್ರಿ ನಾವಡ, ಎಲ್. ಈ. ಮೀರಾ, ಎನ್. ಗಾಯತ್ರಿ ಮುಂತಾದವರು ಸ್ತ್ರೀವಾದಿ ವಿಮರ್ಶೆಯನ್ನು ಕಟ್ಟಿ ಬೆಳೆಸಿದ್ದಾರೆ.

ವೈದೇಹಿಯವರ ಸಾಹಿತ್ಯದ ಬಗ್ಗೆ ಡಾ. ಸುರೇಖಾ ಕೆ. ರವರ "ವೈದೇಹಿಯವರ ಸಾಹಿತ್ಯ ಒಂದು ಅಧ್ಯಯನ" ಎಂಬ ಪ್ರಬಂಧ, ಬಿ. ಪಿ. ಅಶೋಕರವರ 'ವೈದೇಹಿ ಕಥೆಗಳು' ಎಂಬ ವಿಮರ್ಶೆ, ಬಿ. ಆನಾರ್ಧನ ಭಟ್ ಸಂಪಾದನೆ ಮಾಡಿರುವ 'ಬದುಕು ಭಾವದ ಕಥೆಗಳು' ಎಂಬ ಕೃತಿ ಡಾ. ಕೆ. ಎನ್. ದೊಡ್ಡಮನಿಯವರು ಮಾಡಿರುವ ವೈದೇಹಿಯವರ ಕ್ರೌಂಚ ಪಕ್ಷಿ ಕಥೆ ವಿಮರ್ಶೆ, ಶ್ರೀಮತಿ ಸುಲತಾ ವಿದ್ಯಾಧರ್‌ರವರ ವೈದೇಹಿ ಕಥೆಗಳಲ್ಲಿ ಸ್ತ್ರೀ ಸಂಸ್ಕೃತಿ ಎಂಬ ಲೇಖನ, ವಾಹಿನಿ, ವಿ. ಸಿ. ಯವರ ವೈದೇಹಿಯವರ ಸಣ್ಣ ಕಥೆಗಳಲ್ಲಿ 'ಸ್ತ್ರೀ ಲೋಕ' ಎಂಬ ಪ್ರಬಂಧ ಈ ಎಲ್ಲಾ ಅಧ್ಯಯನಗಳನ್ನು ಬಳಸಿಕೊಳ್ಳುತ್ತಾ ಈ ಲೇಖನಗಳು ವ್ಯಕ್ತಪಡಿಸುವ ಮನೋಧರ್ಮವನ್ನು ಇಟ್ಟುಕೊಂಡು ಸಮಗ್ರವಾಗಿ ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಪ್ರತಿರೋಧ ನೆಲೆಗಳು ಎಂಬ ವಿಷಯದ ಬಗ್ಗೆ ಅಧ್ಯಯನ ನಡೆಸಲಾಗಿದೆ.

ಕೆಲವು ಪತ್ರಿಕೆಗಳಲ್ಲಿ ವಿಮರ್ಶಾ ಸಂಕಲನಗಳಲ್ಲಿ ಪ್ರತಿನಿಧಿಕವಾದ ಕೆಲವು ಕಥಾ ವಿಮರ್ಶೆಗಳು ಪ್ರಕಟಗೊಂಡಿವೆಯಾದರೂ ವ್ಯಾಪಕವಾಗಿ ಮತ್ತು ಸಮಗ್ರವಾಗಿ ನಿರ್ಧಿಷ್ಟವಾಗಿ "ಕರಾವಳಿ ಮಹಿಳಾ ಕಥಾ

ಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು" ಎಂಬ ಪರಿಕಲ್ಪನೆಯನ್ನು ಇಟ್ಟುಕೊಂಡು ಈ ವರೆಗೆಗೆ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಈ ಸಂಶೋಧನಾ ಪ್ರಬಂಧವು ಒಂದು ನಿರ್ಧಿಷ್ಟ ಪರಿಕಲ್ಪನೆಯನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡಲಾಗಿದೆ.

ಈ ವರೆಗೆ ನಡೆದ ಕೆಲವೊಂದು ಬಿಡಿ ಬಿಡಿಯಾದ ಅಧ್ಯಯನಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ವೈದೇಹಿಯವರ ಸಾಹಿತ್ಯದ ಬಗ್ಗೆ ಡಾ. ಸುರೇಖಾ ಕೆ. ರವರ "ವೈದೇಹಿಯವರ ಸಾಹಿತ್ಯ ಒಂದು ಅಧ್ಯಯನ" ಎಂಬ ಪ್ರಬಂಧ, ಬಿ. ಪಿ. ಅಶೋಕರವರ 'ವೈದೇಹಿ ಕಥೆಗಳು' ಎಂಬ ವಿಮರ್ಶೆ ಬಿ. ಆನಾರ್ಧನ ಭಟ್ ಸಂಪಾದನೆ ಮಾಡಿರುವ 'ಬದುಕು ಭಾವದ ಕಥೆಗಳು' ಎಂಬ ಕೃತಿ ಡಾ. ಕೆ. ಎನ್. ದೊಡ್ಡಮನಿಯವರು ಮಾಡಿರುವ ವೈದೇಹಿಯವರ ಕ್ರೌಂಚ ಪಕ್ಷಿ ಕಥೆ ವಿಮರ್ಶೆ, ಶ್ರೀಮತಿ ಸುಲತಾ ವಿದ್ಯಾಧರ್‌ರವರ ವೈದೇಹಿ ಕಥೆಗಳಲ್ಲಿ ಸ್ತ್ರೀ ಸಂಸ್ಕೃತಿ ಎಂಬ ಲೇಖನ, ವಾಹಿನಿ, ವಿ. ಸಿ. ಯವರ ವೈದೇಹಿಯವರ ಸಣ್ಣ ಕಥೆಗಳಲ್ಲಿ ಸ್ತ್ರೀ ಲೋಕ ಎಂಬ ಪ್ರಬಂಧ ಈ ಎಲ್ಲಾ ಅಧ್ಯಯನಗಳನ್ನು ಬಳಸಿಕೊಳ್ಳುತ್ತಾ ಈ ಲೇಖನಗಳು ವ್ಯಕ್ತಪಡಿಸುವ ಮನೋಧರ್ಮವನ್ನು ಇಟ್ಟುಕೊಂಡು ಒಟ್ಟಿನಲ್ಲಿ ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಪ್ರತಿರೋಧ ನೆಲೆಗಳು ಎಂಬ ವಿಷಯದ ಅಧ್ಯಯನ ನಡೆಸಲಾಗಿದೆ.

ಅಧ್ಯಾಯ ೨

## ಕರಾವಳಿ ಮಹಿಳಾ ಕಥಾ ಸಾಹಿತ್ಯ ಮತ್ತು ಆಯ್ದ ಲೇಖಕಿಯರು

## ೨.೧ ಕರಾವಳಿ ಮಹಿಳಾ ಕಥಾ ಸಾಹಿತ್ಯ ಬೆಳೆದು ಬಂದ ಬಗೆ:

ಐರೋಪ್ಯ ಕಥನ ಸಾಹಿತ್ಯದ ಭಾಗವಾಗಿರುವ 'ಶಾರ್ಟ್ ಸ್ಟೋರಿ' ಕನ್ನಡದ ಸಂದರ್ಭದಲ್ಲಿ ಸಣ್ಣಕತೆಯ ರೂಪವನ್ನು ಪಡೆಯಿತು. ಹಾಗೆಯೇ ಯುರೋಪಿನಿಂದ ವರ್ಗವಾಗಿ ಬಂದ ಆಧುನಿಕ ಚಿಂತನೆಗಳು ಕನ್ನಡದಲ್ಲಿ ರಚನೆಗೊಂಡ ಆರಂಭದ ಸಣ್ಣಕತೆಗಳಿಗೆ ವಸ್ತುವಾಗಿ ಪರಿಣಮಿಸಿದವು. ಇದರೊಂದಿಗೆ ದೇಶಿಯ ಕಥನ ಪರಂಪರೆಯ ಪ್ರಭಾವವೂ ಇದ್ದುದನ್ನು ಗಮನಿಸಬಹುದು. ಕನ್ನಡದಲ್ಲಿ ಸಣ್ಣಕತೆಗಳ ರಚನೆಗೆ ಸಂಬಂಧಿಸಿದ ಕುರುಹುಗಳು ಕಾಣಿಸಿಕೊಂಡದ್ದು ೧೯ನೇ ಶತಮಾನದ ಕೊನೆಯ ಭಾಗದಲ್ಲಿ. ಮುಂದೆ, ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಅಂದರೆ ನವೋದಯ ಸಾಹಿತ್ಯ ಚಳುವಳಿಯ ಸಂದರ್ಭದಲ್ಲಿ ದೊಡ್ಡ ಪ್ರಮಾಣದ ಹಾಗೂ ವೈವಿಧ್ಯಮಯ ಮಾದರಿಯ ಸಣ್ಣಕತೆಗಳು ಪ್ರಕಟಗೊಂಡವು. ಈ ಮೂಲಕ ಕನ್ನಡ ಸಣ್ಣಕತೆಯ ಜಗತ್ತು ಒಂದು ನಿರ್ದಿಷ್ಟ ರೂಪ ತಾಳಿತೆನ್ನಬಹುದು. ಕರ್ನಾಟಕದ ಕರಾವಳಿ ಭಾಗವನ್ನು ಪ್ರತಿನಿಧಿಸುವ ಪಂಜೆಮಂಗೇಶರಾಯರ 'ನನ್ನ ಚಿಕ್ಕ ತಾಯಿ' ಎಂಬುದು ಕನ್ನಡದ ಕರಾವಳಿ ಸಣ್ಣಕತೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಆಧುನಿಕ ಸಂದರ್ಭದಲ್ಲಿ ಕನ್ನಡದ ಸಣ್ಣಕತೆಗಳಿಗೆ ಮಹತ್ವದ ಬುನಾದಿಯನ್ನು ಒದಗಿಸಿದ್ದು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು. ಇವರನ್ನು 'ಕನ್ನಡ ಸಣ್ಣಕತೆಗಳ ಜನಕ' ಎಂಬುದಾಗಿ ಕರೆಯಲಾಗಿದೆ. ೧೯೨೦ರಲ್ಲಿ ಪ್ರಕಟವಾದ ಅವರ 'ಕೆಲವು ಸಣ್ಣಕತೆಗಳು' ಎಂಬ ಕೃತಿ ಕನ್ನಡ ಸಣ್ಣಕತೆಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದು ಮಾತ್ರವಲ್ಲ ಅನೇಕ ಮಂದಿ ಕತೆಗಾರರಿಗೆ ಮಾರ್ಗದರ್ಶಿಯೂ ಆಗಿದೆ. ಇದರೊಂದಿಗೆ ಆರಂಭದ ವರ್ಷಗಳಲ್ಲಿ ಕನ್ನಡ ಸಣ್ಣಕತೆಗಳಿಗೆ ಜೀವ ತುಂಬಿದ ಪ್ರಮುಖರೆಂದರೆ ಪಂಜೆ ಮಂಗೇಶರಾಯರು, ಕೆರೂರು ವಾಸುದೇವಾಚಾರ್ಯರು, ಎಂ.ಎನ್. ಕಾಮತ್ ಮೊದಲಾದವರು. ಕೆರೂರು ವಾಸುದೇವಾಚಾರ್ಯರು ತಮ್ಮ 'ಸಚಿತ್ರ ಭಾರತ' ಮತ್ತು 'ಶುಭೋಧಯ' ಪತ್ರಿಕೆಗಳಲ್ಲಿ ಐತಿಹಾಸಿಕ ಮತ್ತು ಪತ್ತೇದಾರಿ ಮಾದರಿಯ ಕತೆಗಳನ್ನು ಬರೆದರು. ಅವರ ಪ್ರಕೃತಿ ಬಲ, 'ಮಲ್ಲೇಶಿಯ ನಲ್ಲೆಯರು', 'ಕರಿಗಾಲಿನ ಗಿರಿರಾಯರು', 'ತೊಳೆದ ಮುತ್ತು' ಮೊದಲಾದವುಗಳು ಪ್ರಾತಿನಿಧಿಕ ಕತೆಗಳಾಗಿವೆ.

೧೯೦೦ರಲ್ಲಿ ಮಂಗಳೂರಿನ "ಸುವಾಸಿನಿ" ಮಾಸಪತ್ರಿಕೆಯಲ್ಲಿ ಪಂಜೆಮಂಗೇಶರಾಯರ ನನ್ನ ಚಿಕ್ಕ ತಾಯಿ, 'ನನ್ನ ಚಿಕ್ಕ ತಂದೆ' ಎಂಬ ಎರಡು ಕತೆಗಳು ಪ್ರಕಟಗೊಂಡವು. ಎಂ.ಎನ್. ಕಾಮತ್ ಅವರು ಪ್ರಕಟಿಸಿದ ಅಂದಿನ ಆಲೂರು ಎಂಬ ಕಥಾಸಂಗ್ರಹದಲ್ಲಿ ಹಲವು ಸಾಮಾಜಿಕ ಕತೆಗಳು ಮೂಡಿಬಂದವು.

ಮಹಿಳೆಯರ ಬದುಕಿನ ಸಂದರ್ಭವನ್ನು ನೋಡುವಾಗ ಅಡುಗೆ ಮನೆಯ ಒಳಗೆ ಇರಬೇಕಾದವಳು ಹೆಣ್ಣು ಎಂಬ ನೀತಿಬೋಧನೆಯ ಮಾತುಗಳು ಮತ್ತು ಹೆಣ್ಣು ಹೊಸ್ತಿಲನ್ನು ದಾಟಬಾರದೆಂಬ ಕೆಲವು ಹಿರಿಯರ ಮಾತುಗಳು ಹೆಣ್ಣಿನ ಎಲ್ಲಾ ಮೌಲ್ಯಗಳನ್ನು ನಿರ್ಲಕ್ಷಿಸುವಂತೆ ಮಾಡಿದ್ದವು. ಇಂತಹ ಗಳಿಗೆಯಲ್ಲಿ ಹೆಣ್ಣೊಬ್ಬಳು 'ಅಪ್ಪಹಾಕಿದ ಆಲದಮರ' ಎಂಬಂತೆ ಅದಕ್ಕೆ ಜೋತು ಬೀಳುವ ಪ್ರಸಂಗಗಳೇ ಹೆಚ್ಚಾಗಿದ್ದು, ಸ್ವತ: ಯೋಚಿಸುವ ಸಾಮರ್ಥ್ಯವನ್ನು ಕಳೆದುಕೊಂಡಿದ್ದಳು ಅಲ್ಲದೆ ಪುರುಷನೊಂದಿಗೆ ಸಮಾನತೆಯನ್ನು ಕಾಣಲು ಸಾಧ್ಯವಾಗದ ಸ್ಥಿತಿಯಿತ್ತು. ಆದರೆ ೧೨ನೇ ಶತಮಾನದ ವಚನ ಚಳವಳಿ ಎಲ್ಲ ರೀತಿಯಿಂದಲೂ ಲಿಂಗತಾರತಮ್ಯತೆ ಮತ್ತು ಜಾತಿತಾರತಮ್ಯತೆಯನ್ನು ಹೋಗಲಾಡಿಸಿತು.

ವಚನ ಚಳವಳಿಯ ಸಂದರ್ಭದಲ್ಲಿ ಅಲಕ್ಷ್ಯಕ್ಕೊಳಗಾಗಿದ್ದ ಜನಸಾಮಾನ್ಯರು ಸಾಹಿತ್ಯದ ಮುಖ್ಯವಾಹಿನಿಗೆ ಮುಖ ಮಾಡಿದರು. ಅಲ್ಲದೇ ತಮಗನಿಸಿದ್ದನ್ನು ಹೇಳಲು ತೊಡಗಿದರು. ಇಂತಹ ಸಂದರ್ಭದಲ್ಲಿ ಹೆಣ್ಣು ಸಮಾನತೆಯೆಡೆಗೆ ಆಲೋಚನಾಪರಳಾದಳು. ಕನ್ನಡ ಸಾಹಿತ್ಯದ ಸುದೀರ್ಘ ಹರಿವಿನಲ್ಲಿ ವಚನಯುಗದ ಪರಂಪರೆ ಹೆಣ್ಣಿಗೆ ಹೊಸಮೌಲ್ಯಗಳನ್ನು ಹೊಸ ಆಲೋಚನೆಗಳನ್ನು ತಂದು ಕೊಟ್ಟಿತು.

'ಅಕ್ಕಮಹಾದೇವಿ'ಯಿಂದ ಹಿಡಿದು 'ಸೂಳೆಸಂಕವ್ವ'ನವರೆಗೆ ವಚನ ಸಾಹಿತ್ಯ ಬೆಳವಣಿಗೆ ಪಡೆಯಿತು. ಇದರ ಅನಂತರ ಮಹಿಳಾ ದನಿ ಕೇಳಿಸುವುದು. ೧೭ನೆಯ ಶತಮಾನದಲ್ಲಿ ಅಂದರೆ ಸಂಚಿಹೊನ್ನಮ್ಮ ಬರೆದ 'ಹದಿಬದೆಯ ಧರ್ಮ' ಕೃತಿಯು ಈ ದೃಷ್ಟಿಯಿಂದ ಮಹತ್ವದ್ದಾಗಿದೆ. ಸಂಚಿಹೊನ್ನಮ್ಮ ತನ್ನ ಕೃತಿಯಲ್ಲಿ ಸಮಾನತೆಯನ್ನು ಸಾರಲು ಹೊರಟಳು. ಪತಿ ನಿಷ್ಠೆಯ ಕುರಿತು ಹೇಳುತ್ತಲೇ ಸತಿಯರು ವಿನಯಶೀಲತೆಯನ್ನು ಮೆರೆಯಬೇಕೆಂದು ತಿಳಿಸುತ್ತಾಳೆ. ಹೆಣ್ಣನ್ನು ಅಲ್ಲಗಳೆಯುವ ಪುರುಷರಿಗೆ ಹೆಣ್ಣಿನ ಮಹತ್ವವೇನೆಂಬುದನ್ನು ಅರಹುತ್ತಾಳೆ.

ಈ ನಿಟ್ಟಿನಲ್ಲಿ ಆಕೆಯ ಪ್ರಯತ್ನ ಬಹಳ ಮಹತ್ವದ್ದು. ಇವಳನ್ನು ಕುರಿತು ಗಾಯತ್ರೀನಾವಡರವರು ಹೀಗೆ ಹೇಳುತ್ತಾರೆ. "ಹೊನ್ನಮ್ಮ ನಮಗೆ ಇಂದು ಮುಖ್ಯವಾಗುವುದು ಸತೀಧರ್ಮದ ಹಿತೈಷಿಣಿಯಾಗಿ ಅಲ್ಲ; ಲಿಂಗ ಸಮಾನತೆಯ ಮಾರ್ಗದರ್ಶಿಕೆಯಾಗಿ ಲಿಂಗಬೇಧದ ಕುರಿತು ಅವಳೆತ್ತುವ ಮಾನವೀಯ ಕಾಳಜಿಯ ಪ್ರಶ್ನೆಗಳಲ್ಲಿ ಅವಳ ಸ್ತ್ರೀ ಪರತೆ ಅತ್ಯಂತ ಗಾಢವಾದುದು"[೧] ಎಂದಿದ್ದಾರೆ.

ಮಹಿಳಾ ಪರ ನಿಲುವುಗಳನ್ನಿಟ್ಟು ಮಹಿಳೆಯನ್ನು ಒಂದು ವ್ಯವಸ್ಥೆಯೊಳಗೆ ಮೌಲ್ಯಯುತಳಾಗಿ ಕಂಡ ಸಂದರ್ಭಗಳು ತೀರ ಇತ್ತೀಚೆಗಿನದು. ಅಕ್ಕಮಹಾದೇವಿಯನ್ನು ಬಿಟ್ಟರೆ ಸಂಚಿಹೊನ್ನಮ್ಮ ಅನಂತರದಲ್ಲಿ ಅಷ್ಟಾಗಿ ಎಲ್ಲೂ ಮಹಿಳೆಯರು ಮಾತನಾಡಲಿಲ್ಲ. ಏಕೋ ಏನೋ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರು ಅಕ್ಷರ ರೂಪದ ಕ್ರಾಂತಿಗೆ ಇಳಿಯಲಿಲ್ಲವೆನ್ನಬಹುದು. ಆದರೆ ಆಗೊಮ್ಮೆ ಈಗೊಮ್ಮೆ ಎಂಬಂತೆ ಅಲ್ಲಿ ಇಲ್ಲಿ ಕೆಲವು ದನಿಗಳು ಮಾತ್ರ ಕೇಳಿಬಂದವು.

೨೦ನೇ ಶತಮಾನದ ಮೊದಲಿಗೆ ಕನ್ನಡ ಲೇಖಕಿಯರು ಕಥಾರಚನೆಯಲ್ಲಿ ತೊಡಗಿಸಿಕೊಂಡರು. ಆರಂಭದಿಂದಲೂ ಕಥೆ, ಲೇಖಕಿಯರ ಬಹಳ ಪ್ರಿಯವಾದ ಅಭಿವ್ಯಕ್ತಿ ಮಾಧ್ಯಮವಾಗಿ ಬೆಳೆಯಿತು. ಶಿಷ್ಟ ಸಾಹಿತ್ಯವಲ್ಲದೆ, ಜನಪದ ಕಥೆಗಳನ್ನು ಹೇಳುವುದರಲ್ಲಿಯೂ ಮಹಿಳೆ ಸಿದ್ಧಹಸ್ತಳು ಎನ್ನುವುದು ಗಮನಿಸಬೇಕಾದ ವಿಚಾರವಾಗಿದೆ. ಹೆಣ್ಣಿಗಿದ್ದ ಅಭಿವ್ಯಕ್ತಿ ಸ್ವಾತಂತ್ರ್ಯದ ನಿರ್ಬಂಧವೇ ಆಕೆಯನ್ನು ಕಥೆಗಾರ್ತಿಯನ್ನಾಗಿ ರೂಪಿಸಿದೆ. ಸಾಮಾಜಿಕವಾಗಿ ಅನೇಕ ಅಡೆತಡೆಗಳನ್ನು ಹೊಂದಿದ ಮಹಿಳೆಯರ ಅನುಭವಗಳು ಆಕೆಯ ಮನಸ್ಸಿನಲ್ಲಿ ಹರಳುಗಟ್ಟಿ ಕಥೆಯಾಗಿದೆ.

ವೈದೇಹಿಯವರು ಹೇಳುವಂತೆ... "ನಮ್ಮ ಮನೆಯ ಒಳಅಂಗಳ ಎಂದರೆ ಅಮ್ಮನ ಸಾಮ್ರಾಜ್ಯ, ಕಥಾನಕಗಳ ಆಗರವದು. ಎಷ್ಟು ಜನ ಬರುತ್ತಿದ್ದರು. ಸುಖ – ದುಃಖ, ಕಥನ, ಹಾಡು, ಹಸೆ ಅದೊಂದು ಮನುಷ್ಯಲೋಕದ ದೊಡ್ಡ ದರ್ಶನ ಎಂತಲೇ ಬರೆಯಲು ಹೊರಟ ನನಗೆ ಸಣ್ಣಕಥೆಯೇ ಒಂದು ಸಾಧನವಾಗಿ ಸಿಕ್ಕಿತೆನೋ"[೨] ಎಂಬ ಮಾತುಗಳು ಮೇಲಿನ ಅರ್ಥವನ್ನು ಧ್ವನಿಸುತ್ತವೆ.

"ಕಥೆ ಹೇಳುವುದು ಹೆಣ್ಣಿನ ತಾಯ್ತನದ ಜಾಯಮಾನಕ್ಕೆ ತೀರ ಸಹಜವಾದ ಕ್ರಿಯೆಯಾಗಿದೆ. ಮಗುವಿಗೆ ಭಾಷೆಯ ಮೊದಲ ಶಬ್ಧವನ್ನು ಕಲಿಸಿದವಳು ತಾಯಿಯಲ್ಲವೇ? ಭಾಷೆ ತಿಳಿದ ಮಗುವಿಗೆ ಕತೆ ಹೇಳಿದವಳೂ ಅವಳೇ. ಅವಳಿಗೆ ಬಿಡುವು ಇಲ್ಲದಿದ್ದರೆ ಮೊಮ್ಮಕ್ಕಳಿಗೆ ಕಥೆ ಹೇಳಲೆಂದೇ ಹುಟ್ಟಿ ಬಂದಂತಿದ್ದ ಅಜ್ಜಿ ಇದ್ದಾಳೆ. ಕಥೆ ಹೇಳುವ ಮೌಖಿಕ ಪರಂಪರೆಯನ್ನು ಆರಂಭಿಸಿದವರು ಸ್ತ್ರೀಯರೇ ಇರಬೇಕು ಎನ್ನುವುದು ನನ್ನ ಅನುಮಾನ"[೩] ಎಂದು ಕನ್ನಡದ ಹಿರಿಯ ಕಥೆಗಾರ ಯಶವಂತ ಚಿತ್ತಾಲ ಹೇಳಿದ್ದಾರೆ.

ಕನ್ನಡದ ಹೆಸರಾಂತ ಕಥೆಗಾರ್ತಿ ನೇಮಿಚಂದ್ರ ಒಂದು ಕಡೆ. ... "ಹೆಣ್ತನಕ್ಕೆ ಅಂಟಿಸಿದ ಆತಂಕಗಳು ಬಹುಶಃ ನಮ್ಮ ಲೇಖಕಿಯರನ್ನು ಕಾಡಿಸಿರಲಿಕ್ಕಿಲ್ಲ. ಇದೇ ಕಾರಣಕ್ಕಿರಬೇಕು ನಾವು ಸ್ತ್ರೀಯರು

ನಮ್ಮ ಅನುಭವಗಳನ್ನು ತೆಗೆದುಕೊಂಡದ್ದು ತೀರಾ ಕಡಿಮೆ. ಆಳಕ್ಕಿಳಿದು ನಮ್ಮ ನಿಜವಾದ ಅನಿಸಿಕೆಗಳನ್ನು ಮುಟ್ಟಲು ಬಿಟ್ಟಿದ್ದೇವೆ. ಸೀತೆ, ಸಾವಿತ್ರಿಯರಿಗೂ ಹೀಗನ್ನಿಸಬಾರದೇಕೆ ಎಂದು ಪ್ರಶ್ನಿಸಿದ್ದು ಎಚ್.ವಿ. ಸಾವಿತ್ರಮ್ಮನಮ್ಮವರಂಥ ಅಲ್ಲೊಬ್ಬ ಇಲ್ಲೊಬ್ಬ ಲೇಖಕಿಯರು ಮಾತ್ರ. ನಮ್ಮ ಅನುಭವಗಳನ್ನು ಮುಟ್ಟಿದಾಗಲೂ ಬೆಚ್ಚಿ ಬಿದ್ದಿದ್ದೇವೆ, ತೆರೆದಿಡಲು ಹಿಂಜರಿದಿದ್ದೇವೆ. ಯಾರಾದರೂ ಇದು ನಿಮ್ಮದೇ ಅನುಭವವಾ ಎಂದು ಕೇಳಿಬಿಟ್ಟರೆ ಎಂಬ ಭಯ. ಇಂಥ ಸಂಕೋಚ ಮುಜುಗರಗಳಲ್ಲಿ ಸರ್ವಕಾಲಕ್ಕೂ ಹೇಳಿಕೊಂಡು ಬಂದಿದ್ದನ್ನೇ, ಅನಿಸದಿದ್ದರೂ ಅನಿಸಬೇಕೆಂದದ್ದನ್ನೇ ಜನ ನಿರೀಕ್ಷಿಸಿದ್ದನ್ನೇ, ಸಮಾಜ ಅಂಗೀಕರಿಸಿದ್ದನ್ನೇ ಹೇಳುತ್ತಾ ಬಂದೆವು. ನಾವು ಪುರುಷ ಮೌಲ್ಯಗಳಿಗೆ, ಪುರುಷನ ನಿರೀಕ್ಷೆಗಳಿಗೆ ತಕ್ಕಂತೆ ಬರೆದೆವು. ಹೆಣ್ಣಾಗಿ ಬರೆದದ್ದು ಗಟ್ಟಿನಿಂದ ಕೆಲವು ಲೇಖಕಿಯರು ಮಾತ್ರ"[೪] ನೇಮಿಚಂದ್ರರ ಈ ಮಾತುಗಳು ಸಾಹಿತ್ಯ ರಚನೆಗೆ ತೊಡಗಿದ ಮಹಿಳೆಯರ ದೃಷ್ಟಿಕೋನದ ಮೇಲೆ ಬೆಳಕು ಚೆಲ್ಲುತ್ತವೆ.

ಮಹಿಳಾ ಕನ್ನಡ ಸಾಹಿತ್ಯ ಸಾಗಿಬಂದ ಹಾದಿಯನ್ನು ಗಮನಿಸಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ನಮ್ಮ ಆರಂಭದ ಲೇಖಕಿಯರು ಪರಂಪರಾಗತ ಮೌಲ್ಯಗಳನ್ನು ವೈಭವೀಕರಿಸಿದರೇ ವಿನಾಃ ಮಹಿಳೆ ಅನುಭವಿಸಿದ ಶೋಷಣೆ, ದೌರ್ಜನ್ಯಗಳ ಬಗೆಗಿನ ಕಾಳಜಿ ಕಡಿಮೆಯಾಯಿತು. ಬರವಣಿಗೆಯನ್ನು ಒಂದು ಸಮಾಜ ಸುಧಾರಣೆಯ ಅಸ್ತ್ರವಾಗಿ ಬಳಸಿದ ನಮ್ಮ ಸಮಕಾಲೀನ ಲೇಖಕಿಯರು ಅನುಭವ ಕೇಂದ್ರಿತ ನೆಲೆಯಲ್ಲಿ ಮಹಿಳೆಯರ ಸಮಸ್ಯೆಗಳನ್ನು ಪ್ರತಿಪಾದಿಸಿದ್ದಾರೆ.

೧೮೯೧ರಲ್ಲಿ ಜನಿಸಿದ ಆರ್. ಕಲ್ಯಾಣಮ್ಮ ಸಾಮಾಜಿಕ ಜೀವನವನ್ನು ಆರಂಭಿಸಿದ್ದೇ ಬರವಣಿಗೆಯಿಂದ, ತನ್ನೊಳಗಿನ ನೋವನ್ನು ಹೊರಹಾಕುವುದಕ್ಕಾಗಿ ಬರವಣಿಗೆಯನ್ನು ಒಂದು ಮಾಧ್ಯಮವನ್ನಾಗಿ ಮಾಡಿಕೊಂಡರು. ಆಗಿನ ಪ್ರಸಿದ್ಧ ಪತ್ರಿಕೆಗಳಾಗಿದ್ದ ಸಾಧ್ವಿ, ಒಕ್ಕಲಿಗರ ಪತ್ರಿಕೆ, ನುಡಿಗನ್ನಡಿ, ವಿದ್ಯಾದಾಯಿನಿ, ಕೊಡಗು ಮುಂತಾದವುಗಳಲ್ಲಿ ಇವರ ಕಥೆಗಳು ಪ್ರಕಟವಾಗುತ್ತಿದ್ದವು. ಕನ್ನಡ ಸಾಹಿತ್ಯದಲ್ಲಿ ಚಿರಪರಿಚಿತವಾದ ಹೆಸರು ಕೊಡಗಿನ ಗೌರಮ್ಮನವರದು. ಅವರು ಬರೆಯತೊಡಗಿದ ಕಾಲಘಟ್ಟ ಸಣ್ಣಕತೆಗಳ ಆರಂಭದ ಕಾಲ. ಅವರು ತಮ್ಮ ಸಾಹಿತ್ಯಾಭಿವ್ಯಕ್ತಿಗೆ ಆರಿಸಿಕೊಂಡದ್ದು ಸಣ್ಣಕತೆಗಳನ್ನು. ತನ್ನ ಸುತ್ತಮುತ್ತಲಿನ ತರುಣ – ತರುಣಿಯರ ಮುಗ್ಧಪ್ರೇಮ, ವಿವಾಹದ ಕನಸುಗಳು, ಆಸೆ ನಿರಾಸೆ ಮೊದಲಾದ ಸಮಸ್ಯೆಗಳನ್ನು ತಮ್ಮ ಕತೆಗಳಲ್ಲಿ ಚಿತ್ರಿಸಿದ್ದಾರೆ.

೧೯೧೬ರಲ್ಲಿ ಬೆಂಗಳೂರಿನಲ್ಲಿ ಹುಟ್ಟಿದ ರಾಜೇಶ್ವರಿ ನರಸಿಂಹ ಮೂರ್ತಿ ಬೆಳದಿಂಗಳ ರಾತ್ರಿ ಕಥೆಗಳು, ಹಾಗೂ ಗುಲಾಬಿ ಹೂ ಕಥೆಗಳನ್ನು ಪ್ರಕಟಿಸಿದ್ದಾರೆ. ೧೯೨೩ರಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಜನಿಸಿದ ಸರಸ್ವತಿದೇವಿ ಗೌಡರ ಒಟ್ಟು ೫ ಕೃತಿಗಳನ್ನು ಪ್ರಕಟಿಸಿದ್ದಾರೆ. ಆಧುನಿಕ ಮಹಿಳಾ ಸಾಹಿತ್ಯದಲ್ಲಿ ಹೊಸಅಲೆಯನ್ನು ಎಬ್ಬಿಸಿದವರು ವೀಣಾ ಶಾಂತೇಶ್ವರವರು. ಪುರುಷನ ಮೋಸ, ಹೇಡಿತನ, ಸಂಪ್ರದಾಯಗಳನ್ನು ತಮ್ಮ ಕಥೆಗಳ ಮೂಲಕ ಬಹಿರಂಗಪಡಿಸಿದ್ದಾರೆ.

ರಾಜಲಕ್ಷ್ಮಿ ಎನ್. ರಾವ್‌ರವರು ಸೂಕ್ಷ್ಮ ಸಂವೇದನಾಶೀಲ ಬರಹಗಾರ್ತಿಯಾಗಿದ್ದಾರೆ. ಇವರ ಕಥೆಗಳ ವಸ್ತು ಹೆಣ್ಣು-ಗಂಡುಗಳ ಸಂಬಂಧವನ್ನು ಕುರಿತದ್ದು. ಮಹಿಳೆಯರಿಗೆ ವಿಶಿಷ್ಟವಾದ ದೃಷ್ಟಿಕೋನ, ಶೈಲಿ ಅನಿವಾರ್ಯತೆಯನ್ನು ಇವರ ಕಥೆಗಳು ಸೂಚಿಸುತ್ತವೆ. ಜಾತಿ, ಲೈಂಗಿಕ ಸಮಸ್ಯೆ, ವೇಶ್ಯಾವೃತ್ತಿ, ವಿವಾಹೇತರ ಹಾಗೂ ವಿವಾಹಪೂರ್ವ ಲೈಂಗಿಕ ಸಂಬಂಧಗಳ ಬೇರೆ ಬೇರೆ ಮುಖಗಳನ್ನು ಕಥೆಗಳ ಮೂಲಕ ಅನಾವರಣಗೊಳಿಸಿದ್ದಾರೆ. ಕನ್ನಡ ಮಹಿಳಾ ಸಾಹಿತ್ಯದ ದಿಕ್ಕುಬದಲಾಯಿಸಿದ ಲೇಖಕಿ ತ್ರಿವೇಣಿಯವರು. ಮಧ್ಯಮ ಮತ್ತು ಕೆಳಮಧ್ಯಮ ವರ್ಗದ ಹೆಣ್ಣುಮಕ್ಕಳ ಕೌಟುಂಬಿಕ ಸಮಸ್ಯೆಗಳ ಕುರಿತು ತಮ್ಮ ಕತೆಗಳಲ್ಲಿ ಬರೆದಿದ್ದಾರೆ.

ಉತ್ತರ ಕರ್ನಾಟಕದ ಪ್ರಾರಂಭದ ಲೇಖಕಿಯರಲ್ಲಿ ಗೀತಾ ಕುಲಕರ್ಣಿಯವರು ಒಬ್ಬರು. ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಕೈಯಾಡಿಸಿದ ಗೀತಾ ಕುಲಕರ್ಣಿಯವರು ೩ ಕಥಾಸಂಕಲನವನ್ನು ಪ್ರಕಟಿಸಿದ್ದಾರೆ. ಸಮಾಜ ಸೇವೆ ಮಹಿಳಾ ಪರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಸರಸ್ವತಿದೇವಿ ಗೌಡರ್ ಉತ್ತರ ಕರ್ನಾಟಕದ ಪ್ರಾರಂಭಿಕ ಮಹಿಳಾ ಸಾಹಿತಿಗಳಲ್ಲಿ ಒಬ್ಬರು. ಹಾಸನ ಜಿಲ್ಲೆಯ ಎಚ್.ಎಸ್. ಕಾತ್ಯಾಯಿನಿಯವರು ಕಥೆಯನ್ನು ತನ್ನ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡವರು. ಹಳ್ಳಿಯ ಹಿನ್ನೆಲೆಯಿಂದ ಬಂದಂತಹ ಇವರು ಅಲ್ಲಿನ ಪರಿಸರ, ನಂಬಿಕೆ, ಸಮಾಜದ ಅಪಮೌಲ್ಯಗಳನ್ನು ತಮ್ಮ ಕಥೆಗಳಲ್ಲಿ ಅನಾವರಣ ಮಾಡಿದ್ದಾರೆ. ತೆಲುಗು ಕಥೆಗಳನ್ನು ಕನ್ನಡಕ್ಕೆ ಅನುವಾದ ಮಾಡುವುದರ ಮೂಲಕ ಬರವಣಿಗೆಯನ್ನು ಆರಂಭಿಸಿದವರು ಅನುಪಮಾ ನಿರಂಜನ್‌ರವರು ಮಹಿಳಾಪರ ಕಾಳಜಿಯ ಜೊತೆಗೆ ವೈಚಾರಿಕ ನೆಲೆಯಲ್ಲಿ ಚಿಂತನೆಯನ್ನು ನಡೆಸುತ್ತಾರೆ.

ಹೈದರಾಬಾದ್ ಕರ್ನಾಟಕ ಪ್ರದೇಶದಿಂದ ಬಂದ ಗೀತಾ ನಾಗಭೂಷಣ್ ಅವರು ಅನಕ್ಷರತೆ, ಮೂಢನಂಬಿಕೆ, ಬಡತನ, ಅಜ್ಞಾನಗಳ ಬಗೆಗೆ ಚಿಂತಿಸಿದ ಬರಹಗಾರ್ತಿಯಾಗಿದ್ದಾರೆ. ಗುಲ್ಬರ್ಗಾ

ಪರಿಸರದ ಕೆಳವರ್ಗದ ಜನರ ಆಡುನುಡಿಯ ಸೊಗಡು ಹಾಗೂ ಪ್ರಾದೇಶಿಕ ಸಂಸ್ಕೃತಿಯನ್ನು ತಮ್ಮ ಬರಹಗಳಲ್ಲಿ ಪರಿಣಾಮಕಾರಿಯಾಗಿ ನೀಡಿದ್ದಾರೆ.

ಕಮಲಾ ಹೆಮ್ಮಿಗೆಯವರು ಮನುಷ್ಯ ಬದುಕಿನ ಘಟನೆಗಳನ್ನಾಗಲೀ ಗಂಡು-ಹೆಣ್ಣಿನ ಸಂಬಂಧವನ್ನಾಗಲೀ, ವ್ಯಕ್ತಿ ಕೇಂದ್ರಿತ ನೆಲೆಯಲ್ಲಿ ಕಾಣುವ ಪ್ರಮುಖ ಲೇಖಕಿಯಾಗಿದ್ದಾರೆ. ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಗುರುತಿಸಿಕೊಂಡಿರುವ ಬಿ.ಟಿ. ಲಲಿತಾ ನಾಯಕ್‌ರವರು ಲಂಬಾಣಿ ಬುಡಕಟ್ಟಿನ ಹಿನ್ನೆಲೆಯಿಂದ ಬಂದ ಲೇಖಕಿ. ತಮ್ಮ ಜನಾಂಗದ ಹೆಣ್ಣುಮಕ್ಕಳ ಶೋಷಣೆ, ಸಂಕಷ್ಟಗಳನ್ನು ತಮ್ಮ ಬರಹಗಳಲ್ಲಿ ನೇರವಾಗಿ ಹಾಗೂ ದಿಟ್ಟನೆಲೆಯಿಂದ ಚಿತ್ರಿಸಿದ್ದಾರೆ.

ಎಂ. ಎಸ್. ವೇದಾ ದಲಿತ ಸಂವೇದನೆ ಹಾಗೂ ಕಾಳಜಿಗಳನ್ನು ತಮ್ಮ ಕಥೆಗಳಲ್ಲಿ ಅಭಿವ್ಯಕ್ತ ಪಡಿಸಿರುವ ಒಳ್ಳೆಯ ಬರಹಗಾರ್ತಿ. ಮೈಸೂರಿನ ಪ್ರಾದೇಶಿಕ ಶೈಲಿಯಲ್ಲಿ ಇವರ ಬರವಣಿಗೆ ಮೂಡಿಬಂದಿದೆ. ವೈಚಾರಿಕಾ ಪ್ರಜ್ಞೆಯನ್ನು ತನ್ನ ಬರವಣಿಗೆಯಲ್ಲಿ ಮೈಗೂಡಿಸಿಕೊಂಡಿರುವ ಮುಸ್ಲಿಂ ಲೇಖಕಿ ಬಾನು ಮುಸ್ತಾಕ್. ಪುರುಷಪ್ರಧಾನ ಸಮಾಜದ ಧರ್ಮ ದೇವರು, ಸ್ತ್ರೀಶೋಷಣೆಯ ವಿವಿಧ ಮುಖಗಳನ್ನು ತಮ್ಮ ಕಥೆಗಳಲ್ಲಿ ಅನಾವರಗೊಳಿಸಿದ್ದಾರೆ.

ಮಹಿಳೆಯರು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಬರವಣಿಗೆಗೆ ತೊಡಗಿಕೊಂಡ ಉದಾಹರಣೆಗಳು ಅಲ್ಲಲ್ಲಿ ದೊರೆತರೂ, ವಚನ ಚಳುವಳಿಯನ್ನು ಹೊರತುಪಡಿಸಿದರೆ ಅವೆಲ್ಲಾ ಅಪವಾದಗಳಾಗಿಯೇ ಉಳಿಯುತ್ತವೆ. ವಚನ ಸಾಹಿತ್ಯದ ಸಂದರ್ಭದಲ್ಲಿ ಬೇರೆ ಬೇರೆ ಜಾತಿ, ವರ್ಗಗಳು ಸಾಹಿತ್ಯ ರಚನೆಗೆ ತೊಡಗಿದಂತೆ ವಿಭಿನ್ನ ಧರ್ಮಗಳ/ಜಾತಿಗಳ ಮಹಿಳೆಯರೂ ಸಾಹಿತ್ಯ ರಚನೆ ಮಾಡಿದರು. ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಕೂಡ ನವೋದಯ, ಪ್ರಗತಿಶೀಲ, ನವ್ಯ ಬಂಡಾಯ, ದಲಿತ ಯಾವುದೇ ಚಳವಳಿಯಲ್ಲೂ ಮಹಿಳೆಯರು ಪ್ರಮುಖವಾಗಿ ಕಾಣುವುದಿಲ್ಲ. ಪ್ರಾತಿನಿಧಿಕವಾಗಿ ಕೆಲವರನ್ನು ಮಾತ್ರ ಗಮನಿಸಿಕೊಳ್ಳಬಹುದಾಗಿದೆ.

ನಂಜನಗೂಡು ತಿರುಮಲಾಂಬ, ಸರಸ್ವತಿಬಾಯಿ ರಾಜವಾಡೆ, ತ್ರಿವೇಣಿ, ಎಂ. ಕೆ. ಇಂದಿರಾ, ಅನುಪಮಾ ನಿರಂಜನ ಮುಂತಾದ ನವೋದಯ ಮತ್ತು ಪ್ರಗತಿಶೀಲ ಕಾಲಘಟ್ಟದ ಮಹಿಳಾ ಸಾಹಿತಿಗಳು ಮತ್ತು ಅವರ ಕೃತಿಗಳು ೧೯೮೦ರ ದಶಕದ ನಂತರದಲ್ಲಿ ಚರ್ಚೆಗೆ ಒಳಗಾಗುತ್ತಿವೆ. ನವ್ಯ ಸಾಹಿತ್ಯದ ಸಂದರ್ಭದಲ್ಲಿ ಪುರುಷರೇ ಮಹಿಳೆಯರ ಹೆಸರಿನಲ್ಲಿ ಕವಿತೆಗಳನ್ನು ಬರೆದದ್ದೂ ಉಂಟು. ಬಂಡಾಯ

ಮತ್ತು ದಲಿತ ಸಾಹಿತ್ಯದಲ್ಲಿ ಕೂಡ ಕೆಲವೇ ಕೆಲವು ಲೇಖಕಿಯರನ್ನು ಗಮನಿಸಬಹುದು. ಬಿ.ಟಿ. ಲಲಿತಾ ನಾಯಕ್ ಮುಂತಾದವರು ಬಂಡಾಯ ಸಾಹಿತ್ಯ ಚಳುವಳಿಯೊಂದಿಗೆ ಗುರುತಿಸಿಕೊಂಡಿದ್ದಾರೆ. ಹಲವಾರು ಚಾರಿತ್ರಿಕ ಕಾರಣಗಳಿಂದಾಗಿ ದಲಿತ ಸಾಹಿತ್ಯ ಚಳುವಳಿಗೆ ಮಹಿಳೆಯರ ಪ್ರವೇಶ ಇನ್ನೂ ದೊಡ್ಡ ಪ್ರಮಾಣದಲ್ಲಿ ಆಗಿಲ್ಲವೆನ್ನಬಹುದು.

೧೯೦೮ರಲ್ಲಿ ಪ್ರಕಟವಾದ ಶ್ರೀಮತಿ ಶಾಂತಾಬಾಯಿ ನೀಲಗಾರರವರ ಸದ್ಗುಣಿ ಕೃಷ್ಣಾಬಾಯಿ ಅಥವಾ ಉತ್ತಮ ಗೃಹಿಣಿ ಎಂಬ ಕಾದಂಬರಿ, ಆಧುನಿಕ ಕನ್ನಡ ಸಾಹಿತ್ಯದ ದಾಖಲೆಗೆ ದೊರಕಿದೆ. ಈ ಕಾದಂಬರಿಯಲ್ಲಿ ಸ್ತ್ರೀಪರವಾದ ಅನೇಕ ಅಂಶಗಳನ್ನು ಮಂಡಿಸಿರುವುದಕ್ಕೆ ಮತ್ತು ಆಧುನಿಕತೆಗೆ ಸಮಾಜ ಒಡ್ಡಿಕೊಳ್ಳಬೇಕೆಂಬ ಸವಿನಯ ಆಗ್ರಹವನ್ನು ಮಾಡಿರುವುದಕ್ಕೆ ಈ ಕೃತಿ ಮುಖ್ಯವಾಗುತ್ತದೆ"[೫] ಎಂದು ಕೆ. ಎಂ. ವಿಜಯಲಕ್ಷ್ಮಿ ಹೇಳಿದ್ದಾರೆ.

ಸ್ತ್ರೀ ಶಿಕ್ಷಣಕ್ಕಾಗಿ ಹೋರಾಟ ಸ್ತ್ರೀ ಪುರುಷರು ಸಮಾನರೆಂಬ ಭಾವನೆ, ಮೊದಲ ಈ ರಚನೆಯಲ್ಲೇ ಆರಂಭವಾಗಿ, ನಂಜನಗೂಡು ತಿರುಮಲಾಂಬಾ, ಕಲ್ಯಾಣಮ್ಮನವರ ಮೂಲಕ ಅನಂತರದ ತಲೆಮಾರಿನ ಶ್ಯಾಮಲಾದೇವಿ ಬೆಳಗಾಂಕರ್ ಗಿರಿಬಾಲೆ, ಕೊಡಗಿನ ಗೌರಮ್ಮ, ಎಚ್. ವಿ. ಸಾವಿತ್ರಮ್ಮ, ದೇವಾಂಗನಾ ಶಾಸ್ತ್ರೀ ಮುಂತಾದವರ ಮೂಲಕ ಮುಂದುವರೆಯುತ್ತ ಬಂದಿದೆ.

ನವೋದಯ ಕಾಲದಲ್ಲಿ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳು ಒಮ್ಮೆಲೆ ಹುಟ್ಟಿದವು. ಇವುಗಳಲ್ಲಿ ಕಾವ್ಯ, ನಾಟಕ, ಕಾದಂಬರಿ ಮತ್ತು ಸಣ್ಣಕಥೆ ಇವು ಪ್ರಮುಖ ಪ್ರಕಾರಗಳನ್ನು ಬೆಳೆದು ಸತ್ವಯುತ ಸಂಪ್ರದಾಯಗಳನ್ನು ಸೃಷ್ಟಿಸಿದವು. ಮಹಿಳೆಯರು ಈ ನಾಲ್ಕು ಪ್ರಕಾರಗಳಲ್ಲಿ ಆ ಕಾಲಕ್ಕೆ ತಕ್ಕ ವಿಧಾನದಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆಂಬುದನ್ನು ಬೇರೆ ಬೇರೆ ಲೇಖನಗಳಲ್ಲಿ ಗಮನಿಸಬಹುದು.

ಗಾಂಧೀಜಿಯವರ ವ್ಯಕ್ತಿತ್ವ, ಅವರ ಅಹಿಂಸಾ ತತ್ವಗಳು, ಜಾತ್ಯಾತೀತ ಭಾವನೆಗಳು, ದಾಸ್ಯದಿಂದ ದೇಶವನ್ನು ಪಾರಾಗಿಸುವ ಆಶಯಗಳು, ಇಡೀ ದೇಶದ ಮನೆಮನೆಯ ಒಳಗೆ ಹೊಕ್ಕಾಗ ಆ ತತ್ವಗಳನ್ನು ಜನರು ಅನುಸರಿಸಬೇಕಾದುದು ಉಚಿತವೆಂಬ ಭಾವನೆಯಿಂದ ಮಹಿಳೆಯರು ಆ ಅಂಶವನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸಿದ್ದಾರೆ. ದೇವಕಿ ಎಂ. ಶೆಟ್ಟಿಯವರು 'ಭೂತಕ್ಕೆ ಬಲಿ' ಎಂಬ ಸಣ್ಣ ಕಥೆಯಲ್ಲಿ ಅಸ್ಪೃಶ್ಯರು ಕೂಡ ಮನುಷ್ಯರು ಇತರರಿಗೆ ಸಮಾನರು ಎಂಬ ಅಂಶವನ್ನು ಎತ್ತಿ ಹಿಡಿದಿರುವುದು ಜಾತ್ಯಾತೀತ ಭಾವನೆಯನ್ನು ಸಮಾಜದಲ್ಲಿ ಜಾರಿಗೆ ತರಬೇಕೆಂಬ ಪ್ರಯತ್ನ ಮಾಡಿದರು. ಕೊಡಗಿನ ಗೌರಮ್ಮನವರ

ಅಪರಾಧಿ ಯಾರು? 'ಮುನ್ನಾದಿನ' ಮತ್ತು 'ಹೋಗಿಯೇ ಬಿಟ್ಟಿದ್ದ' ಎಂಬ ಕತೆಗಳು ಗಾಂಧೀಜಿಯವರ ಅದೇ ಜಾತಿ ಮತ್ತು ಧರ್ಮವನ್ನು ಮೀರಿದ ಪ್ರೀತಿ ತತ್ವದ ಪ್ರಭಾವದ ಪರಿಣಾಮವಾಗಿಯೇ ರಚನೆಗೊಂಡಂತವುಗಳೇ.

ಮೊಟ್ಟ ಮೊದಲು ಮಹಿಳಾ ಸಾಹಿತ್ಯಕ್ಕೆ ನಾಂದಿ ಹಾಡಿದ ಲೇಖಕಿ ಎಂದರೆ ನಂಜನಗೂಡು ತಿರುಮಲಾಂಬ. ಇವರು ಕಾದಂಬರಿಗಳನ್ನು ರಚಿಸಿದರು ಅಲ್ಲದೆ 'ರಂಗವಲ್ಲಿ' ಎಂಬ ಮೊದಲ ಕಥಾಸಂಗ್ರಹವನ್ನು ೧೯೩೭ರಲ್ಲಿ ದ. ಬಾ ಕುಲಕರ್ಣಿಯವರು ಸಂಪಾದಿಸಿ ಹೊರತಂದರು. ಅದನ್ನು ಕುರಿತು ಅವರು ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ.

"ಸಮಾಜದ ಒಂದರ್ಧವೇ ಹೆಣ್ಣು. ನಮ್ಮ ಸಮಾಜದಂಥ ಸ್ವಲ್ಪ ಹಳೆಯ ವ್ಯವಸ್ಥೆಯ ಸಮಾಜಕ್ಕಂತೂ ಈಗಿನ ಕಾಲದ ದೃಷ್ಟಿಯಿಂದ ಅನೇಕ ಪ್ರಶ್ನೆಗಳು ತಲೆದೋರುತ್ತವೆ. ಸ್ತ್ರೀಯರ ಬಾಳನ್ನು ಸಮಾಜವು ಇಂದು ಉತ್ತರಕೊಡಬೇಕಾಗಿರುವ ನೂರು ಪ್ರಶ್ನೆಗಳನ್ನು ಸುಲಭವಾಗಿ ಪ್ರತಿಪಾದಿಸಬಹುದು. ಹೆಣ್ಣಿನ ಬಾಳನ್ನು ಕುರಿತು ಹೆಣ್ಣಿನ ಅನುಭವದಿಂದ ಮಾತ್ರ ಹೇಳಲು ಸಾಧ್ಯವಿರುತ್ತದೆ. ಹೆಣ್ಣಿನ ಈ ಅಭಿಪ್ರಾಯವನ್ನು ಸಮಾಜವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ"[೬] ಎನ್ನುವಾಗ ಹೆಣ್ಣಿನ ಅಭಿಪ್ರಾಯ ಹೆಣ್ಣಿನದ್ದೇ ಹೊರತು ಬೇರೆಯವರದ್ದಲ್ಲ.

ಹಾಗಾಗಿ ಅವರವರು ಉಂಡ ಅನುಭವಗಳು, ನೋವು-ನಲಿವು, ಸಂಕಟಗಳು ಅವರಿಂದಲೇ ಹೇಳಲ್ಪಟ್ಟರೆ ಉತ್ತಮ. ಇದನ್ನು ನೋಡುವಾಗ ಮಹಿಳೆಯರು ಮಾತ್ರ ತಮ್ಮ ಸಂಕಟವನ್ನು ಬರಹಕ್ಕೆ ತಂದರೆ ಅರ್ಥವಿರುತ್ತದೆ ಎಂಬ ಅಂಶವು ತಿಳಿದುಬರುತ್ತದೆ. ಅಂತಹ ಪ್ರಯತ್ನಕ್ಕೆ ಕೈ ಹಾಕಿದವರಲ್ಲಿ 'ನಂಜನಗೂಡು ತಿರುಮಲಾಂಬರವರೇ ಮೊದಲಿಗರು. ಮಹಿಳಾಪರ ನಿಲುವು ಹೊತ್ತ ಮತ್ತೊಬ್ಬ ಲೇಖಕಿ ನವೋದಯದ ಸಂದರ್ಭದಲ್ಲೇ ಬಂದ 'ಕೊಡಗಿನಗೌರಮ್ಮ' ಇವರು ಶ್ರೀಮತಿ ಬಿ. ಟಿ. ಜಿ. ಕೃಷ್ಣ ಎಂಬ ಹೆಸರಿನಿಂದ ಕಥೆಗಳನ್ನು ಬರೆಯಲಾರಂಭಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿ, ಇತರ ಸ್ತ್ರೀಯರನ್ನು ದೇಶಸೇವೆಗೆ ಹುರಿದುಂಬಿಸಿದ ಸರೋಜಿನಿದೇವಿ, ಸುಚೇತಾ ಕೃಪಾಲಿನಿ, ಕಮಲಾದೇವಿ ಚಟ್ಟೋಪಾಧ್ಯಾಯರ ಬಗ್ಗೆ ಮತ್ತು ಇನ್ನಿತರ ಮಹಿಳೆಯರ ಬಗ್ಗೆ ಆರ್. ಕಲ್ಯಾಣಮ್ಮನವರು ಪರಿಚಯಾತ್ಮಕ ಕೃತಿಗಳನ್ನು ರಚಿಸಿದ್ದಾರೆ.

ಸೀತಾದೇವಿ ಪಡುಕೋಣೆ, ತಿರುಮಲೆ ರಾಜಮ್ಮ, ಸರಸ್ವತಿ ದೇವಿ ಗೌಡರ, ಬೆಳಗೆರೆ ಜಾನಕಮ್ಮ ಮುಂತಾದವರು ದೇಶಾಭಿಮಾನ ಬೆಳೆಸುವ ಕೃತಿಗಳನ್ನು ರಚಿಸಿದ್ದಾರೆ.

ಗೌರಮ್ಮನವರ ಕಥೆ "ಮನುವಿನರಾಣಿ" ಎಂಬುದು ಇವರಿಗೆ ಪ್ರಸಿದ್ಧಿಯನ್ನು ತಂದುಕೊಟ್ಟಿತು. ಇವರು ಬರೆದು ಪ್ರಕಟಿಸಿದ ಬಿಡಿಬಿಡಿ ಕಥೆಗಳನ್ನು ಸಂಕಲನ ರೂಪದಲ್ಲಿ ಪ್ರಕಟಿಸಬೇಕೆಂದು ಪ್ರಯತ್ನಿಸುತ್ತಿರುವಾಗಲೇ ಅಕಾಲ ಮರಣಕ್ಕೆ ತುತ್ತಾದರು. ಇವರ ಕೃತಿಯನ್ನು 'ಚಿಗುರು' ಎಂದು ಪ್ರಕಟಿಸಬೇಕೆಂದಿದ್ದ ಪ್ರಕಾಶಕರು 'ಕಂಬನಿ' ಎಂದು ಬದಲಾಯಿಸಿ ಪ್ರಕಟಿಸಿದರು". ದ.ರಾ. ಬೇಂದ್ರೆಯವರು ಇವರ ಪುಸ್ತಕಕ್ಕೆ ಮುನ್ನುಡಿಯನ್ನು ಹೀಗೆ ಬರೆದಿದ್ದಾರೆ, ಕತೆಗಳಲ್ಲಿ ಕಟುತ್ವವಿದ್ದರೂ ರೊಚ್ಚಿಲ್ಲ; ಸ್ವ-ಉದ್ದೇಶ ಲೇಖನದ ಸೂಚನೆಯಿದ್ದರೂ ಅವಾಸ್ತವ ಆರ್ಭಟೆಯಿಲ್ಲ, ಕಲೆಯ ನೈಜವನ್ನು ಮರೆಮಾಚಿಲ್ಲ. ಎಲ್ಲೆಲ್ಲೂ ಹೆಣ್ಣಿನ ಹೃದಯದ ಸಾಕ್ಷಿಯನ್ನು ಸಾರುವ ಈ ಕಥಾಗುಚ್ಚವು 'ಶ್ರೀನಿವಾಸ' 'ಆನಂದರ ಕಥೆಗಳನ್ನು ಓದಿದ ವಾಚಕರಿಗೆ ಮನೋವಿಶ್ಲೇಷಣಾತ್ಮಕ ಕಥೆಗಳ ಮಾದರಿಯಾಗಿ ಹೃದಯಂಗಮವಾಗುವುದೆಂದು ನಾನು ನಂಬಿದ್ದೇನೆ[೭] ಎಂದಿದ್ದಾರೆ.

ಒಟ್ಟಿನಲ್ಲಿ ನವೋದಯ ಕಾಲಘಟ್ಟದಲ್ಲಿ ಸ್ತ್ರೀಯರು ಸಹ ಕನ್ನಡ ಸಾಹಿತ್ಯದ ಸಮೃದ್ಧತೆಗೆ ಶ್ರಮಿಸಿದರೆನ್ನಬಹುದು. ಪುರುಷಪ್ರಧಾನ ವ್ಯವಸ್ಥೆ ಸಾಹಿತ್ಯದೆಡೆಗೂ ಕೈಚಾಚಿ, ಬರೆಯುವುದು ಕೇವಲ ಪುರುಷರ ಹಕ್ಕು ಎಂದು ತಿಳಿದಿದ್ದ ಸಂದರ್ಭದಲ್ಲಿ ಮಹಿಳೆಯರೂ ಸಾಹಿತ್ಯದ ಮೂಲಕ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸಿದ್ದು ಮಹತ್ವದ್ದಾಗಿದೆ. ನವೋದಯ ಕಾಲಘಟ್ಟದಲ್ಲಿಯೇ ತಿರುಮಲಾಂಬ ಮತ್ತು ಕೊಡಗಿನ ಗೌರಮ್ಮನವರ ಜೊತೆಯಲ್ಲೇ ಬರೆಯತೊಡಗಿದ ಲೇಖಕಿಯರೆಂದರೆ ಬಿಳಿಗೆರೆ ಜಾನಕಮ್ಮ, ಕಲ್ಯಾಣಮ್ಮ, ಶ್ಯಾಮಲದೇವಿ ಬೆಳಗಾಂವಕರ ಇವರುಗಳನ್ನು ನಾವು ಮೊದಲ ಪೀಳಿಗೆಯ ಲೇಖಕಿಯರೆಂದು ಗುರುತಿಸಬಹುದು.

ನವೋದಯ ಸಾಹಿತ್ಯಕ್ಕೆ ಪ್ರತಿ ಸ್ಪರ್ಧಿಯಾಗಿ ಪ್ರಗತಿಶೀಲ ಸಾಹಿತ್ಯವು ಹುಟ್ಟಿತು. 'ಕಲೆಗಾಗಿ ಕಲೆ' ಎಂಬ ನವೋದಯದ ಸಿದ್ಧಾಂತಕ್ಕೆ ಪ್ರತಿಯಾಗಿ 'ಬದುಕಿಗಾಗಿ ಕಲೆ' ಎಂಬ ಸಿದ್ಧಾಂತದ ಆಧಾರದ ಮೇಲೆ ಪ್ರಗತಿಶೀಲರು ಕೃತಿರಚನೆ ಮಾಡಲು ತೊಡಗಿದರು. "ಸಾಹಿತ್ಯವೆಂಬ ಮಡಿಕೋಟೆಯನ್ನು ಕಟ್ಟಿಕೊಂಡು ಸುತ್ತಲಿನ ಜಗತ್ತಿನ ಹಾಹಾಕಾರದ ಮೇಲೆ ಅವಕುಂಠನ ಹಾಕಿ ತನ್ನ ಭಾವ ಪ್ರಪಂಚದಲ್ಲಿ ಮೈಮರೆಯುವ

ಸಾಹಿತಿ ತನ್ನ ಅಥವಾ ದೇಶದ ಹಿತ ಸಾಧಿಸಲಾರ"[೮] ಎಂಬ ಅ. ನ. ಕೃ ಅವರ ಮಾತುಗಳು ಪ್ರಗತಿಶೀಲರ ಧ್ಯೇಯ-ಧೋರಣೆಗಳನ್ನು ಬಿಂಬಿಸುತ್ತವೆ.

ಬಿ. ಎನ್. ಸುಮಿತ್ರಾಬಾಯಿಯವರು ಹೇಳುವಂತೆ "ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರ ಮತ್ತು ಕೆಳಸ್ತರದ ಜನರ ಬದುಕನ್ನು ಹತ್ತಿಕ್ಕಲ್ಪಟ್ಟವರ ನೆಲೆಯಲ್ಲಿ ಸಮಾನವಾಗಿ ಗುರುತಿಸಿದವರಲ್ಲಿ ಮೊದಲಿಗರು ಪ್ರಗತಿಶೀಲರೇ ಆಗಿದ್ದಾರೆ"[೯]. ಸ್ತ್ರೀಯರು ಮತ್ತು ಕೆಳಸ್ಥರದ ಸಮುದಾಯಗಳ ಪರವಾಗಿದ್ದೇವೆಂದು ಹೇಳಿದ ಪ್ರಗತಿಶೀಲರು ತಮ್ಮ ಬರಹಗಳಲ್ಲಿ ಮಹಿಳೆಯರ ಸಮಸ್ಯೆಗಳಾಗಿರುವ ವರದಕ್ಷಿಣೆ, ಸತಿಪದ್ಧತಿ, ಬಾಲ್ಯವಿವಾಹ, ವೇಶ್ಯಾವಾಟಿಕೆಯಂತಹ ಅನಿಷ್ಠ ಪದ್ಧತಿಗಳ ವಿರುದ್ಧ ಸಾಹಿತ್ಯ ಕೃಷಿ ನಡೆಸಿದರು. ಇಂಥಹ ಸಮಸ್ಯೆಗಳ ಕರಾಳ ಸ್ವರೂಪವನ್ನು ತಮ್ಮ ಕಥೆಗಳಲ್ಲಿ ಬಿಂಬಿಸಿದರು.

ಈ ಪೀಳಿಗೆಯಲ್ಲಿ ಬಂದ ಲೇಖಕಿಯರಾದ 'ತ್ರಿವೇಣಿ' ಮತ್ತು 'ಅನುಪಮಾ ನಿರಂಜನ' ಕಥೆಗಾರ್ತಿಯರು ವ್ಯವಸ್ಥೆಯ ವಿರುದ್ಧದ ದನಿ ಎತ್ತುವುದು, ಪ್ರತಿಭಟನೆಯನ್ನು ವ್ಯಕ್ತಪಡಿಸುವುದು ಕಂಡಿತು. ಇವರನ್ನು ಎರಡನೆಯ ಪೀಳಿಗೆಯ ಲೇಖಕಿಯರೆಂದು ಗುರುತಿಸಬಹುದು. ಈ ಪೀಳಿಗೆಯ ಲೇಖಕಿಯರನ್ನು ಕುರಿತು ಜಿ. ಎಸ್. ಅಮೂರರು 'ಅವಳ ಕಥೆಗಳು'ಗಳಿಗೆ ಬರೆದ ಪ್ರಸ್ಥಾವನೆಯಲ್ಲಿ ಹೀಗೆ ಹೇಳುತ್ತಾರೆ.

"ವೈಜ್ಞಾನಿಕ ತಿಳಿವು ಹಾಗೂ ಮನೋವೈಜ್ಞಾನಿಕ ಒಳನೋಟಗಳನ್ನು ಹೊಂದಿದ ಈ ಲೇಖಕಿಯರು ಸಣ್ಣಕತೆಯ ಮಾಧ್ಯಮಕ್ಕೆ ಹೊಸ ಆಳ ವಿಸ್ತಾರಗಳನ್ನು ಒದಗಿಸಿದರು. ಸ್ತ್ರೀಯನ್ನು ಕೇವಲ ಬಲಿಪಶುವನ್ನಾಗಿ ಕಾಣದೆ ಅವಳಲ್ಲಿ ಕರ್ತೃತ್ವ ಶಕ್ತಿಯನ್ನು ಗುರುತಿಸುವ ಮೂಲಕ ಅವಳ ಹೊಸ ಪ್ರತಿಮೆಗಳನ್ನು ಸೃಷ್ಟಿಸುವಲ್ಲಿಯೂ ಅವರು ಶಕ್ತರಾದರು. ಅವರ ಕಥೆಗಳಲ್ಲಿ ಆಶಾವಾದವೂ ಸೀಮಿತವಾಗಿ ಕಾಣಿಸಿಕೊಂಡಿತು"[೧೦] ಎಂದಿದ್ದಾರೆ.

ತ್ರಿವೇಣಿಯವರು 'ಹೆಂಡತಿಯ ಹೆಸರು' 'ಎರಡು ಮನಸ್ಸು' ಹಾಗೂ 'ಸಮಸ್ಯೆಯ ಮಗು' ಎಂಬ ಕಥಾಸಂಕಲನಗಳನ್ನು ಪ್ರಕಟಿಸಿದರು. 'ಸಮಸ್ಯೆಯ ಮಗು' ಇದು ರಾಜ್ಯ ಸರ್ಕಾರದ ಬಹುಮಾನವನ್ನು ಪಡೆದಿದೆ. ಪುರುಷ ವರ್ಗದ ಸ್ವಾರ್ಥ ಲಾಲಸೆ ಸಮಯ ಸಾಧಕತನ ವಂಚನೆಯ ಬುದ್ಧಿಗಳನ್ನು ಮತ್ತು ಹೆಣ್ಣಿನ ಸ್ವಾಭಿಮಾನ, ಉದಾತ್ತತೆಗಳನ್ನು ತಮ್ಮ ಕಥೆಗಳಲ್ಲಿ ಬಿಂಬಿಸಿದರು.

ಅನುಪಮಾ ನಿರಂಜನರು ವೃತ್ತಿಯಲ್ಲಿ ವೈದ್ಯೆಯಾದರೂ ಪ್ರವೃತ್ತಿಯಲ್ಲಿ ಬರಹಗಾರರು ಕಾದಂಬರಿ, ಕಥೆ, ವೈದ್ಯಶಾಸ್ತ್ರ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕೈಯಾಡಿಸಿದ್ವರು. ಇವರು ಬರೆದ ಕಥಾಸಂಕಲನ 'ಒಡಲು' ಮತ್ತು 'ಒಂದು ಘಟನೆ ಮತ್ತು ಅನಂತರ' ಕಥೆಯು ಪುರುಷ ಪ್ರಧಾನ ಸಮಾಜದ ಹೇಡಿತನ, ಸಂಕುಚಿತತೆಯನ್ನು ಸ್ತ್ರೀ ಶೋಷಣೆಯನ್ನು ಬಿಂಬಿಸುತ್ತದೆ. ಒಟ್ಟಿನಲ್ಲಿ ಮನೋವೈಜ್ಞಾನಿಕ ನಿಲುವನ್ನು ಇವರ ಕಥೆಗಳಲ್ಲಿ ಕಾಣಬಹುದು.

ನವ್ಯಕಾಲಘಟ್ಟದಲ್ಲಿ ಕೆಲವು ಬರಹಗಾರ್ತಿಯರು ಬಂದದ್ದನ್ನು ಗಮನಿಸಬಹುದು. ನವೋದಯದ ನಂತರ ನವ್ಯ ಚಳುವಳಿಯು ಹೆಣ್ಣನ್ನು ತಿಳಿಯುವಲ್ಲಿ ಮತ್ತು ಹೆಣ್ಣಿನ ಮನೋಭಾವವನ್ನು ಬಿಂಬಿಸುವಲ್ಲಿ ಸೋಲನ್ನು ಕಂಡಿತು. ಹೆಣ್ಣನ್ನು ಕುರಿತಂತೆ ಹೇಳುವಲ್ಲಿ ನವೋದಯ ಸಾಹಿತಿಗಳಷ್ಟು ಉದಾರತನವನ್ನು ನವ್ಯರು ತೋರಿಸಲಿಲ್ಲ. ಆದರೂ ಈ ಕಾಲಘಟ್ಟದಲ್ಲಿ ಕರಿಮೋಡದ ನಡುವೆ ಮಿಂಚುವ ಸುಳಿಮಿಂಚಿನಂತೆ ಕೆಲ ಲೇಖಕಿಯರು ಕಥೆಗಳನ್ನು ಬರೆದರು. ಬದುಕಿನ ಸಂಕೀರ್ಣತೆಯನ್ನು ತಮ್ಮ ಕೃತಿಗಳಲ್ಲಿ ಮೂಡಿಸಿದರು. ಇವರ ಕಾಲಘಟ್ಟವನ್ನು ಸ್ವಾತಂತ್ರ್ಯೋತ್ತರ ಕಾಲಘಟ್ಟವೆಂದೇ ಕರೆಯಬಹುದು.

ಅವರಲ್ಲಿ ಪ್ರಮುಖರಾದವರೆಂದರೆ ರಾಜಲಕ್ಷ್ಮೀ ಎನ್.ರಾವ್ ಮತ್ತು ವೀಣಾಶಾಂತೇಶ್ವರ "ಇವರ ಕತೆಗಳಲ್ಲಿ ನಾವು ನೋಡುವ ಅಂತರ್‌ಮುಖತೆ ಆತ್ಮ ಪ್ರಜ್ಞೆ, ದ್ವಂದ್ವಗಳ ಅರಿವು ನವ್ಯ ಮನೋಧರ್ಮದ ಆವಿಷ್ಕಾರಗಳು, ಕತೆಯನ್ನು ಕೇವಲ ಮನೋರಂಜನೆಗಾಗಲಿ ಸಾಮಾಜಿಕ ಜಾಗೃತಿಗಾಗಲಿ ಬಳಸದೆ ಇವರು ಇದನ್ನು ಸತ್ಯದ ಶೋಧದಂತೆ ಗಂಭೀರ ಪ್ರಯತ್ನಗಳಲ್ಲಿ ತೊಡಗಿಸಿದರು ಹಾಗೂ ಅದನ್ನು ಒಂದು ಪ್ರಬುದ್ಧ ಸಾಹಿತ್ಯ ಮಾಧ್ಯಮವನ್ನಾಗಿ ಬಳಸಿಕೊಂಡರು"[೧೧].

ಈ ಲೇಖಕಿಯರು ಉತ್ತಮ ಚಿಂತನೆಗಳನ್ನು ಒಡಮೂಡಿಸಿದರು. ರಾಜಲಕ್ಷ್ಮಿ ಎನ್.ರಾವ್ ನವ್ಯ ಕಥೆಗಳನ್ನು ಬರೆದ ಮಹಿಳೆಯರಲ್ಲಿ ಮೊದಲಿಗರು. ಇವರ 'ಫೀಡ್ರಾ' ಕಥೆ ಚಿಕ್ಕವಯಸ್ಸಿನ ಹೆಣ್ಣೊಬ್ಬಳು ತನಗಿಂತಲೂ ಎರಡು ವರ್ಷ ದೊಡ್ಡವನಾದ ಮಗನನ್ನು ಹೊಂದಿದ್ದ ವ್ಯಕ್ತಿಯಾದ ರಾಯರನ್ನು ಮದುವೆಯಾಗಿ ಅನುಭವಿಸುವ ಮನೋವೇದನೆಯನ್ನು ಪ್ರತಿಬಿಂಬಿಸುವ ಕಥೆಯಾಗಿದೆ.

ನವ್ಯ ಕಾಲಘಟ್ಟದಲ್ಲಿ ನವ್ಯತೆಯನ್ನೊಳಗೊಂಡಂತೆ ಕಥೆಗಳನ್ನು ರಚಿಸಿದ ಮತ್ತೊಬ್ಬ ಪ್ರಮುಖ ಕಥೆಗಾರ್ತಿ 'ವೀಣಾ ಶಾಂತೇಶ್ವರ' ಅವರ ಪ್ರಪಥಮ ಕಥಾಸಂಕಲನ 'ಮುಳ್ಳುಗಳು' ಪುಸ್ತಕಕ್ಕೆ ಬರೆದ ಟಿಪ್ಪಣಿಯಲ್ಲಿ ಶಾಂತಿನಾಥ ದೇಸಾಯಿಯವರ ಈ ತಿರುವಿನ ಲಕ್ಷಣಗಳನ್ನು ಅತ್ಯಂತ ಸಮರ್ಪಕವಾಗಿ

ಗುರುತಿಸಿದರು. ಈ ಕಥೆಗಳಲ್ಲಿ ವಿಮರ್ಶಕನ ಕುತೂಹಲವನ್ನು ಕಾಳಜಿಯನ್ನು ಕೆರಳಿಸುವ ವಿಷಯವೆಂದರೆ ಅವುಗಳಲ್ಲಿಯ ಕಥನಕಲೆಯ ಸ್ವರೂಪ ಮತ್ತು ಅಭಿವ್ಯಕ್ತಿಯ ರೀತಿ, "ವೀಣಾ ಅವರ ಕಥೆಗಳಲ್ಲಿ ಕಾಣಿಸಿಕೊಂಡ ನವ್ಯತೆ, ಒಂದು ಕೇಂದ್ರ ಪ್ರತಿಮೆಯ ಸುತ್ತ ಕಥೆ ಹೆಣೆಯುವ ಕಲೆ, ಅನುಭವವನ್ನು ಎದುರಿಸುವ ದಿಟ್ಟತನ, ತೀಕ್ಷ್ಣ ಕಲಾಪ್ರಜ್ಞೆ, ಭಾಷೆಯ ಮೇಲಿನ ಸಹಜ ಪ್ರಭುತ್ವ ಇವುಗಳತ್ತ ಓದುಗರ ಲಕ್ಷ್ಯವನ್ನು ಕೇಂದ್ರೀಕರಿಸುತ್ತಾರೆ"[೧೨] ಎಂದಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ೧೯೭೦ ರಿಂದೀಚೆಗೆ ದಲಿತ ಬಂಡಾಯ ಸಾಹಿತ್ಯ ಉಗಮಗೊಂಡಿತು 'ತೇಜಸ್ವಿ'ಯವರ 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನದ ಮೂಲಕ ನವ್ಯದ ಅವಸಾನವನ್ನು ಅಲ್ಲದೆ ಹೊಸ ಸಾಹಿತ್ಯ ಚಳುವಳಿಯೊಂದರ ಉಗಮವನ್ನು ಗುರ್ತಿಸಬಹುದು. ಈ ಸಂದರ್ಭದಲ್ಲಿ ಬರೆದ ಲೇಖಕಿಯರಿಗೇನೂ ಕಡಿಮೆಯಿಲ್ಲ.

೧೯೭೦ರ ನಂತರ ಬರೆಯತೊಡಗಿದ ಲೇಖಕಿಯರು ಒಂದಿಲ್ಲೊಂದು ರೀತಿಯಿಂದ ಜಾಗತಿಕ ಸ್ವರೂಪದ ಸ್ತ್ರೀಮುಕ್ತಿ ಚಳುವಳಿಗಳಿಂದ ಪ್ರಭಾವಿತರಾದರು. ಇವರು ಬರೆಯುತ್ತಿರುವ ವೇಳೆಗೆ ಸಮಾಜದಲ್ಲಿಯೂ ಸಾಕಷ್ಟು ಸ್ಥಿತ್ಯಂತರಗಳಾಗಿದ್ದವು. ಮಹಿಳೆಗೆ ಇಂದು ಎಲ್ಲಾ ಕಾರ್ಯಕ್ಷೇತ್ರಗಳೂ ಮುಕ್ತವಾಗಿವೆಯಲ್ಲದೆ ಶಿಕ್ಷಣದ ಎಲ್ಲ ಪ್ರಕಾರಗಳೂ ಲಭ್ಯವಿದೆ. ಹೀಗಾಗಿ ಅವಳ ಅನುಭವ ಹಿಂದೆ ಎಂದೂ ಇಲ್ಲದ ವ್ಯಾಪ್ತಿ. ವೈವಿಧ್ಯಗಳನ್ನು ಹೊಂದಿದೆ. ಅದರ ಜೊತೆಗೆ ಸಮಾನತೆ, ಸ್ವಾತಂತ್ರ್ಯಗಳು ಹೊಸ ಸಮಸ್ಯೆಗಳಿಗೆ ಹುಟ್ಟು ಹಾಕಿವೆ. ಗಂಡು ಹೆಣ್ಣಿನ ಸಂಬಂಧಗಳಲ್ಲಿಯೂ ಬಿಕ್ಕಟ್ಟು ತಲೆದೋರಿದೆ".[೧೩] ಅಂದರೆ ಹೆಣ್ಣನ್ನು, ಹೆಣ್ತನಗಳನ್ನು ತೀರಾ ಹಿಂದಿನವರು ನೋಡುವುದಕ್ಕಿಂತ ಭಿನ್ನ ನೆಲೆಯಲ್ಲಿ ನಿಂತು ನೋಡುವ ಚಿಂತಿಸುವ ಪರಿಪಾಠವನ್ನು ನಮ್ಮ ಕಥೆಗಾರ್ತಿಯರು ಈ ಸಂದರ್ಭದಲ್ಲಿ ಬೆಳೆಸಿಕೊಂಡರು.

ವಸಾಹತುಶಾಹಿ ವ್ಯವಸ್ಥೆ ಮತ್ತು ಇಂಗ್ಲೀಷ್ ಶಿಕ್ಷಣದ ಪ್ರಭಾವ ಮತ್ತು ರೊಮ್ಯಾಂಟಿಕ್ ಸಾಹಿತ್ಯದ ಪ್ರಭಾವದಿಂದಾಗಿ ರೂಪುಗೊಂಡ ನವೋದಯ ಸಾಹಿತ್ಯ ಹೆಣ್ಣಿನ ವಿಷಯದಲ್ಲಿ ಗೌರವ ಭಾವನೆಯನ್ನು ತಳೆದರೆ, ಪ್ರಗತಿಶೀಲರು ಸ್ತ್ರೀ ಶೋಷಣೆ ಚಿತ್ರಿಸುತ್ತೇವೆಂದು ಹೊರಟು ವಿಫಲರಾದರು. ನವ್ಯದವರು ಹೆಣ್ಣನ್ನು ಭೋಗದ ವಸ್ತುವನ್ನಾಗಿ ಚಿತ್ರಿಸಲು ತೊಡಗಿದರು. ಆದರೆ ದಲಿತ ಬಂಡಾಯ ಚಳವಳಿಯ ಕಾಲಘಟ್ಟದಲ್ಲಿ ಹೆಣ್ಣು ಓರ್ವವ್ಯಕ್ತಿತ್ವವಾಗಿ, ಸಂಗಾತಿಯಾಗಿ, ಮನೆಯ ಯಜಮಾನ್ತಿಯಾಗಿ ಚಿತ್ರಣಗೊಂಡಿದ್ದನ್ನು ಕಾಣಬಹುದು.

ಈ ನಿಟ್ಟಿನಲ್ಲಿ ಬರೆದ ಕಥೆಗಾರ್ತಿಯರೆಂದರೆ ವೈದೇಹಿ, ನೇಮಿಚಂದ್ರ, ಬಿ. ಟಿ. ಲಲಿತಾ ನಾಯಕ್, ಗೀತಾನಾಗಭೂಷಣ, ಎಂ. ಎಸ್. ವೇದಾ, ಗಂಗಾ ಪಾದೇಕಲ್, ಶಶಿಕಲಾ ವೀರಯ್ಯಸ್ವಾಮಿ, ಹೆಚ್. ನಾಗವೇಣಿ, ಸಾರಾ ಅಬೂಬಕ್ಕರ್, ಭಾನುಮುಷ್ತಾಕ್ ಮೊದಲಾದವರು ತಮ್ಮ ಕಥೆಗಳಲ್ಲಿ ಸ್ತ್ರೀ ಸಂವೇದನೆ ಮತ್ತು ಸ್ತ್ರೀವಾದವನ್ನು ಕುರಿತು ಚಿಂತಿಸಿದರು. ಇವರ ಕಥೆಗಳು ಸಾಮಾನ್ಯವಾಗಿ ನೊಂದಹೆಣ್ಣಿನ ಸುತ್ತ ಸುತ್ತುವರೆಯುತ್ತಿದ್ದವು ಅಲ್ಲದೆ ಕೆಲವೊಮ್ಮೆ ಹೆಣ್ಣಿನಿಂದ ಗಂಡಿಗೊದಗುವ ಆಪತ್ತುಗಳನ್ನು ಕುರಿತು ಚಿಂತಿಸಿದರೆನ್ನಬಹುದು.

ಗೀತಾನಾಗಭೂಷಣರವರು "ವೈದೇಹಿ, ಸಾರಾ ಅಬೂಬಕ್ಕರ್, ನೇಮಿಚಂದ್ರರಂಥ ಹೊಸ ತಲೆಮಾರಿನ ಲೇಖಕಿಯರಿಗೆ ತಮ್ಮ ಪರಿಸರದ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಸ್ವರೂಪದ ಅರಿವಿರುವುದರಿಂದ ಅವರು ಬರೆಯುತ್ತಿರುವ ಕಥೆಗಳು ಮೊದಲಿನವರ ಕಥೆಗಳಿಗಿಂತ ಭಿನ್ನವಾಗಿವೆ. ಸಮಾಜದ ಎಲ್ಲ ಸ್ತರಗಳಿಂದಲೂ ಲೇಖಕಿಯರು ಎದ್ದು ಬರುತ್ತಿರುವುದರಿಂದ ಸಂಸ್ಕೃತಿಯ ಬೇರೆ ಬೇರೆ ಮುಖಗಳು ಭಾಷೆಯಲ್ಲಿ ಒಡಮೂಡುತ್ತಿವೆ. ಕನ್ನಡದ ಸಣ್ಣಕಥೆಯ ಭವಿಷ್ಯದ ದೃಷ್ಟಿಯಿಂದ ಇವೆಲ್ಲ ಒಳ್ಳೆಯ ಚಿನ್ಹೆಗಳು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ"[೧೪] ಎಂದಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ತಲೆಮಾರಿನ ಲೇಖಕಿಯರೆಂದರೆ ನೆಲ್ಲಿಕಾರು ರಾಧಾಬಾಯಿ, ಸರಸ್ವತಿಬಾಯಿ ರಾಜವಾಡೆ, ವಾಸಂತಿಬಾಯಿ ಪಡುಕೋಣೆ, ಪಡುಕೋಣೆ ಸೀತಾದೇವಿ ಮತ್ತು ಬೆಳ್ಳಿ ಸೀತಾರತ್ನಮ್ಮ, ಇವರೆಲ್ಲ ಇಪ್ಪತ್ತರ ದಶಕದಲ್ಲಿ ಸಾಹಿತ್ಯ ರಚನೆಗೆ ತೊಡಗಿದವರು. ನಲ್ವತ್ತರ ದಶಕದಲ್ಲಿ ಸಾಹಿತ್ಯ ರಚನೆಗೆ ತೊಡಗಿದವರೆಂದರೆ, ಉಡುಪಿ ಪರಿಸರದಲ್ಲಿ ಭಾರತೀಯ ಪಣಿಯಾಡಿ, ಕೃಷ್ಣವೇಣಿ ಬಾಯಿ, ಲೀಲಾಬಾಯಿ ಕಾಮತ್, ಪಿ. ಮಂದಾಕಿನೀ ಬಾಯಿ, ಕಮಲಾಕ್ಷಿ ಮಟ್ಪಾಡಿ ಮತ್ತು ಗುಣ ಉದ್ಯಾವರ, ಮಂಗಳೂರು ಸುತ್ತಮುತ್ತಲಿನ ಲೇಖಕಿಯರು ಲಲಿತಾ ಬಿ., ಕೆ. ಸುಶೀಲಾ, ವಾರಿಜಾಬಾಯಿ ಕೆ. ಮತ್ತು ವತ್ಸಲಾ ತಾಳಿತ್ತಾಯ. ಸಾ. ಫಾತಿಮಾ ಎಂಬವರ ಒಂದು ಕತೆ ನಲವತ್ತರ ದಶಕದ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದ್ದು, ಅವರ ಬಗ್ಗೆ ಹೆಚ್ಚಿಗೇನೂ ಮಾಹಿತಿ ದೊರೆತಿಲ್ಲ. ಇತರ ಬರಹಗಳೂ ಉಪಲಬ್ಧವಿಲ್ಲ. ದೊರೆತಲ್ಲಿ ಅವರು ಜಿಲ್ಲೆಯ ಮೊದಲ ಮುಸ್ಲಿಂ ಲೇಖಕಿ ಎನಿಸಿಕೊಳ್ಳುತ್ತಾರೆ. ಈ ಮೂವತ್ತು ವರುಷಗಳ ಅವಧಿಯಲ್ಲಿ ಕಾಣಿಸಿಕೊಳ್ಳುವ ಹೆಚ್ಚಿನ ಲೇಖಕಿಯರು ಕಥನ ಸಾಹಿತ್ಯವನ್ನು ಸಾಹಿತ್ಯಾಭಿವ್ಯಕ್ತಿಯ ಮಾಧ್ಯಮವಾಗಿ ಆಯ್ದುಕೊಂಡವರು.

ಈ ಜಿಲ್ಲೆಯಲ್ಲೇ ಇದ್ದ ಲೇಖಕಿಯರ ಒಳಗೂ ಸಂಪರ್ಕ ಇದ್ದುದೇ ಕಡಿಮೆ. ಒಬ್ಬೊಬ್ಬರೂ ಒಂದೊಂದು ದ್ವೀಪವಾಗಿ ಆ ಮಿತಿಯೊಳಗೇ ಬರೆದರು. ಗಂಭೀರವಾಗಿ ಸಾಹಿತ್ಯ ರಚನೆಯನ್ನು ಕೈಗೊಂಡವರ ಸಂಖ್ಯೆ ಕಡಿಮೆ. ಬರೆಯುವ ಸಾಮರ್ಥ್ಯವಿದೆ ಎಂದು ಭರವಸೆ ಹುಟ್ಟಿಸಿದ ಕೆಲವು ಲೇಖಕಿಯರು ಅಕಾಲ ಮೃತ್ಯುವಿಗೆ ಒಳಗಾದರು. (ಭಾರತೀಬಾಯಿ ಪಣಿಯಾಡಿ, ಕೃಷ್ಣವೇಣಿಬಾಯಿ)

"ಅಂದಿನ ಸಾಹಿತ್ಯದ ಮುಖ್ಯ ಸಮಸ್ಯೆಗಳೆನಿಸಿದ ಸ್ತ್ರೀಯರ ಸಮಸ್ಯೆಗಳೇ ಲೇಖಕಿಯರ ಕಥನ ಸಾಹಿತ್ಯದ ವಸ್ತುಗಳೂ ಆಗಿದ್ದವು. ಬಾಲ್ಯವಿವಾಹ, ವರದಕ್ಷಿಣೆ, ವಿಧವೆಯ ನಿಕೃಷ್ಟ ಬದುಕು, ವಿಷಮ ವಿವಾಹ ಮುಂತಾದ ಸಮಸ್ಯೆಗಳ ನಿವಾರಣೆ ಲೇಖಕಿಯರ ಕಾಳಜಿಗಳಾಗಿದ್ದವು. ಈ ಸಮಸ್ಯೆಗಳ ನಿವಾರಣೆಗೆ ಲೇಖಕಿಯರು ಸೂಚಿಸುತ್ತಿದ್ದ ಪರಿಹಾರಗಳು ಅದೇ ಕಾಲದ ಪುರುಷರ ಚಿಂತನಾಕ್ರಮಗಳಿಗಿಂತ ಭಿನ್ನವಾಗಿದ್ದವು ಎಂಬುದು ಮೇಲ್ನೋಟಕ್ಕೆ ಗಮನಕ್ಕೆ ಬರುತ್ತವೆ."[೧೫]

ಕಾವ್ಯ, ನಾಟಕ, ಅನುವಾದ, ಆತ್ಮಚರಿತ್ರೆ ಮುಂತಾದ ಸಾಹಿತ್ಯ ಪ್ರಕಾರಗಳನ್ನು ಕೆಲವೇ ಲೇಖಕಿಯರು ಅಭಿವ್ಯಕ್ತಿ ಮಾಧ್ಯಮವಾಗಿ ಮಾಡಿಕೊಂಡಿದ್ದಾರೆ.

ಸರಸ್ವತಿಬಾಯಿ ರಾಜವಾಡೆ ಮತ್ತು ವಾಸಂತಿಬಾಯಿ ಪಡುಕೋಣೆಯನ್ನು ದಕ್ಷಿಣ ಕನ್ನಡದ ಮಹಿಳಾ ಸಾಹಿತ್ಯದ ಹರಿಕಾರರೆಂದು ಕರೆಯಬಹುದು. ಇವರಿಬ್ಬರೂ ಸರಿ ಸುಮಾರು ಒಂದೇ ಹೊತ್ತಿಗೆ ಬರೆವಣಿಗೆಯನ್ನು ಆರಂಭಿಸಿದರು. ಅಲ್ಲದೆ ಸಮಕಾಲೀನರಿಗಿಂತ ಭಿನ್ನವಾದ ಹಾಗೂ ವೈವಿಧ್ಯಮಯವಾದ ಸಾಹಿತ್ಯ ಕೃತಿಗಳನ್ನು ನೀಡಿದ್ದಾರೆ. ಇವರು ಕಾವ್ಯ, ಕತೆ, ನಾಟಕ ಮತ್ತು ಪ್ರಬಂಧಗಳನ್ನು ರಚಿಸಿದ್ದಾರೆ. 'ಆಹುತಿ ಇತ್ಯಾದಿ ಕತೆಗಳು', 'ಕದಂಬ' ಮತ್ತು 'ಪ್ರೇಮ ವಿವಾಹ' ಇವರ ಕಥಾಸಂಕಲನಗಳು. 'ಪರಿಣಯ' ಎಂಬುದು ಇವರು ಮರಾಠಿಯಿಂದ ಅನುವಾದ ಮಾಡಿದ ನಾಟಕವಾದರೆ, 'ಸಾರ್ಥಕ ಜೀವನ', 'ನಲ್ಮೆಯ ಸೋದರ', ಸಂತಮೀರ' ಇವು ರಾಜವಾಡೆಯವರ ಸ್ವತಂತ್ರ ನಾಟಕಗಳು. "ನಾಯಕಿ ಪ್ರಧಾನವಾದ ಕತೆಗಳ ರಚನೆ, ಸ್ತ್ರೀಪರ ದೃಷ್ಟಿಕೋನ, ಸಾಮಾಜಿಕ ಅನಿಷ್ಟ ಪದ್ಧತಿಗಳ ಕುರಿತಂತೆ ಪ್ರಕಟಿಸುವ ವ್ಯಂಗ್ಯ, ಪ್ರತಿಭಟನೆ, ತೀಕ್ಷ್ಣ ವಿಮರ್ಶಾತ್ಮಕ ದೃಷ್ಟಿಕೋನ ಹಾಗೂ ದಿಟ್ಟತನಗಳು ರಾಜವಾಡೆಯವರ ವ್ಯಕ್ತಿತ್ವ ಮತ್ತು ಸಾಹಿತ್ಯದ ಮುಖ್ಯ ಗುಣಗಳಾಗಿವೆ."[೧೬] ಅಂಕಣಕಾರ್ತಿಯಾಗಿ ವನಿತಾವಿಭಾಗದ ಸಂಪಾದಕಿಯಾಗಿ, ಮಹಿಳೆಯರಿಗಾಗೇ ಪತ್ರಿಕೆಯೊಂದನ್ನು ಹೊರಡಿಸಿ ರಾಜವಾಡೆಯವರು ಸಮಕಾಲಿನ ಮತ್ತು ಮುಂದಿನ ತಲೆಮಾರಿನ ಲೇಖಕಿಯರಿಗೆ ಮಾದರಿಯಾಗಿದ್ದಾರೆ.

ವಾಸಂತಿಬಾಯಿ ಪಡುಕೋಣೆ ಅವರು ಮುಖ್ಯವಾಗಿ ಕಥಾ ಪ್ರಕಾರದಲ್ಲಿ ಕೆಲಸ ಮಾಡಿದವರು. ಆಗಿನ ಸಮಾಜದ ಮುಖ್ಯ ಸಮಸ್ಯೆಗಳೆನಿಸಿದ ಬಾಲ್ಯವಿವಾಹ, ವಿಧವಾ ಸಮಸ್ಯೆ ಮುಂತಾದವು ಇವರ ಕಥೆಗಳ ವಸ್ತುಗಳಾಗಿವೆ. ಅದೇ ರೀತಿ ವಿವಾಹದ ಚೌಕಟ್ಟಿನ ಹೊರಗಿನ ಗಂಡು ಹೆಣ್ಣಿನ ಸಂಬಂಧದ ವೈಪರೀತ್ಯ ತೀವ್ರತೆಗಳು ಇವರ ಕಥೆಯ ಭಿತ್ತಿಗಳಾಗಿರುವಂತೆ ಸಂಸಾರದೊಳಗಿನ ಭಾವಶೂನ್ಯ ಸಂಬಂಧಗಳೂ ಕಥಾ ಭಿತ್ತಿಗಳಾಗಿವೆ. ಅನುವಾದಕಿಯಾಗಿ, ಮಹಿಳಾ ಆತ್ಮಚರಿತ್ರೆಯ ಹರಿಕಾರರಾಗಿ ಹಿಂದಿ ಚಲನಚಿತ್ರಗಳಿಗೆ ಸ್ಕ್ರಿಪ್ಟ್ ಬರೆದುಕೊಡುವವರಾಗಿ ವಾಸಂತಿಬಾಯಿಯವರು ಹೋರಾಟದ ಬದುಕನ್ನು ಬಾಳಿದವರು.

ಪಡುಕೋಣೆ ಸೀತಾದೇವಿ, ಬೆಳ್ಳೆ ಸೀತಾರತ್ನಮ್ಮ ಮತ್ತು ಲೀಲಾಬಾಯಿ ಕಾಮತ್ ಇವರುಗಳು ಅನುವಾದ ಸಾಹಿತ್ಯದಲ್ಲೂ ಕೆಲಸ ಮಾಡಿದ್ದಾರೆ. ಬೆಳ್ಳೆ ಸೀತಾರತ್ನಮ್ಮ ಭಗವದ್ಗೀತೆಯನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದರೆ, ಪಡುಕೋಣೆ ಸೀತಾದೇವಿಯವರು ಮರಾಠಿ ಮತ್ತು ಇಂಗ್ಲೀಷ್ ಭಾಷೆಗಳಿಂದ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಲೀಲಾಬಾಯಿ ಕಾಮತ್ ಅವರು ಹಿಂದಿ, ಮರಾಠಿ ಮತ್ತು ಬಂಗಾಲಿ ಭಾಷೆಗಳ ಕೆಲವು ಅತ್ಯುತ್ತಮ ಕತೆಗಳನ್ನು ಕನ್ನಡದ ಓದುಗರಿಗೆ ನೀಡಿದರು.

ಎಪ್ಪತ್ತರ ದಶಕದವರೆಗಿನ ಜಿಲ್ಲೆಯ ಮಹಿಳಾ ಸಾಹಿತ್ಯ ವಿಶೇಷವಾಗಿ ಕಥನ ಸಾಹಿತ್ಯದಲ್ಲಿ ದೃಷ್ಟಿಯನ್ನು ಕೇಂದ್ರೀಕರಿಸಿತ್ತು. ಶಿಕ್ಷಣ ಮತ್ತು ಸಾಹಿತ್ಯ ರಂಗಗಳಲ್ಲಿ ತಮಗೆ ದೊರೆತ ಅವಕಾಶಕ್ಕಾಗಿ ಲೇಖಕಿಯರು ಧನ್ಯತಾಭಾವದಲ್ಲಿ ಮುಳುಗಿದ್ದರು. ಹೀಗಾಗಿ ಸ್ತ್ರೀಯರ ಸಮಸ್ಯೆಗಳ ಕುರಿತಂತೆ ಪ್ರಗತಿಪರವಾಗಿ ಚಿಂತಿಸುವ, ಪರ್ಯಾಯ ಮಾರ್ಗಗಳತ್ತ ಗಮನಹರಿಸುವ ಸಾಹಿತ್ಯ ಪುರುಷರಿಂದ ಬರುತ್ತಿದ್ದಾಗಲೂ, ಈ ಲೇಖಕಿಯರದು ಸಾಂಪ್ರದಾಯಿಕ ನಿಲುವೇ ಆಗಿರುತ್ತಿತ್ತು.

ಎಪ್ಪತ್ತರ ದಶಕದ ಕೊನೆಯ ಭಾಗದಿಂದ ದಕ್ಷಿಣ ಕನ್ನಡದ ಮಹಿಳಾ ಸಾಹಿತ್ಯ ಭಿನ್ನ ಆಯಾಮವನ್ನು ಪಡೆದಿದೆ. ಈ ಅವಧಿಯಲ್ಲಿ ಹಲವು ಸಾಮಾಜಿಕ ಸ್ತರಗಳ ಲೇಖಕಿಯರು ಕಾಣಿಸಿಕೊಂಡರು. ಸಾಹಿತ್ಯದ ವಿವಿಧ ಪ್ರಕಾರಗಳ ಮೂಲಕ ಮನಬಿಚ್ಚಿ ಮಾತಾಡಲು ತೊಡಗಿದರು. ಬಂಡಾಯ – ದಲಿತ ಚಳುವಳಿಯ ಪ್ರಭಾವ ಲೇಖಕಿಯರ ಮೇಲೂ ಆಗಿದೆ. ಈ ಎರಡು ದಶಕಗಳ ಅವಧಿಯಲ್ಲಿ ಅನೇಕ ಹೊಸ ಲೇಖಕಿಯರು ಸಾಹಿತ್ಯ ರಂಗವನ್ನು ಪ್ರವೇಶಿಸಿದ್ದಾರೆ. ಪ್ರಬುದ್ಧ ಲೇಖಕಿಯರನ್ನು ಗುರುತಿಸಲು ಸಾಧ್ಯವಾಗಿದೆ. ಭರವಸೆ ಮೂಡಿಸುವ ಹಲವು ಕೃತಿಗಳು ಬಂದಿವೆ.

ಸ್ತ್ರೀವಾದಿ ನೆಲೆಯಿಂದ ಬರೆಯುತ್ತಿರುವ ಇಂದಿರಾ ಹೆಗ್ಗಡೆಯವರು ಎರಡು ಕಥಾಸಂಕಲನಗಳನ್ನೂ, ಮೂರು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಅವರ 'ಬದಿ' ಎಂಬ ಕಾದಂಬರಿ ಬಂಟ ಸಮಾಜದ ಜೀವನಕ್ರಮವನ್ನು ಸ್ತ್ರೀವಾದಿ ನೋಟದಿಂದ ವಿಶ್ಲೇಷಿಸಿಸುತ್ತದೆ. 'ನಾಕನೇ ನೀರು' ಕಥಾಸಂಕಲನದ ಮೂಲಕವಾಗಿ ಪರಿಚಿತರಾದ ನಾಗವೇಣಿ ಎಚ್. ದಕ್ಷಿಣ ಕನ್ನಡದ ಭರವಸೆ ಮೂಡಿಸುವ ಹೊಸ ತಲೆಮಾರಿನ ಲೇಖಕಿಯಾಗಿದ್ದಾರೆ. ಇವರ 'ಗಾಂಧಿ ಬಂದ' ಕಾದಂಬರಿ ಲೇಖಕಿಯ ಬರವಣಿಗೆಯ ಗಟ್ಟಿತನಕ್ಕೆ ಸಾಕ್ಷಿಯಾಗಿದೆ. ದಕ್ಷಿಣ ಕನ್ನಡಕ್ಕೆ ಗಾಂಧೀಜಿ ಬಂದ ವಿಷಯವನ್ನು ಹಿನ್ನೆಲೆಯಾಗಿಟ್ಟುಕೊಂಡು ತುಳುನಾಡಿನ ಸಾಂಸ್ಕೃತಿಕ ಒಳವಿವರಗಳನ್ನು ಬಿಡಿಸಿಟ್ಟ ಕಾದಂಬರಿಯ ನೇಯ್ಗೆ ಕನ್ನಡದ ಎಲ್ಲ ವರ್ಗದ ಓದುಗರನ್ನು ಆಕರ್ಷಿಸುತ್ತದೆ.

ಗಂಗಾ ಪಾದೇಕಲ್, ಲಲಿತಾ ಎಸ್.ಎನ್. ಭಟ್, ಲೀಲಾ ಮಣ್ಣಾಲ, ಯಜ್ಞಾವತಿ ಕೇಶವ ಕಂಗೆನ್, ಯಶವಂತಿ ಎಸ್. ಸುವರ್ಣ, ಯಶೋಧಾ ಜೆನ್ನಿ, ಬಿ.ಎಂ. ರೋಹಿಣಿ, ಸವಿತಾ ಎಸ್. ಭಟ್, ಅಡ್ವಯಿ, ಇಂದಿರಾ ಹಾಲಂಬಿ, ರತ್ನಾ ಜಿ.ಕೆ. ಶೆಟ್ಟಿ, ಸುಶೀಲಾ ಆರ್. ರಾವ್, ಎಚ್. ಶಕುಂತಲಾ ಭಟ್, ಕೆ. ಉಷಾ ಪಿ. ರೈ, ಕ್ಯಾಥರೀನ್ ರಾಡ್ರಿಗಸ್ ಹೀಗೆ ಇನ್ನೂ ಹಲವರು ಕಥನ ಸಾಹಿತ್ಯದಲ್ಲಿ ಕೆಲಸ ಮಾಡಿದವರಿದ್ದಾರೆ.

ಕನ್ನಡದೊಂದಿಗೆ ತುಳು ಸಾಹಿತ್ಯದಲ್ಲೂ ತೊಡಗಿಸಿಕೊಂಡ ಲೇಖಕಿಯರು ಹಲವರಿದ್ದಾರೆ. ಎಂ. ಜಾನಕಿ ಬ್ರಹ್ಮಾವರ, ಕ್ಯಾಥರೀನ್ ರಾಡ್ರಿಗಸ್, ಅತ್ರಾಡಿ ಅಮೃತಾ ಶೆಟ್ಟಿ ಇವರುಗಳು ದ್ವಿಭಾಷಾ ಲೇಖಕಿಯರಾಗಿದ್ದಾರೆ. ಜಾನಕಿ ಬ್ರಹ್ಮಾವರ ಅವರ 'ಕುದುರದ ಕೇದಗೆ' ತುಳು ಪರಿಸರವನ್ನು ಬಿಂಬಿಸುವ ಕಾದಂಬರಿಯಾಗಿದೆ. ಅತ್ರಾಡಿ ಅಮೃತಾ ಶೆಟ್ಟಿ, ಕ್ಯಾಥರೀನ್ ರಾಡ್ರಿಗಸ್ ಅವರ ಕಥೆಗಳು, 'ಅತ್ಯುತ್ತಮ ತುಳು ಕಥೆಗಳು' ಸಂಕಲದಲ್ಲಿ ಸೇರ್ಪಡೆಗೊಂಡಿವೆ. ರಾಜವಾಡೆಯವರು ಎಲ್ಲರಿಗಿಂತಲೂ ಹೆಚ್ಚು ಗಂಭೀರವಾಗಿ ಕಥಾಸಾಹಿತ್ಯವನ್ನು ಬೆಳೆಸಿದವರು.

## ೨.೨ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಕರಾವಳಿ ಮಹಿಳಾ ಸುಧಾರಣಾ ಚಳುವಳಿಗಳು

ಸಮಾಜದ ಒಟ್ಟು ಜನಸಂಖ್ಯೆಯ ಅರ್ಧಭಾಗದಷ್ಟು ಇರುವ ಮಹಿಳೆಯನ್ನು ಪುರುಷ ಪ್ರಧಾನ ವ್ಯವಸ್ಥೆ ತನ್ನ ಭೋಗದ ಸಾಧನವಾಗಿಯೆ ಪರಿಗಣಿಸಿಕೊಂಡು ಬಂದಿದೆ. ಮಹಿಳೆಗೆ ಸ್ವತಂತ್ರ ವ್ಯಕ್ತಿತ್ವವನ್ನು

ನಿರಾಕರಿಸಿ ತನ್ನ ಸುಪರ್ದಿಯಲ್ಲಿಯೇ ಬಾಳುವಂತೆ ರೂಪಿಸಿಕೊಂಡ ವ್ಯವಸ್ಥೆಯನ್ನು ಮಹಿಳೆ ಪ್ರಶ್ನಿಸುವ, ವಿರೋಧಿಸುವ, ಪ್ರತಿಭಟಿಸುವ ನಿರಂತರ ಪ್ರಯತ್ನದಲ್ಲಿ ತೊಡಗಿದ್ದಾಳೆ. ಸ್ವಾತಂತ್ರ್ಯ ಚಳುವಳಿ, ಸಮಾಜ ಸುಧಾರಣೆಯ ಚಳುವಳಿಗಳು, ವಿದ್ಯಾಭ್ಯಾಸದ ಕಾರಣಗಳಿಂದಾಗಿ ಮಹಿಳೆಯಲ್ಲಿ ಜಾಗೃತಿ ಉಂಟಾಗತೊಡಗಿದೆ.

ಸಾಮಾಜಿಕ ವ್ಯವಸ್ಥೆಯು ಶೋಷಣೆ ಮಾಡುವ ಮತ್ತು ಎಲ್ಲ ರಂಗಗಳಲ್ಲಿ ಅವಕಾಶ ವಂಚಿತೆಯರನ್ನಾಗಿ ಮಾಡುವ ಹುನ್ನಾರಗಳನ್ನು ಕ್ರಮೇಣ ಅರ್ಥಮಾಡಿಕೊಂಡ ಮಹಿಳೆ ನಿರಂತರವಾಗಿ ಹೋರಾಡಿ ತನ್ನ ಹಕ್ಕನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಾ ಬರಬೇಕಾಗಿ ಬಂದಿದೆ. ಕರಾವಳಿ ಜಿಲ್ಲೆಯ ಚರಿತ್ರೆಯಲ್ಲಿ ಮಹಿಳಾ ಧ್ವನಿಗೆ, ಚಳವಳಿಗೆ ಒಂದು ದೀರ್ಘವಾದ ಇತಿಹಾಸವಿದೆ. ಸ್ವಾತಂತ್ರ್ಯಪೂರ್ವ ಕಾಲಘಟ್ಟದಿಂದ ತೊಡಗಿ ಸ್ವಾತಂತ್ರ್ಯೋತ್ತರ ಕಾಲವನ್ನು ಹಾದು ನಮ್ಮ ವರ್ತಮಾನದ ಕಾಲಘಟ್ಟದ ತನಕ ಹಲವಾರು ಮಹಿಳೆಯರು ತಮ್ಮ ಹಕ್ಕಿಗಾಗಿ ಮತ್ತು ಮಹಿಳಾ ಶೋಷಣೆಯ ವಿರುದ್ಧ ಸಂಘಟಿತರಾಗಿ ಹೋರಾಡುತ್ತಾ ಬಂದಿದ್ದಾರೆ.

ಸಾಮಾಜಿಕ ಸುಧಾರಣಾ ಕ್ಷೇತ್ರದಲ್ಲಿ ಕ್ರಾಂತಿಕಾರಿ ಕೆಲಸವನ್ನು ಮಾಡಿದವರು ದಕ್ಷಿಣ ಕನ್ನಡ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರ್ತಿ ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಅವರ ಸಮಕಾಲೀನರಾದ ಕಾರ್ಕಳ ಸಮೀಪದ ಪಂಡಿತ ರಮಾಬಾಯಿಯವರು ವೇದಾಧ್ಯಯನವನ್ನು ಮಾಡಿ, ಅನಂತರ ಸಾಮಾಜಿಕ ಸಂಪ್ರದಾಯವನ್ನು ಮುರಿದು ಬೆಳೆದವರು. ವೈಧವ್ಯವನ್ನು ಅನುಭವಿಸಿದ ಅವರು ನಂತರ ಧರ್ಮ ಬದಲಾಯಿಸಿ ಕ್ರೈಸ್ತರಾದರು. ಅನಾಥ ಮತ್ತು ವಿಧವಾ ಸ್ತ್ರೀಯರ ಕಲ್ಯಾಣ ಹಾಗೂ ರಕ್ಷಣೆಗಾಗಿ ಹೋರಾಡಿದರು. ಮಹಿಳೆಯರ ಹಿತಕ್ಕಾಗಿ, ಶಿಕ್ಷಣಕ್ಕಾಗಿ, ಹಕ್ಕಿಗಾಗಿ ಹೋರಾಡಿದ ಹರಿಜನ ಸುಧಾರಕ ಕುದ್ಮುಲ್ ರಂಗರಾಯರ ಪುತ್ರಿ ರಾಧಾಬಾಯಿ ಸುಬ್ಬರಾಯನ್ ಅನ್ಯಜಾತಿಯ ಯುವಕನನ್ನು ಮದುವೆಯಾಗಿ ಜಾತಿ ಪದ್ಧತಿಯನ್ನು ಇಪ್ಪತ್ತನೆಯ ಶತಮಾನದ ಆರಂಭದಲ್ಲೇ ಮುರಿದರು. ಇವರು ಸಮಾಜಸೇವೆ ಸ್ವಾತಂತ್ರ್ಯ ಹೋರಾಟಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು.

ಮಹಿಳಾ ಶೋಷಣೆಯ ವಿರುದ್ಧ ಧ್ವನಿ ಎತ್ತಿದ ಸಮಾಜ ಸುಧಾರಕರಾದ ಮಹಾಪುರುಷರು ಮಹಿಳಾ ಧ್ವನಿಗೆ ಶಕ್ತಿ ತುಂಬಿದರು. ಸಹನೆ, ತ್ಯಾಗ ಮತ್ತು ಆಧ್ಯಾತ್ಮಿಕ ಅಂತಃಸತ್ವವು ಮಹಿಳೆಯಲ್ಲಿ ಪುರುಷರಿಗಿಂತ ಹೆಚ್ಚಿದೆ ಎಂದು ತಿಳಿದ ಗಾಂಧೀಜಿ ತಮ್ಮ ಅಹಿಂಸಾ ಚಳುವಳಿಯಲ್ಲಿ ಮಹಿಳೆಯರನ್ನು

ಹೆಚ್ಚು ಸಂಖ್ಯೆಯಲ್ಲಿ ಸೇರಿಸಿಕೊಂಡರು. ಉಪ್ಪಿನ ಸತ್ಯಾಗ್ರಹ, ಪ್ರತಿಭಟನಾ ಮೆರವಣಿಗೆ, ಜೈಲುವಾಸ ಮುಂತಾದ ಕಷ್ಟಗಳನ್ನು ಸಹಿಸುವ ಸಾಮರ್ಥ್ಯ ತಮಗಿದೆ ಎಂದು ಸಾಬೀತುಪಡಿಸಿ ಹೋರಾಟದ ಯಶಸ್ಸಿಗೆ ಕಾರಣರಾದರು. ಮುಂದೆ ಇದು ಭಾರತದಲ್ಲಿ ಮಹಿಳಾ ಚಳುವಳಿಗೆ ಸ್ಫೂರ್ತಿಯನ್ನು ತುಂಬಿತು. ಮೇಡಂ ಕಾಮಾ, ಕಮಲಾದೇವಿ ಚಟ್ಟೋಪಾಧ್ಯಾಯ, ಮಾರ್ಗರೇಟ್ ಕಸಿನ್ಸ್, ಅನಿಬೆಸೆಂಟ್, ಸರೋಜಿನಿ ನಾಯ್ಡು ಹೀಗೆ ಅನೇಕರು ಮಹಿಳಾ ಚಳುವಳಿಯ ನೇತಾರರಾದರು.

ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡ ನೂರಾರು ಮಹಿಳೆಯರಿಗೆ ದೊರಕಿದ ಅನುಭವ ಮತ್ತು ಕೆಚ್ಚು ಅವರನ್ನು ಇನ್ನು ಹೆಚ್ಚೆಚ್ಚು ತೀವ್ರವಾಗಿ ಹೋರಾಟದಲ್ಲಿ ತೊಡಗುವಂತೆ ಮತ್ತು ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತೆ ಮಾಡಿತು. ಮಹಿಳೆಯರಲ್ಲುಂಟಾದ ಈ ಬದಲಾವಣೆ ಪುರುಷರನ್ನು ಬೆಚ್ಚುವಂತೆ ಮಾಡಿತ್ತಲ್ಲದೆ ಅವರ ಊಹೆಯನ್ನು ಮೀರಿ ಕೆಲವು ಮಹಿಳೆಯರು ಧೀರ ನಾಯಕಿಯರಾಗಿ ಬೆಳೆದರು. ಹೀಗೆ ಧೀರೋದಾತ್ತವಾಗಿ ಹೊರಹೊಮ್ಮಿದ ನಾಯಕಿಯರ ನೇತೃತ್ವದಲ್ಲಿ ಮಹಿಳೆಯರ ಪ್ರಶ್ನೆಗಳು ಮತ್ತು ಸಮಸ್ಯೆಗಳು ಗಂಭೀರ ನೆಲೆಯನ್ನು ಪಡೆದವು. ತಮ್ಮ ಬೇಡಿಕೆಗಳು ಮತ್ತು ಹಕ್ಕುಗಳ ಸಮರ್ಥನೆಗಾಗಿ ಮಹಿಳೆಯರು ಸಂಘಟನೆಗಳನ್ನು ಕಟ್ಟಿಕೊಂಡರು.

ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೋಂರೂಲ್ ಚಳುವಳಿಯನ್ನು ಆರಂಭಿಸಿದ್ದ ಆ್ಯನಿಬೆಸೆಂಟ್ ಪ್ರೇರಣೆಯಿಂದಾಗಿ ೧೯೧೭ ರಲ್ಲಿ ಮಾರ್ಗರೇಟ್ ಕಸಿನ್ಸ್ 'ಮಹಿಳೆಯರ ಭಾರತೀಯ ಸಂಘಟನೆ' (Women's Indian Association) ಎಂಬುದನ್ನು ಸ್ಥಾಪಿಸಿದರು. ಮಹಿಳೆಯರು ಸಂಘಟಿತರಾಗಿ ತಮ್ಮ ಹಕ್ಕು ಮತ್ತು ಕರ್ತವ್ಯಗಳ ಬಗ್ಗೆ ಜಾಗೃತರಾಗುವಂತೆ ಮಾಡಲು ಈ ಸಂಸ್ಥೆ ಒಂದು ವೇದಿಕೆಯಾಯಿತು. ೧೯೨೭ರಲ್ಲಿ ಪುಣೆಯಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಮೊದಲ ಅಧಿವೇಶನ ನಡೆಯಿತು.

ಅಧಿವೇಶನದಲ್ಲಿ ಮಹಿಳೆಯರ ವಿದ್ಯಾಭ್ಯಾಸದ ಬಗ್ಗೆ, ಪ್ರಾಥಮಿಕ ಶಾಲೆಯಿಂದ ಹಿಡಿದು ಕಾಲೇಜು ಶಿಕ್ಷಣದವರೆಗೆ ಮತ್ತು ವಯಸ್ಕ ಶಿಕ್ಷಣವನ್ನು, ಬಾಲ್ಯವಿವಾಹವನ್ನು ಖಂಡಿಸುವ ನಿರ್ಣಯ ಮಂಡಿಸಲಾಯಿತು. ನಂತರ ಬ್ರಿಟಿಷ್ ಸರ್ಕಾರ ಭಾರತೀಯ ಮಹಿಳೆಯರ ಬೇಡಿಕೆಗಳಿಗೆ ತೋರಿದ ಅಸಡ್ಡೆಯಿಂದಾಗಿ ಭಾರತದ ಮಹಿಳಾ ನಾಯಕಿಯರು ಸತ್ಯಾಗ್ರಹದ ಚಳುವಳಿಗೆ ಹತ್ತಿರವಾದರು.

೧೮೩೪ರಲ್ಲಿ ಮಂಗಳೂರಿಗೆ ಬಂದ ಬಾಸೆಲ್ ಮಿಷನರಿಗಳ ತಂಡ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಮತ ಪ್ರಚಾರದಲ್ಲಿ ತೊಡಗಿತು. ಇಲ್ಲಿ ಅವರು ಕಂಡುಕೊಂಡ ತೊಡಕು ಶೈಕ್ಷಣಿಕ ಶೂನ್ಯತೆ ಇದಲ್ಲದೆ ಜಾತಿ ಪದ್ಧತಿಯಿಂದ ಹಿಂದುಳಿದ ವರ್ಗದ ಜನರು ಅನುಭವಿಸುತ್ತಿದ್ದ ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ದುರ್ಬಲತೆಯನ್ನು ಕಂಡು ಮಿಷನರಿಗಳು ಬೈಬಲ್ ಪ್ರಸಾರಕ್ಕಾಗಿ ಹಾಗೂ ಅದನ್ನು ಅರ್ಥೈಸಿಕೊಳ್ಳಲು ಇಲ್ಲಿನ ಜನರಿಗೆ ಅಕ್ಷರಜ್ಞಾನದ ಅವಶ್ಯಕತೆಯನ್ನು ಕಂಡುಕೊಂಡರು. ಮಿಶನರಿಗಳು ಮಂಗಳೂರಿನಲ್ಲಿ ಶಾಲೆ ಆರಂಭಿಸಿದಾಗ ಇಲ್ಲಿ ಎಲ್ಲಾ ವರ್ಗದ ಮಕ್ಕಳಿಗೂ ಒಟ್ಟಿಗೆ ವಿದ್ಯಾದಾನ ಮಾಡುತ್ತಿದ್ದರು. ಆದರೆ ಈ ಶಾಲೆಗಳಿಗೆ ಬ್ರಾಹ್ಮಣ ಹೆಣ್ಣುಮಕ್ಕಳು ಬರುತ್ತಿರಲಿಲ್ಲ.

ಇದನ್ನರಿತ ಮಿಷನ್ ಮಹಿಳಾ ಮಿಶನರಿಗಳ ಸಹಯೋಗದೊಂದಿಗೆ ೧೮೫೫ರಲ್ಲಿ ಬ್ರಾಹ್ಮಣ ಹೆಣ್ಣುಮಕ್ಕಳಿಗೆ ಶಾಲೆಯನ್ನು ಸ್ಥಾಪಿಸಿದರು. ಅದು ಯು.ಬಿ.ಎಂ.ಸಿ. (ಬ್ರಾಹ್ಮಿನ್) ಹಿರಿಯ ಪ್ರಾಥಮಿಕ ಶಾಲೆ ಮಂಗಳೂರು, ಇದು ಮಿಶನರಿಗಳ ಸಾಮಾಜಿಕ ಕಾಳಜಿಯನ್ನು ದೃಢಪಡಿಸುತ್ತದೆ. ಹೆಣ್ಮಕ್ಕಳ ಶಿಕ್ಷಣದ ಪರಿಕಲ್ಪನೆ ಸಾಕಾರವಾದುದು ಬಾಸೆಲ್ ಮಿಷನರಿಗಳ ಪ್ರಯತ್ನದಿಂದ, ಈ ಪ್ರಯತ್ನಗಳೇ ಮುಂದಕ್ಕೆ ಸಂತ ಆ್ಯನ್ಸ್, ಸಂತ ಆ್ಯಗ್ನೇಸ್, ಬೆಸೆಂಟ್, ಕೆನರಾ ಹೆಣ್ಮಕ್ಕಳ ಶಾಲಾ ಕಾಲೇಜುಗಳನ್ನು ಪ್ರಾರಂಭಿಸಲು ಉತ್ತೇಜನ ನೀಡಿದವು.

ಬಾಸೆಲ್ ಮಿಶನರಿಗಳು ದಕ್ಷಿಣ ಕನ್ನಡ ಜನರಿಗೆ ವಿದ್ಯೆಯ ಮಹತ್ವವನ್ನು ಕಲಿಸಿಕೊಟ್ಟದ್ದು, ಮಾತ್ರವಲ್ಲದೆ ಉದ್ಯಮ ಶೀಲತೆಯನ್ನು ವಿದ್ಯೆಯ ಮೂಲಕ ಬೆಳೆಸಿಕೊಳ್ಳುವುದನ್ನು ಕಲಿಸಿಕೊಟ್ಟರು. ಮಕ್ಕಳಿಗೆ ಜೀವನ ನಿರ್ವಹಣೆಯ ದಾರಿಯನ್ನು ಒದಗಿಸುವ ಉದ್ದೇಶದಿಂದ ಅವರು ಹಲವು ಕೈಗಾರಿಕೆಗಳನ್ನು ೧೯ನೆಯ ಶತಮಾನದ ಉತ್ತರಾರ್ಧದಲ್ಲಿಯೇ ಸ್ಥಾಪಿಸಿದರು.

ಕಬ್ಬಿಣ ಕಾರ್ಖಾನೆ, ಹಂಚಿನ ಕಾರ್ಖಾನೆ, ಗೇರುಬೀಜದ ಕಾರ್ಖಾನೆ, ನೇಯ್ಗೆ, ಕೈಮಗ್ಗಗಳ ಕಾರ್ಖಾನೆ, ಒಳಉಡುಪುಗಳ ಕಾರ್ಖಾನೆ, ಮುದ್ರಣಾಲಯಗಳು ಇವು ಸಾವಿರಾರು ಜನರಿಗೆ ನೇರ ಉದ್ಯೋಗವನ್ನು ಕಲ್ಪಿಸಿಕೊಟ್ಟಿತು. ೨೦ನೇಯ ಶತಮಾನದಲ್ಲಿ ದ.ಕ. ಜಿಲ್ಲೆಯಲ್ಲಿ ಭರದಿಂದ ಬೆಳೆದ ಮತ್ತೊಂದು ಉದ್ಯಮ ಬೀಡಿ ತಯಾರಿಕೆಯದು. ನಾಲ್ಕಾರು ಪ್ರಸಿದ್ಧ ಬೀಡಿ ತಯಾರಿಕಾ ಸಂಸ್ಥೆಗಳು ಈ ಜಿಲ್ಲೆಯಲ್ಲಿ ಹುಟ್ಟಿ ಮಹಿಳೆಯರಿಗೆ ತಮ್ಮ ತಮ್ಮ ಮನೆಯಲ್ಲಿಯೇ ಉಳಿದುಕೊಂಡು ಉಪ ಜೀವಿಕೆಯನ್ನು ಗಳಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು.

ದೇಶದಲ್ಲಿ ಪ್ರಪ್ರಥಮ ಬ್ಯಾರಿ ಮಹಿಳಾ ಕಾರ್ಮಿಕರ ಸಂಘಟನೆಯನ್ನು ಮಾಡಿದ ಶ್ರೇಯಸ್ಸು ಕಮಲಾದೇವಿಯವರಿಗೆ ಸಲ್ಲುತ್ತದೆ. ಮಹಿಳಾ ಪರಿಷತ್ತಿನ ವತಿಯಿಂದ (AIWC) ಚಳುವಳಿ ಪ್ರಾರಂಭಿಸಿ ಹೆರಿಗೆ ರಜೆ ಜಾರಿಗೆ ಬರುವಂತೆ ಮಾಡಿದರು. ಮಹಿಳೆಯರಿಗೆ (AIWC) ಮಹಿಳಾ ಪರಿಷತ್ತಿನ ವತಿಯಿಂದ ಕೊಡಿಸಿದ ಶಾಶ್ವತ ಕೊಡುಗೆ ಪ್ರಸೂತಿ ಮತ್ತು ಸ್ತ್ರೀ ಅನಾರೋಗ್ಯ ರಜೆಯ ಸೌಕರ್ಯ.

ಸ್ವಾತಂತ್ರ್ಯ ಪೂರ್ವದಿಂದಲೇ ಬೀಡಿ ಕಾರ್ಮಿಕ ಮಹಿಳೆಯರು, ಗೇರು ಬೀಜ ಕಾರ್ಖಾನೆಯ ಮಹಿಳೆಯರು, ಹಂಚಿನ ಕಾರ್ಖಾನೆಯ ಮಹಿಳೆಯರು, ಕೂಲಿ ಹೆಚ್ಚಳಕ್ಕಾಗಿ ಸಂಘಟಿತ ಹೋರಾಟ ನಡೆಸಿದ್ದಾರೆ. ಶರಾಬು ಅಂಗಡಿಗಳನ್ನು ಮುಚ್ಚಿಸಲು ಕಾರ್ಖಾನೆಗಳ ದೌರ್ಜನ್ಯ ಮತ್ತು ಪರಿಸರ ವಿರೋಧಿ ಕಾರ್ಯಗಳಿಗಾಗಿಯೂ ಮಹಿಳೆಯರು ಸಂಘಟಿತರಾಗಿ ಹೋರಾಟ ನಡೆಸಿದ್ದಾರೆ. ಕಾರ್ಮಿಕ ಮಹಿಳೆಯರಿಗೆ ಹೆರಿಗೆ ಸೌಕರ್ಯ ಕಾಯಿದೆಯನ್ನು ೧೯೬೧ರಲ್ಲಿ ಕೇಂದ್ರ ರಾಜ್ಯ ಸರಕಾರಗಳೆರಡೂ ಜಾರಿಗೊಳಿಸಿದುವು.

೧೯೭೫ರಲ್ಲಿ 'ಸಮಾನ ದುಡಿಮೆಗೆ ಸಮಾನ ವೇತನ' ಎಂಬ ಶಾಸನ ಜಾರಿಯಾಯಿತು. ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಕಾಯ್ದೆ. ೧೯೮೭ರಲ್ಲಿ ಸತಿ ಆಚರಣೆ ನಿಷೇಧ ರದ್ದು, ೧೯೯೪ರಲ್ಲಿ ಮಹಿಳೆಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ಕಾಯ್ದೆ, ೨೦೦೫ರಲ್ಲಿ ಕೌಟುಂಬಿಕ ದೌರ್ಜನ್ಯ ವಿರೋಧಿ ಕಾಯ್ದೆ, ೧೯೯೪ರಲ್ಲಿ ಭ್ರೂಣಹತ್ಯೆ ನಿಷೇಧ ಕಾಯ್ದೆಗಳು ಚಳುವಳಿಗಳ ಫಲವಾಗಿಯೇ ಜಾರಿಗೊಂಡವು.

೧೯೯೩ರಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರ ಪ್ರಾತಿನಿಧ್ಯವನ್ನು ಹೆಚ್ಚಿಸುವ ಕಾನೂನು ಜಾರಿಯಾಗಿ ಸಾವಿರಾರು ಮಂದಿ ಮಹಿಳೆಯರು ಆಡಳಿತ ಕ್ಷೇತ್ರಕ್ಕೆ ಪ್ರವೇಶಿಸುವಂತಾಯಿತು. ಮಹಿಳಾ ಚಳುವಳಿಯ ಮಹತ್ವದ ಫಲಶ್ರುತಿಯೆಂದರೆ ಅಸಂಘಟಿತ ವಲಯದ ಮಹಿಳೆಯರಲ್ಲೂ ಜಾಗೃತಿ ಮೂಡಿಸಿದ್ದು, ಹಳ್ಳಿಹಳ್ಳಿಯಲ್ಲೂ ಸ್ತ್ರೀ ಶಕ್ತಿ ಗುಂಪುಗಳು ಸಂಘಟನಾತ್ಮಕ ಹೋರಾಟದಲ್ಲಿ ಭಾಗವಹಿಸಿ ಸಮಾಜ ಸುಧಾರಣೆ ಮತ್ತು ಪ್ರಗತಿಯ ಕನಸುಗಳನ್ನು ಸಾಕಾರಗೊಳಿಸಿದ್ದಾರೆ. ಸಾರಾಯಿ ಅಂಗಡಿಗಳನ್ನು ಮುಚ್ಚಿಸಲು ದೌರ್ಜನ್ಯಗಳನ್ನು ಪ್ರತಿಭಟಿಸಲು ಕೈಗೊಂಡ ಸಣ್ಣಸಣ್ಣ ಚಳುವಳಿಗಳು ಕೂಡಾ ಮಹಿಳಾ ಚಳುವಳಿಯ ಬಳುವಳಿ ಆಗಿದೆ.

೧೯೭೯ರಲ್ಲಿ ಸಿ.ಐ.ಟಿ. ಕಾರ್ಮಿಕ ಸಂಘಟನೆಯ ಮಹಿಳಾ ಶಾಖೆಯಾಗಿ ದುಡಿಯುವ ಮಹಿಳೆಯರ ಸಮನ್ವಯ ಸಮಿತಿಯು ಮಂಗಳೂರಿನಲ್ಲಿ ರಾಜ್ಯ ಮಟ್ಟದ ಸಮ್ಮೇಳನವನ್ನು ಮಾಡಿ ಸ್ಥಾಪನೆಯಾಯಿತು. ಈ ಸಂಘಟನೆಯಡಿ ಬೀಡಿ ಕಾರ್ಮಿಕರು, ಗಾರ್ಮೆಂಟ್ಸ್, ಬ್ಯಾಂಕ್ ಕಚೇರಿಗಳು ಹಾಗೂ ಅಂಗನವಾಡಿ ಮಹಿಳೆಯರ ಸಂಘಟನೆ ನಡೆದಿವೆ.

೧೯೧೧ರಲ್ಲಿ 'ಮಹಿಳಾ ಸಭಾ' ಪ್ರಾರಂಭವಾಗಿ ಇದರ ಮೂಲಕ ಸಾಕಷ್ಟು ಕಾರ್ಯಗಳಾಗಿವೆ. ಶತಮಾನದ ಆದಿಯಲ್ಲಿ ಬೀಸತೊಡಗಿದ ಸುಧಾರಣೆಯ ಗಾಳಿ ಮಹಿಳೆಯರನ್ನು ಪ್ರಭಾವಿತಗೊಳಿಸಿತು. ಲಲಿತಾಬಾಯಿ ಸುಬ್ಬರಾವ್, ಕಾರ್ನಾಡು ಶಾಂತಬಾಯಿ, ಮನೋರಮಾ ಬಾಯಿ, ಕಾರ್ನಾಡು ಸದಾಶಿವರಾಯ ಮುಂತಾದವರ ಪ್ರಯತ್ನದಿಂದ ಮಹಿಳಾ ಸಭಾ ಅಸ್ತಿತ್ವಕ್ಕೆ ಬಂತು. ೧೯೩೦ರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯ, ಲೀಲಾ ಏಕಾಂಬರ ರಾವ್ ಮತ್ತಿತರರು ಭಗಿನಿ ಸಮಾಜವನ್ನು ಸ್ಥಾಪಿಸಿದರು.

ಸರ್ಕಾರದ ಬೆಂಬಲದಿಂದ ಹಳ್ಳಿಹಳ್ಳಿಯಲ್ಲಿ ಸ್ಥಾಪನೆಗೊಂಡ ಮಹಿಳಾ ಮಂಡಲಗಳು ಕೂಡ ಸ್ತ್ರೀಯರ ಪ್ರಗತಿಗಾಗಿ ದುಡಿಯುತ್ತಿದೆ. ದಕ್ಷಿಣ ಕನ್ನಡದಲ್ಲಿ ಯುವತಿಯರ ಸಂಘಗಳು ಉತ್ಸಾಹದಿಂದ ದುಡಿದು ಸ್ತ್ರೀವಾದ ಚಳುವಳಿಗೆ ಬೆಂಬಲವನ್ನು ನೀಡಿದೆ. ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಇತರೆ ಬರಹಗಾರ್ತಿಯಂತೆ ಗಿರಿಬಾಲೆಯವರು (ಸರಸ್ವತಿಬಾಯಿ ರಾಜವಾಡೆ) ಭಾಷಣ, ಲೇಖನ, ಅಂಕಣ ಬರಹಗಳ ಮೂಲಕ ತಮ್ಮ ವಿಚಾರವನ್ನು ಪ್ರಕಟಿಸಿದ್ದಾರೆ.

ವಿಧವಾ ವಿವಾಹ ಪ್ರತಿಪಾದನೆಯ ಜೊತೆಗೆ ವಿಧವೆಯಾದ ಸ್ತ್ರೀ ಬದುಕಲು ಪೂರಕ ವಾತಾವರಣ ನಿರ್ಮಾಣಕ್ಕೆ ಈ ಲೇಖಕಿ ಒತ್ತು ನೀಡಿದ್ದಾರೆ. ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ ಹರಿಜನೋದ್ಧಾರ, ಸ್ತ್ರೀ ವ್ಯಕ್ತಿತ್ವ, ಭಾರತದ ಮಹಿಳೆಯರ ಸ್ಥಿತಿಗತಿ, ಮಿಶ್ರವಿವಾಹ, ಮಠಾಧಿಪತಿಗಳ ಕರ್ತವ್ಯ, ಗ್ರಾಮೀಣ ಮಹಿಳೆ ಮೊದಲಾದ ಹಲವು ಬಗೆಯ ಸಂಗತಿಗಳನ್ನು ವಸ್ತುವಾಗುಳ್ಳ ಇವರ ಸಾಹಿತ್ಯೇತರ ಬರಹ, ಲೇಖಕಿಯ ದೃಢ, ಖಚಿತ, ವೈಚಾರಿಕ ನಿಲುವನ್ನು ಸ್ಪಷ್ಟಪಡಿಸುತ್ತವೆ.

ಗಿರಿಬಾಲೆಯವರು ಗಾಂಧೀಜಿಯವರ ಸುಧಾರಣಾವಾದಿ ನಿಲುವನ್ನು ವ್ಯಕ್ತಪಡಿಸುತ್ತಾರೆ. ಸ್ತ್ರೀಯರ ಆರ್ಥಿಕ ಸ್ವತಂತ್ರತೆ ಎಂತು? ಸ್ತ್ರೀಯರಿಗೆ ವ್ಯಕ್ತಿತ್ವವಿಲ್ಲವೇ? ಹಾಗೂ ಭಾರತದ ಮಹಿಳೆಯರ ಉನ್ನತಿ ಮೊದಲಾದ ಲೇಖನಗಳಲ್ಲಿ ಗಿರಿಬಾಲೆಯವರ ಸ್ತ್ರೀಪರ ಕಾಳಜಿ ವ್ಯಕ್ತವಾಗಿದೆ. ಇವರ ಬರಹದ

ಶೈಲಿಯ ವಿಶೇಷತೆಯೆಂದರೆ ವ್ಯಂಗದ ಬಳಕೆ. ಅದು ಸ್ತ್ರೀ ಶೋಷಣೆಯ ಚಿತ್ರಣವೇ ಇರಲಿ, ಬಡವರ ಮೇಲಿನ ದೌರ್ಜನ್ಯವೇ ಇರಲಿ, ವ್ಯಂಗ್ಯ ಮಿಶ್ರಿತ ಧ್ವನಿಯಿಂದ ಪ್ರಕಟಗೊಂಡು ಸಮಸ್ಯೆಯ ತೀವ್ರತೆಯನ್ನು ಬಿಂಬಿಸುವಲ್ಲಿ ಯಶಸ್ವಿಯಾಗುತ್ತಾರೆ.

ಮಂಗಳೂರಿನ ಶ್ರದ್ಧಾನಂದ ಆಶ್ರಮದ ಮೇಲ್ವಿಚಾರಕ ದೇವವ್ರತನು ಆಶ್ರಮದಲ್ಲಿದ್ದ ಹುಡುಗಿಯರನ್ನು ಲೈಂಗಿಕವಾಗಿ ಹಿಂಸೆ ಮಾಡಿ ಅವರನ್ನು ಮಾರಾಟ ಮಾಡುವ ದಂಧೆಗೂ ಇಳಿದಾಗ, ಇದನ್ನು ಪ್ರತಿಭಟಿಸಿ ವಿದ್ಯಾರ್ಥಿನಿಯರು, ಮಹಿಳಾ ಸಂಘಟನೆಗಳು, ಇನ್ನಿತರ ಸಂಘಟನೆಗಳು ಭಾರಿ ಮೆರವಣಿಗೆ ನಡೆಸಿ ಆಶ್ರಮದಲ್ಲಿದ್ದ ಹೆಣ್ಣು ಮಕ್ಕಳಿಗೆ ರಕ್ಷಣೆ ನೀಡಿ, ನೈತಿಕ ಬೆಂಬಲ ಕೋರಿದರು. ಮಹಿಳಾ ಸಂಘಟನೆಗಳು ಒಟ್ಟಾಗಿ ಈ ಪ್ರಕರಣವನ್ನು ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ನಿರ್ದೇಶಕರಿಗೆ ವರದಿ ಮಾಡಿ ಕೂಡಲೇ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಿದವು.

ಸಾಕ್ಷರತೆ ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು, ಕ್ರಿಯಾಶೀಲ ಚಟುವಟಿಕೆಗಳಲ್ಲಿ ಭಾಗಿಯಾಗುವುದರ ಮೂಲಕ ಮಹಿಳೆಯರ ಕಾರ್ಯಕ್ಷೇತ್ರ ವಿಸ್ತರಿಸಿದೆ. ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡಲು, ದಿಟ್ಟ ಮನೋಭಾವವನ್ನು, ಸ್ವಸಮರ್ಥನೆ ಸಾಮರ್ಥ್ಯವನ್ನು ಕಲಿಸಿದೆ. ಕುಡಿತದ ವಿರುದ್ಧ ಕ್ರಿಯಾಶೀಲವಾಗಿ ಪ್ರತಿಭಟಿಸಿದ ದ.ಕ. ಜಿಲ್ಲೆಯ ಮಹಿಳೆಯರ ಎದೆಗಾರಿಕೆ ಮಹಿಳಾ ಚಳುವಳಿಗೆ ದಿಕ್ಸೂಚಿಯಾಗಿದೆ.

ದ.ಕ. ಜಿಲ್ಲೆಯ ಹಿರಿಯ ಮಹಿಳಾ ರಾಜಕಾರಣ, ಸ್ವಾತಂತ್ರ್ಯ ಹೋರಾಟಗಾರ್ತಿ ಒಕ್ಟೋವಿಯಾ ಅಲ್ಬುಕರ್ಕ್; ಹೋರಾಟಗಾರ್ತಿಯಾದ ಇವರು ಮಹಿಳಾ ಪರ ಹಾಗೂ ಸಮಾಜ ಸುಧಾರಣಾ ಕಾರ್ಯಗಳನ್ನು ಮಾಡಿದ್ದಾರೆ. ದ.ಕ. ಜಿಲ್ಲೆಯಲ್ಲಿ ಮುಸ್ಲಿಂ ಲೇಖಕಿ ಸಾರಾ ಅಬೂಬಕ್ಕರವರು ಮೂಲಭೂತವಾದಿ ಸಂಘಟನೆಯ ವಿರುದ್ಧ ಹೋರಾಟವನ್ನು ಮಾಡಿದವರು. ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಮುಸ್ಲಿಂ ಮಹಿಳೆಯರ ಶೋಷಣೆ ಹಾಗೂ ಕೋಮು ಸೌಹಾರ್ದ ಈ ಮೂರು ವಿಷಯಗಳ ಕುರಿತು ಕಥೆ ಕಾದಂಬರಿ ಹಾಗೂ ಲೇಖನಗಳನ್ನು ಬರೆಯಲಾರಂಭಿಸಿದರು.

ಇತ್ತೀಚೆಗೆ ಮುಸ್ಲಿಂ ಜನಾಂಗದ ಹೆಣ್ಣುಮಕ್ಕಳು ಹೆಚ್ಚು ಹೆಚ್ಚು ಶಿಕ್ಷಣವನ್ನು ಪಡೆಯಲು ಪ್ರಾರಂಭಿಸಿದ್ದು ಮಾತ್ರವಲ್ಲದೆ ಉದ್ಯೋಗವನ್ನು ಮಾಡುತ್ತಿರುವುದು ಮುಸ್ಲಿಂ ಸಮುದಾಯದಲ್ಲೂ

ಸಾಮಾಜಿಕ ಸುಧಾರಣೆಗಳಾಗಿವೆ ಎನ್ನಬಹುದು. ಆದರೆ ಆಧುನಿಕ ಪ್ರಕ್ರಿಯೆಗೆ ಒಳಗಾಗಿ ಶಿಕ್ಷಣವನ್ನು ಪಡೆದರು ಮತ್ತೆ ಲಿಂಗಾಧಾರಿತ ಸಮಾಜದ ಒಳಗಡೆ ಆಕೆ ತನ್ನನ್ನು ತಾನು ತೆರೆದುಕೊಳ್ಳುವ ಸಾಮಾಜಿಕ ಅವಕಾಶವನ್ನು ಮುಸ್ಲಿಂ ಸಮುದಾಯ ಬಿಟ್ಟುಕೊಟ್ಟಿಲ್ಲ. ಆಕೆ ಗಂಡಿನ ಆಕರ್ಷಣೆಗೆ ಒಳಗಾಗದಂತೆ ಬುರ್ಖಾ ಧರಿಸುವ ಪದ್ಧತಿಗಳು ದ.ಕ. ದಲ್ಲಿ ವ್ಯಾಪಕವಾಗುತ್ತಿರುವುದನ್ನು ಕಾಣಬಹುದು.

ಕೆಲವು ವರ್ಷಗಳಿಂದ ಕುದ್ರೋಳಿ ಗೋಕರ್ಣನಾಥ ದೇವಸ್ಥಾನದಲ್ಲಿ ಸ್ತ್ರೀ ಸಮಾನತೆ ಮತ್ತು ಅವರಿಗೆ ಗೌರವಾದರಗಳನ್ನು ಕೊಡಿಸುವ ನಿಟ್ಟಿನಲ್ಲಿ ಚಳುವಳಿ ಆರಂಭವಾಗಿದೆ. ಎರಡು ವರ್ಷಗಳ ಮೊದಲು ಸುಮಾರು ೫೦೦೦ ವಿಧವೆಯರು ಸ್ವಯಂ ಚಂಡಿಕಾಹೋಮ ಮಾಡಿದ್ದರು. ಪತಿವಿಹೀನೆಯರೇ ಬೆಳ್ಳಿ ರಥೋತ್ಸವ ನಡೆಸಿದ್ದರು. ಹೂ ಮುಡಿಯುವ, ಬಳೆ ತೊಡುವ, ಕುಂಕುಮ ಇಟ್ಟುಕೊಳ್ಳುವ ಮೂಲಕ ಪತಿವಿಹೀನೆಯರು ಗೋಕರ್ಣನಾಥನ ಸಮ್ಮುಖದಲ್ಲಿ ಜನಾರ್ಧನ ಪೂಜಾರಿಯವರ ನಾಯಕತ್ವದಲ್ಲಿ ಸಂಕಲ್ಪಗಳ ಮೂಲಕ ಅವುಗಳನ್ನು ಧರಿಸಿದ್ದರು. ಕ್ರಾಂತಿಕಾರಕ ದಿಟ್ಟ ಹೆಜ್ಜೆಯಾಗಿ ಇಬ್ಬರು ಪತಿವಿಹೀನೆಯರು ಪೂಜಾ ವಿಧಿಗಳನ್ನು ಶಾಸ್ತ್ರೋಕ್ತ ಕಲಿತು ೬-೧೦-೨೦೧೩ರ ನವರಾತ್ರಿ ಉತ್ಸವ ಸಂದರ್ಭದಲ್ಲಿ ಕುದ್ರೋಳಿ ಗೋಕರ್ಣನಾಥನ ಗರ್ಭಗೃಹವನ್ನು ಹೊಕ್ಕು ವಿಧಿಪೂರ್ವಕ ಪೂಜೆ ನೆರವೇರಿಸಿದರು.

"ಸೌಜನ್ಯ ಪ್ರಕರಣ"ಕ್ಕೆ ಒಂದು ವರುಷ ತುಂಬಿದ ದಿವಸ ಮಂಗಳೂರಿನ ಡಿ. ಸಿ. ಆಫೀಸಿನ ಪ್ರವೇಶ ದ್ವಾರದಲ್ಲಿ ಜನವಾದಿ ಮಹಿಳಾ ಸಂಘಟನೆ, ಎಸ್.ಎಫ್.ಐ., ಡಿವೈಎಫ್ಐ, ಮಹಿಳಾ ದೌರ್ಜನ್ಯ ವಿರೋಧಿ ವೇದಿಕೆ ಸಹಿತ ಅನೇಕ ಸಮಾನ ಮನಸ್ಕ ಸಂಘಟನೆಗಳು ಬೃಹತ್ ಪ್ರತಿಭಟನೆಯನ್ನು ಕೈಗೊಂಡು ಸಿಬಿಐಗೆ ಒತ್ತಾಯಿಸಿದರು. ಸಂಘಟನೆಗಳ ತೀವ್ರ ಹೋರಾಟದ ಫಲವಾಗಿ ಪ್ರಸಕ್ತ ಸರಕಾರವು ಪ್ರಕರಣವನ್ನು ಸಿಬಿಐಗೆ ಹಸ್ತಾಂತರಿಸಿದೆ.

೨೦೦೧ ವರ್ಷವನ್ನು ವಿಶ್ವಸಂಸ್ಥೆ ಮಹಿಳಾ ಸಬಲೀಕರಣಾ ವರ್ಷವೆಂದು ಘೋಷಿಸಿದ ಬೆನ್ನಲ್ಲೇ ಮಾರ್ಚ್ ೨೦, ೨೦೦೧ರಲ್ಲಿ ರಾಷ್ಟ್ರೀಯ ಸಬಲೀಕರಣ ನೀತಿಯನ್ನು ಪ್ರಕಟಿಸಲಾಯಿತು. ಮಹಿಳೆಯರ ಸಬಲೀಕರಣ ಶಿಕ್ಷಣದ ಮಹತ್ವ ಉನ್ನತ ಶಿಕ್ಷಣದಲ್ಲಿ ಮಹಿಳೆಯರಿಗಿರುವ ಅವಕಾಶಗಳು, ಆಧುನಿಕ ಕಾಲಘಟ್ಟದಲ್ಲಿ ಮಹಿಳೆಯರಿಗೆ ತೆರೆದುಕೊಳ್ಳುವ ಉದ್ಯೋಗದ ಅವಕಾಶಗಳು ಮಹಿಳೆಯರು

ಸಾಧಿಸುತ್ತಿರುವ ಆರ್ಥಿಕ ಸ್ವಾವಲಂಬನೆ ಮಹಿಳಾ ವಿಮೋಚನೆಯ ಹೋರಾಟ, ಮಹಿಳೆಯರು ನಿರ್ವಹಿಸುತ್ತಿರುವ ಬಹುಮುಖೀ ಜವಾಬ್ದಾರಿಗಳು ಎಲ್ಲವೂ ಪ್ರಾಮುಖ್ಯತೆಯನ್ನು ಪಡೆದಿದೆ.

ಮಹಿಳಾ ಸ್ವಾವಲಂಬನೆಯು ಆಕೆಯ ಗೌರವವನ್ನು ಹೆಚ್ಚಿಸಲು, ಭವಿಷ್ಯದ ಭದ್ರತೆಯನ್ನು ಗಟ್ಟಿಗೊಳಿಸಲು ಅಗತ್ಯವಾಗಿದೆ. ಉದ್ಯಮಶೀಲತೆಯು ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಪ್ರೇರೇಪಿಸುತ್ತದೆ. ಯಾವುದೇ ಚಳುವಳಿಯ ಉದ್ದೇಶ ಅದು ಸಾಹಿತ್ಯ ಚಳುವಳಿಯೇ ಆಗಿರಲಿ, ಸಾಮಾಜಿಕ ಧಾರ್ಮಿಕವೇ ಇರಲಿ, ಇರುವ ಸ್ಥಿತಿಯ ಬದಲಾವಣೆ ಅದರ ಗುರಿಯಾಗಿರುತ್ತದೆ. ಬದುಕಿನ ಕ್ರಮ ಒಂದು ಜಾಡಿಗೆ ಬಿದ್ದು ಜಡ್ಡುಗೊಂಡಾಗ ಅದನ್ನು ಬದಲಾಯಿಸುವ ಜೀವಂತಗೊಳಿಸುವ ಪ್ರಕ್ರಿಯೆಯಾಗಿ ಚಳುವಳಿ ಆರಂಭವಾಗಿರುತ್ತದೆ.

ಒಪ್ಪಿತ ಮೌಲ್ಯಗಳನ್ನು ಯಥಾಸ್ಥಿತಿಯಲ್ಲಿ ಅದು ವಿರೋಧಿಸುತ್ತದೆ. ಹೀಗಾಗಿ ಮೌಲ್ಯಗಳ ಅಂಗೀಕಾರದ ಸಂದರ್ಭದಲ್ಲಿ ಚಳುವಳಿ ಇರುವುದಿಲ್ಲ. ಅದರ ವಿರೋಧದ ಪ್ರತಿಭಟನೆ ಸಂದರ್ಭ ಚಳುವಳಿಯನ್ನು ಸೃಷ್ಟಿಸುತ್ತದೆ. ಆದ್ದರಿಂದ ಚಳುವಳಿ ಮುಖ್ಯವಾಗಿ ಮೌಲ್ಯಗಳಿಗೆ ಸಂಬಂಧಿಸಿದ್ದು ಜೀವನ ದೃಷ್ಟಿಗೆ ಸಂಬಂಧಿಸಿದ್ದು, ಒಂದು ಚಾರಿತ್ರಿಕ ತುರ್ತು ಇದ್ದಾಗಷ್ಟೇ ಚಳುವಳಿಯೊಂದು ಜನ್ಮ ತಾಳಲು ಸಾಧ್ಯ. ಯಾವುದೇ ಒಂದು ಗುಂಪಿಗೆ, ಸಮುದಾಯಕ್ಕೆ, ವರ್ಗಕ್ಕೆ ನ್ಯಾಯ ದೊರಕದೆ ಇರುವಾಗ ತಮ್ಮ ಹಕ್ಕನ್ನು ಪ್ರತಿಪಾದಿಸಲು ಬೇಡಿಕೆಯನ್ನು ಪೂರೈಸಿಕೊಳ್ಳಲು ಸಂಘರ್ಷಕ್ಕಿಳಿಯುವುದು ಅನಿವಾರ್ಯವಾಗುತ್ತದೆ.

ಈ ಎಲ್ಲಾ ಮಹಿಳಾ ಚಳುವಳಿಯ ಮುಖಾಂತರ ಮಹಿಳೆಯರು ಅನೇಕ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟರು.ಉದ್ಯೋಗ, ರಾಜಕೀಯಗಳಲ್ಲಿ ಮಹಿಳಾ ಮೀಸಲಾತಿ, ಕಾನೂನಿನಲ್ಲಿ ಮಹಿಳಾ ದೃಷ್ಟಿಕೋನ ಇರಬೇಕೆನ್ನುವ ಒತ್ತಾಯವನ್ನು ತಂದರು. ಚಳುವಳಿಯ ಬೇಡಿಕೆಗೆ ಪೂರಕವಾದ ಬರವಣಿಗೆಗಳು ಸಾಕಷ್ಟು ಬಂದಿರುವುದನ್ನು ಕಾಣಬಹುದು.

ಪ್ರಾದೇಶಿಕ ವ್ಯಾಪ್ತಿಯ ದೃಷ್ಟಿಯಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಾಗಿದ್ದ ಈ ಪ್ರದೇಶ ಕರ್ನಾಟಕ ರಾಜ್ಯದ, ಭಾರತ ದೇಶದ ಇತರ ಪ್ರದೇಶಗಳಿಂದ ಭಿನ್ನವಾಗಿ ಪ್ರಗತಿಪಥದಲ್ಲಿ ಹೆಚ್ಚು ಮುಂದುವರಿದಿದೆ. ಎಲ್ಲಾ ಕ್ಷೇತ್ರಗಳಲ್ಲೂ ಗಣನೀಯವಾದ ಪ್ರಗತಿ ಕಂಡು ಬರುತ್ತದೆ.

ಸ್ವಾತಂತ್ರೋತ್ತರ ಕಾಲಘಟ್ಟದಲ್ಲಿ ಕರಾವಳಿಯ ಚರಿತ್ರೆಯಲ್ಲಿ ಮಹಿಳಾ ಸುಧಾರಣೆಯ ವಿಚಾರದಲ್ಲಿ ನಡೆದಿರುವ ಇಂಥ ಚಳುವಳಿಗಳು ಇಲ್ಲಿನ ಮಹಿಳೆಯರ ಬದುಕನ್ನು ಸ್ವಾವಲಂಬಿಯಾಗಿ ರೂಪಿಸುವಲ್ಲಿ ಮಹತ್ತರ ಪಾತ್ರ ವಹಿಸಿದೆ.

## ೨.೩ ಕರಾವಳಿ ಲೇಖಕಿಯರ ಮಹಿಳಾ ಪರ ನಿಲುವುಗಳು

ಬ್ರಿಟಿಷರು ಭಾರತಕ್ಕೆ ಬಂದು, ಒಡೆತನವನ್ನು ಸ್ಥಾಪಿಸಿದ ನಂತರ ಈ ದೇಶವನ್ನು ವಸಾಹತವನ್ನಾಗಿ ಮಾಡಿಕೊಂಡು, ಇಡೀ ಭಾರತದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಮೇಲೆ ಪರಿಣಾಮಗಳು ಬೀರಿದವು. ಅಲ್ಲದೆ ಹೊಸ ಸಾಹಿತ್ಯದ, ವಿಶೇಷವಾಗಿ ಗದ್ಯ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಗೆ ಕಾರಣವಾಯಿತು. ಮೈಸೂರಿನವರು ಮಹಾರಾಜರ ಮತ್ತು ಬ್ರಿಟಿಷ್ ಆಳರಸರ ಒತ್ತಡಕ್ಕೆ ಒಳಗಾಗಿ ಬರೆದರೆ, ಉತ್ತರ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕಗಳು ಬ್ರಿಟಿಷರ ನೇರ ಆಡಳಿತಕ್ಕೆ ಒಳಗಾಗಿದ್ದವು. ಇದರ ಜೊತೆಗೆ, ಉತ್ತರ ಕರ್ನಾಟಕದವರು ಮರಾಠರ ಪ್ರಾಬಲ್ಯದ ವಿರುದ್ಧ ಹೋರಾಡಬೇಕಿತ್ತು. ಹಾಗಾಗಿ ಕನ್ನಡ ಭಾಷೆ, ಸಾಹಿತ್ಯ ಪರಂಪರೆಯ ಬಗ್ಗೆ ಉಳಿದವರಿಗಿಂತ ಹೆಚ್ಚು ಭಾವುಕರಾದವರು ದ.ಕ. ಜಿಲ್ಲೆಯವರು. ಮಿಶನರಿಗಳ ಚಟುವಟಿಕೆಗಳು ವ್ಯಾಪಕವಾಗಿ ಹಬ್ಬಿದ್ದು ದಕ್ಷಿಣ ಕನ್ನಡದಲ್ಲಿ. ದ.ಕ.ದ ಮೊದಲ ಹಂತದ ಸಣ್ಣಕತೆ ಮತ್ತು ಕಾದಂಬರಿಗಳು ಹುಟ್ಟಲು ಕಾರಣ ಮಿಶನರಿಗಳು.

ಇಂಗ್ಲೀಷರು ಆಡಳಿತ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತಂದರು. ಇದರಿಂದಾಗಿ ದಕ್ಷ, ವ್ಯವಸ್ಥಿತ, ಕೇಂದ್ರೀಕೃತ ನೌಕರಶಾಹಿಯ ನಿರ್ಮಾಣವಾಯಿತು. ರಸ್ತೆ ಸಾರಿಗೆ ಸಂಪರ್ಕ, ರೈಲು, ಅಂಚೆ ತಂತಿ ಇತ್ಯಾದಿಗಳು, ನೀರಾವರಿ, ವಿದ್ಯುತ್ ಉತ್ಪಾದನೆ, ಹೊಸ ಕಾರ್ಖಾನೆಗಳ ಸ್ಥಾಪನೆ ಇದರಿಂದಾಗಿ ನಗರಗಳು ಬೆಳೆದವು. ಅಲ್ಲದೆ ಭಾರತೀಯರ ಬದುಕಿನ ಮೇಲೆ ಗಾಢ ಪರಿಣಾಮವನ್ನುಂಟು ಮಾಡಿದವು. ಬ್ರಿಟಿಷರು ಜಾರಿಗೆ ತಂದ ಹೊಸ ಶಿಕ್ಷಣ ಪದ್ಧತಿ ಮತ್ತು ಇಂಗ್ಲೀಷಿನ ಕಲಿಕೆಯಿಂದಾಗಿ ಭಾರತೀಯರೂ ಕೆಳಹಂತದ ಆಡಳಿತದಲ್ಲಿ ಪಾಲ್ಗೊಳ್ಳಲು ಕಾರಣವಾಯಿತು.

ಇಂಗ್ಲೀಷ್ ಕಲಿತಿದ್ದರಿಂದ ಕರಾವಳಿ ಜನತೆ ಪಾಶ್ಚಾತ್ಯ ಪ್ರಭಾವಕ್ಕೆ ತೆರೆದುಕೊಳ್ಳಲಾರಂಭಿಸಿದ್ದು, ಅಂದಿನ ಸಮಾಜದಲ್ಲಿ ದೊಡ್ಡ ಬಿರುಗಾಳಿ ಎಬ್ಬಿಸಿತು. ದಕ್ಷಿಣ ಕನ್ನಡದ ಮೊದಲ ಹಂತದ ಹೆಚ್ಚಿನ ಸಾರಸ್ವತ ಬರಹಗಾರರು ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾದವರು. ಮಿಶನರಿಗಳು ಆಸ್ಪತ್ರೆಗಳನ್ನು ಮತ್ತು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು. ಮತಾಂತರ, ಮತಪ್ರಚಾರಕ್ಕೆ ಶಿಕ್ಷಣ ಮುಖ್ಯ ಕಾರಣವೆಂದು ಅರಿತವರಾಗಿದ್ದರು. ಇದರಿಂದಾಗಿ ಇಂಗ್ಲೀಷ್ ಬಲ್ಲ ಒಂದು ಗುಂಪು ಅಸ್ತಿತ್ವಕ್ಕೆ ಬಂದು, ಇಂಗ್ಲೀಷ್ ಮತ್ತು ಪಾಶ್ಚಾತ್ಯ ಸಾಹಿತ್ಯವನ್ನು ಅಭ್ಯಾಸ ಮಾಡಲು ಅವಕಾಶ ದೊರೆಯಿತು.

"ಹತ್ತೊಂಭತ್ತನೇಯ ಶತಮಾನದ ಪೂರ್ವಾರ್ಧದಲ್ಲೇ ಮಿಷನರಿಗಳ ಚಟುವಟಿಕೆಗಳು ಇಲ್ಲಿ ಪ್ರಾರಂಭವಾಗಿದ್ದವು. ದೇಶದಲ್ಲಿಯೇ ಪ್ರಸಿದ್ಧಿ ಪಡೆದ ಬಾಸೆಲ್ ಮಿಷನ್ ಕೇಂದ್ರವಿದ್ದುದು ಮಂಗಳೂರಿನಲ್ಲಿ. ಈ ಸಂಸ್ಥೆ ೧೯೨೦ರ ತನಕವೂ ದಕ್ಷಿಣಕನ್ನಡದ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಕ್ರಿಯಾಶೀಲವಾದ ಪಾತ್ರವನ್ನು ವಹಿಸಿರುವುದನ್ನು ಕಾಣಬಹುದು."[೧೭]

"ಮಂಗಳೂರು ಸಮಾಚಾರ" ಪತ್ರಿಕೆ ಬಾಸೆಲ್ ಮಿಷನ್‌ನಿಂದ ಆರಂಭವಾಗಿತ್ತು ಅನಂತರ ೧೯೦೦ರವರೆಗೆ ವಿಚಿತ್ರ ವರ್ತಮಾನ ಸಂಗ್ರಹ, ಇಂಡಿಯಾ ಮತ್ತು ಅನ್ಯದೇಶದ ವಾರ್ತಿಕೆ, 'ಸುದರ್ಶನ', 'ಕನ್ನಡಕೇಸರಿ' ಮುಂತಾದ ಸುಮಾರು ಹದಿನೈದು ಪತ್ರಿಕೆಗಳು ದಕ್ಷಿಣ ಕನ್ನಡದಿಂದ ಹೊರಡುತ್ತಿದ್ದವು"[೧೮]

ಹತ್ತೊಂಭತ್ತನೇಯ ಶತಮಾನದಲ್ಲಿ ಅಪರೂಪವಾಗಿ ಸ್ವತಂತ್ರ ಕಥೆಗಳ ರಚನೆಯ ಪ್ರಯತ್ನವನ್ನು ಕಾಣುತ್ತೇವೆ. ಆದರೆ ಅನುವಾದಗಳ ಸಂಖ್ಯೆ ಹೇರಳವಾಗಿದೆ. ಆದರೂ ಈ ಅನುವಾದಗಳು ಮುಂದೆ ಪ್ರಾರಂಭವಾದ ಕನ್ನಡ ಸಣ್ಣಕಥೆಗಳ ಉಗಮ ಹಾಗೂ ಬೆಳವಣಿಗೆಗೆ ಹಿನ್ನೆಲೆಯಾಗಿದೆ"[೧೯] ಎಂದು ಸತ್ಯನಾರಾಯಣ ಮಲ್ಲಿಪಟ್ಟಣ ಅವರ ಮಾತನ್ನು ಉಲ್ಲೇಖಿಸಬಹುದು. ಆಗಿನ ಪತ್ರಿಕೆಗಳಲ್ಲಿ ರಾಮಾಯಣ, ಮಹಾಭಾರತ, ಪುರಾಣಗಳು, ಬುದ್ಧಚರಿತೆ ಮುಂತಾದ ಗ್ರಂಥಗಳಿಂದ ಆಯ್ದ ಕಥಾಭಾಗಗಳನ್ನು ಕಾಣಬಹುದು.

"ಸಿಂದ್‌ಬಾದ್‌ನೆಂಬ ನಾವಿಕನು" ಮೊದಲಾದ ಅನುವಾದಿತ ಕತೆಗಳೂ ಅಂದಿನ ಪತ್ರಿಕೆಗಳಲ್ಲಿ ಕಾಣಿಸಿಕೊಂಡಿವೆ. ಆದ್ದರಿಂದ 'ಕನ್ನಡ ಕಾದಂಬರಿಗಳಂತೆಯೇ ಕನ್ನಡ ಕಥೆಗಳೂ ಅನುವಾದದಿಂದಲೇ ಆರಂಭವಾಗಿವೆ ಎನ್ನಬಹುದು"[೨೦]

ಕಥಾ ಸಾಹಿತ್ಯ ಕನ್ನಡದಲ್ಲಿ ಸಾಕಾರಗೊಳ್ಳಲಾರಂಭಿಸಿದ ಕಾಲದ ದ.ಕ. ಕತೆಗಾರರ ಬಗ್ಗೆ 'ಅಂದಿನ ಆವೂರು' ಕಥಾ ಸಂಕಲನದ ಮುನ್ನುಡಿಯಲ್ಲಿ ಮಾಸ್ತಿಯವರು ೧೯೦೫ರಿಂದಲೇ ೧೯೧೫ರ ಕಾಲವನ್ನು ಹೊಸಗನ್ನಡ ಆರಂಭದ ಕಾಲವೆಂದು ಕರೆದಿದ್ದಾರೆ. ಬೆನಗಲ್ ರಾಮರಾವ್, ಪಂಜೆಮಂಗೇಶರಾವ್, ರಾಜಗೋಪಾಲಕೃಷ್ಣರಾವ್ ಮತ್ತು ಎಂ.ಎನ್. ಕಾಮತರನ್ನು 'ಹೊಸಗನ್ನಡದ ಆರಂಭಕಾಲದ' ಲೇಖಕರಲ್ಲಿ ಸೇರಿಸಿದ್ದಾರೆ".[೨೧]

ದ.ಕ. ಪ್ರದೇಶವು ವಸಾಹತೀಕರಣಕ್ಕೆ ಒಳಗಾಗುವುದಕ್ಕೆ ಪೂರ್ವದಲ್ಲಿ ಅಪರೂಪವಾಗಿ ಗದ್ಯ ರಾಜಕೀಯ ದಾಖಲೆ ಪತ್ರ ಇತ್ಯಾದಿಗಳಲ್ಲಿ ಬಳಕೆಯಾಗುತ್ತಿತ್ತು. ಗದ್ಯ ಆಗಿನ ಕಾಲದಲ್ಲಿ ಹೊರಡುತ್ತಿದ್ದ ಪತ್ರಿಕೆಗಳ ಮೂಲಕ ವಿಕಾಸ ಹೊಂದುತ್ತಾ ಹೋಯಿತು.

ಪಂಜೆಮಂಗೇಶರಾಯರ (೧೮೭೪ – ೧೯೩೭) 'ನನ್ನ ಚಿಕ್ಕ ತಾಯಿ', ಕನ್ನಡದ ಮೊದಲ ಸ್ವತಂತ್ರ ಸಣ್ಣಕತೆಯಾಗಿದೆ. ೧೯೦೦ ರಲ್ಲಿ 'ಸುವಾಸಿನಿ' ಪತ್ರಿಕೆಯಲ್ಲಿ ಪ್ರಕಟವಾದ ನಂತರ "ನನ್ನ ಚಿಕ್ಕ ತಂದೆ", "ಭಾರತ ಶ್ರವಣ", "ನನ್ನ ಹೆಂಡತಿ" "ನನ್ನ ಚಿಕ್ಕ ತಂದೆಯವರ ಉಯಿಲ್" ಎಂಬ ಸ್ವತಂತ್ರ ಸಾಮಾಜಿಕ ಕತೆಗಳೂ 'ಪ್ರಥುಲ', 'ವೀರಮತಿ' ಎಂಬ ಚಾರಿತ್ರಿಕ ಕಥೆಗಳೂ ಪ್ರಕಟವಾಗಿವೆ."[೨೨]

"ನನ್ನ ಚಿಕ್ಕ ತಾಯಿ", "ನನ್ನ ಹೆಂಡತಿ", "ನನ್ನ ಚಿಕ್ಕ ತಂದೆ", ಹಾಗೂ ನನ್ನ ಚಿಕ್ಕ ತಂದೆಯವರ ಉಯಿಲು' ಕಥೆಗಳಲ್ಲಿ ಆತ್ಮಚರಿತ್ರೆಯ ಚಾರಿತ್ರಿಕ ಕಥೆಗಳಿಗೆ ಮುಖ್ಯ ಪಾತ್ರವಾದ ನಾಯಕಿಯ ಹೆಸರನ್ನೇ ಕೊಟ್ಟಿರುವುದು ಹೆಣ್ಣಿನ ಧೈರ್ಯ. ಸಾಹಸ ಮತ್ತು ತ್ಯಾಗಗಳನ್ನು ಕೀರ್ತಿಸುವ ಅವರ ಉದ್ದೇಶವನ್ನು ಸೂಚಿಸುತ್ತದೆ".[೨೩]

ಪಂಜೆಯವರ ನಂತರ ಕಂಡುಬರುವ ಕಥೆಗಾರರು ಎಂ.ಎನ್ ಕಾಮತರು (೧೮೮೩– ೧೯೪೦) ಅವರು ಬರೆದ 'ಸ್ತ್ರೀ ಜಾತಿಯ ಮಹತ್ವ' ಕತೆ ೧೯೧೨ರ ಸ್ವದೇಶಾಭಿಮಾನಿ ಪತ್ರಿಕೆಯಲ್ಲಿ ಕಾಣಸಿಗುತ್ತದೆ. 'ಏ' ಎಂಬ ಹೆಸರಿನಲ್ಲಿ ಬರೆದ 'ಸ್ವಪ್ನದ ತೊಟ್ಟಿಲು', 'ಕಲಾವತಿ' ಮುಂತಾದವೆಲ್ಲ ಮಹಿಳೆಯರ ಕುರಿತು ಉದಾರಚಿಂತನೆಯುಳ್ಳ ಮಹಿಳೆಯರಿಗೆ ಆಗುವ ಶೋಷಣೆಯ ಕುರಿತು ಅನಿಷ್ಟ ಪದ್ಧತಿಗಳ ನಂಬಿಕೆಯ ಕುರಿತು ಬಂದಿವೆ. ಅನಂತರ ಪತ್ರಿಕೆಗಳಲ್ಲಿ ಹೆಚ್ಚಾಗಿ ಕಾಣಸಿಕೊಳ್ಳುವ ಕಥೆಗಾರರೆಂದರೆ ಶ್ರೀ ಆರ್.

ಶ್ರೀನಿವಾಸ ರಾವ್, ಗೋಪಾಲಕೃಷ್ಣ, ಎಚ್. ಬಿ. ರಾವ್, ಪಿ.ಎಸ್. ವೆಂಕಟರಾವ್ ಎಲ್. ವಿ. ಮುಖ್ಯರಾಗುತ್ತಾರೆ. [೨೪]

ಪ್ರಾರಂಭಕಾಲದ ಸಣ್ಣಕತೆಗಳ ಅಂಶವೆಂದರೆ ಮನರಂಜನೆಯನ್ನು ನೀಡುವುದರೊಂದಿಗೆ ನೀತಿಯನ್ನು ಬೋಧಿಸುವುದು ಅವಶ್ಯಕ ಎಂದು ಲೇಖಕರು ಭಾವಿಸಿದ್ದರು. ಹಾಗಾಗಿ ಎಷ್ಟೋ ಸಂದರ್ಭಗಳಲ್ಲಿ ತೀರ ತೆಳುವಾದ, ಉದಾರವಾದ ಒಂದು ನೀತಿಯನ್ನು ಹೇಳುವುದಕ್ಕಾಗಿ ಕತೆಗಳ ರಚನೆಯಾಗುತ್ತಿತ್ತು.

ನವೋದಯ ಮೊದಲ ಹಂತದ ದಕ್ಷಿಣ-ಕನ್ನಡದ ಸಾಮಾಜಿಕ, ರಾಜಕೀಯ ಸನ್ನಿವೇಶ ಇಂಗ್ಲಿಷ್ ವಿದ್ಯಾಭ್ಯಾಸ, ಮಿಷನರಿಗಳ ಚಟುವಟಿಕೆಗಳು, ಸ್ವಾತಂತ್ರ್ಯದ ಹಂಬಲ ಮತ್ತು ಅದಕ್ಕಾಗಿ ನಡೆಸಿದ ಹೋರಾಟ, ಅದರ ಜೊತೆಜೊತೆಯೇ ಬಂದ ಸಾಮಾಜಿಕ ಸುಧಾರಣೆಯ ಹಂಬಲ, ಇದಕ್ಕೆ ಆಸರೆಯಾಗಿ ಅಸ್ತಿತ್ವಕ್ಕೆ ಬಂದ ಪತ್ರಿಕೆಗಳು, ಓದುಗರ ಮನರಂಜನೆಗಾಗಿ ಬರೆಯಬೇಕಾಗಿ ಬಂದದ್ದು ಇವೇ ಮುಂತಾದವುಗಳು ಅಂದಿನ ಗದ್ಯ ಸಾಹಿತ್ಯದ ವಿಶೇಷವಾಗಿ ಕತೆ-ಕಾದಂಬರಿಗಳ ಉಗಮಕ್ಕೆ ಕಾರಣವಾದದ್ದನ್ನು ಗುರುತಿಸಬಹುದು.

ಆ ಕಾಲದ ಕತೆಗಳು ಇಂಗ್ಲಿಷ್ ಸಾಹಿತ್ಯದಿಂದ ಪ್ರೇರಣೆ ಪಡೆದಿದ್ದರೂ ಅವು ನಮ್ಮ ನೆಲದಿಂದಲೇ ಹುಟ್ಟಿವೆ. ತಮ್ಮ ಕಾಲದ ಬದುಕನ್ನು ದಾಖಲಿಸಲು ನೋಡಿವೆ. ಹಾಗೆ ಮಾಡುವುದು ಐತಿಹಾಸಿಕ ಅಗತ್ಯವೂ ಆಗಿತ್ತು. ಪಾಶ್ಚಾತ್ಯರಿಂದ ತಂತ್ರಕುಶಲತೆಯನ್ನು ಕಲಿತಿದ್ದಾರೆ. ಹೊಸ ಆಲೋಚನೆ ಭಾವನೆಗಳಿಗೆ ವಾಹಕವಾಗುವಂತೆ ಗದ್ಯವನ್ನು ತಿದ್ದಿ ತೀಡಿಕೊಂಡಿದ್ದಾರೆ. ದಕ್ಷಿಣ ಕನ್ನಡದ ವಿಶಿಷ್ಟ ಛಾಪನ್ನು ಕೆಲವರು ಉಳಿಸಿಕೊಂಡಿದ್ದಾರೆ.

ನವೋದಯದ ಮೊದಲ ಹಂತದ ಈ ಲೇಖಕರು ಸಣ್ಣಕತೆಗೆ ಸರಿಯಾದ ದಿಕ್ಕುದಿಸೆಯನ್ನು ತೋರಿಸಿದ್ದಲ್ಲದೆ, ಗಟ್ಟಿಯಾದ ತಳಪಾಯವನ್ನು ಹಾಕಿಕೊಟ್ಟಿದ್ದಾರೆ.

ಪತ್ರಿಕೆಗೂ ಲೇಖಕರಿಗೂ ನಿಕಟ ಪೂರ್ವ ಬಾಂಧವ್ಯವಿದೆ. ಲೇಖಕರು ಮುಖ್ಯವಾಗಿ ತಮ್ಮ ಲೇಖನ ಕತೆ ಮುಂತಾದವುಗಳ ಪ್ರಕಟಣೆಗೆ ಪತ್ರಿಕಾ ಮಾಧ್ಯಮವನ್ನೇ ಅವಲಂಬಿಸಬೇಕಾಗಿದ್ದುದನ್ನು ಇಲ್ಲಿ

ನೆನಪಿಸಿಕೊಳ್ಳಬಹುದು. ಮೊದಲ ಸ್ವತಂತ್ರ ಕಥಾಸಂಕಲನ ೧೯೩೦ರಲ್ಲಿ ಬಂದಿರುವುದರಿಂದ ಅಲ್ಲಿಯವರೆಗೆ ಕತೆಗಳಿಗೆ ಪತ್ರಿಕೆಗಳು ಎಷ್ಟು ಅನಿವಾರ್ಯವಾಗಿದ್ದವು ಎನ್ನುವುದು ಗೊತ್ತಾಗುತ್ತದೆ.

"ಲೇಖಕರು ಪತ್ರಿಕಾ ಕೆಲಸದಲ್ಲಿ ತೊಡಗಿಸಿಕೊಳ್ಳುವುದು ಸರಸ್ವತಿಯನ್ನು ಮಾರಾಟ ಮಾಡುವುದಕ್ಕೆ ಸಮಾನ" ಎಂಬ ನಂಬಿಕೆಯನ್ನು ಮುಂದಿಡುತ್ತ ಪತ್ರಿಕೆಯನ್ನು ನಿಲ್ಲಿಸುತ್ತಿಯೋ ಎಲ್ಲಾ ಕಳೆದುಕೊಳ್ಳುತ್ತೀಯೋ ಎಂದು ಕೇಳಿದಾಗ ಒಂದು ವರ್ಷ ಹೇಗಾದರೂ ನಡೆಸಿ ಅನಂತರ ನಿಲ್ಲಿಸುತ್ತೇವೆ ಎಂದಾಗ ಶ್ರೀ ಗೋವಿಂದ ಪೈಯವರು ಭಾಷೆ ಪಡೆದುಕೊಂಡರಂತೆ. ನಂತರ ತಾನು ನಡೆಸುತ್ತಿದ್ದ ಪತ್ರಿಕೆ ನಿಲ್ಲಿಸಿದ್ದನ್ನು ರಾಜವಾಡೆಯವರು ನೆನಪಿಸಿಕೊಳ್ಳುತ್ತಾರೆ."[೨೫] ಲೇಖಕಿಯರು ಬೆಳಕಿಗೆ ಬರುವುದಕ್ಕೆ ವೇದಿಕೆಯಾಗಿದ್ದ ಕನ್ನಡಿಗರ ಮೊದಲ ಮಹಿಳಾ ಪತ್ರಿಕೆ 'ಸುಪ್ರಭಾತ' ಒಂದೇ ವರ್ಷದಲ್ಲಿ ನಿಂತು ಹೋದುದು ವಿಷಾದದ ಸಂಗತಿಯಾಗಿದೆ.

ಕ್ರೈಸ್ತ, ಮುಸ್ಲಿಂ ಬರಹಗಾರರು ಈ ಅವಧಿಯಲ್ಲಿ ವಿರಳವಾಗಿ ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದರೂ, ಅವರು ಹಿಂದು ಪಾತ್ರಗಳ ಹಿಂದೂ ಸಂಸ್ಕೃತಿಯ ಕುರಿತಾಗಿ ಹೆಚ್ಚು ಕತೆಗಳನ್ನು ಬರೆಯುತ್ತಿದ್ದುದು ಸ್ಪಷ್ಟವಾಗಿದೆ. ಇದಕ್ಕೆ ಮುಖ್ಯ ಕಾರಣ ಅಂದಿನ ಜನರ ಮನೋಭಾವ. 'ಕತೆ' ಎಂದರೆ ಹಿಂದೂ ಸಂಸ್ಕೃತಿಯ ಕುರಿತಾದ ಕತೆ ಎಂಬುದು ಅಂದಿನ ಬಲವಾದ ನಂಬಿಕೆಯಾಗಿತ್ತು.

ಇಸ್ಲಾಂ, ಕ್ರೈಸ್ತ ಧರ್ಮದ ಅನುಭವಗಳು ಪರಕೀಯವಾಗಿಯೇ ಉಳಿಯುವ ಭಯ ಮತ್ತು ಆ ಕುರಿತು ಜನರಲ್ಲಿ ಬಲವಾಗಿದ್ದ ಪೂರ್ವಗ್ರಹೀತಗಳೂ ಇಂಥ ಬೆಳವಣಿಗೆಗೆ ಕಾರಣವಾಗಿದೆ ಫ್ರಾನ್ಸಿಸ್ ದಾಂತಿಯವರು ಮತಾಂತರ ಕುರಿತು ಬರೆದರೂ ಕತೆಯಲ್ಲಿ ಹಿಂದೂ ಪರವಾದ ನಿಲುವು ಎದ್ದು ಕಾಣಲು ಬಿ. ಎಸ್. ಮಹಮ್ಮದ್, ಸಿಕಂದರ್, ಬಿ.ಎಂ. ಇದಿನಬ್ಬ ಮುಂತಾದವರ ಕತೆಗಳು ಹಿಂದೂ ಸಂಸ್ಕೃತಿಯ ಕುರಿತಾಗೇ ಬರೆಯಲು ಇದೇ ಕಾರಣವಾಗಿದೆ.

೧೯೪೦ರ ದಶಕ ದಕ್ಷಿಣ ಕನ್ನಡ ಸಾಹಿತ್ಯದಲ್ಲಿ ಒಂದು ಮುಖ್ಯ ಹೆಜ್ಜೆಯಾಗಿದೆ. ಈ ದಶಕದಿಂದ ಇಲ್ಲಿಯ ಕ್ರೈಸ್ತ ಮತ್ತು ಮುಸ್ಲಿಂ ಬರಹಗಾರರು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡರು. ಮೊದಲ ಮುಸ್ಲಿಂ ಲೇಖಕಿ ಫಾತಿಮಾರನ್ನು ನೆನಪಿಕೊಳ್ಳಬಹುದು.

ವಸಂತಿ ಬಾಯಿ ಪಡುಕೋಣೆ ಮತ್ತು ಪಡುಕೋಣೆ ಸೀತಾದೇವಿ ಇವರುಗಳು ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ತಲೆಮಾರಿನ ಲೇಖಕಿಯರು. ವಸಂತಿ ಬಾಯಿಯವರು ಬಾಲ್ಯ ವಿವಾಹ, ವಿಧವಾ ವಿವಾಹಗಳ ಕಥಾ ವಸ್ತುಗಳೊಂದಿಗೆ ಗಂಡು ಹೆಣ್ಣಿನ ವಿವಾಹೇತರ ಸಂಬಂಧಗಳ ವೈಪರೀತ್ಯ ತೀವ್ರತೆಗಳು ಮತ್ತು ಸಂಸಾರದೊಳಗಿನ ಭಾವಶೂನ್ಯ ಸಂಬಂಧಗಳನ್ನು ಕಥಾಬಿತ್ತಿಗೆ ಆಯ್ದುಕೊಂಡಿದ್ದಾರೆ. ಸೀತಾದೇವಿಯವರು ವಿಶೇಷವಾಗಿ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದು, ವಿರಳವಾಗಿ ಕತೆಗಳನ್ನು ರಚಿಸಿದ್ದಾರೆ.

ನಲ್ವತ್ತರ ದಶಕದಿಂದ ಅನೇಕ ಲೇಖಕಿಯರು ಕಾಣಿಸಿಕೊಳ್ಳುತ್ತಾರೆ. ಅದರಲ್ಲಿ ಇಂದಿರಾಬಾಯಿ, ಉಡುಪಿ, ಕಲ್ಯಾಣಕ್ಕೆ, ಕಾರ್ಕಳ ಕೃಷ್ಣವೇಣಿಬಾಯಿ (ಕೆ. ವಿ. ಬಾಯಿ) ಗುಣ ಉದ್ಯಾವರ, ಸಾ. ಫಾತಿಮಾ ಮತ್ತು ಸುಲೋಚನಾ ಅಮ್ಮನ್ನ ಅವರ ಕತೆಗಳನ್ನು ಕಾಣಬಹುದು.

ಮಿಶನರಿಗಳ ಪ್ರವೇಶದಿಂದ ಮುದ್ರಣಯುಗ ಪ್ರಾರಂಭವಾದ ಮೇಲೆ ಧರ್ಮಪ್ರಚಾರ ಸಾಮಾಗ್ರಿಗಳು, ವೃತ್ತ ಪತ್ರಿಕೆಗಳು, ಪಠ್ಯ ಪುಸ್ತಕಗಳು ಪ್ರಾಚೀನ ಕಥೆಗಳ ಮರು ನಿರೂಪಣೆಗಳು ಅನುವಾದಗಳು ಹೀಗೆ ಹಲವು ಬಗೆಯಲ್ಲಿ ಗದ್ಯಬರವಣಿಗೆಗೆ ಚಾಲನೆ ಸಿಕ್ಕಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಆಧುನಿಕ ಕನ್ನಡ ಗದ್ಯ ರೂಪುಗೊಂಡದ್ದು ಹೀಗೆ. ಈ ರೀತಿ ರೂಪುಗೊಂಡ ಗದ್ಯದ ದೇಹಕ್ಕೆ ಪಾಶ್ಚಾತ್ಯ ಆಧುನಿಕ ಸಣ್ಣಕತೆಗಳ ಪ್ರಭಾವದಿಂದ ಜೀವಸ್ಪರ್ಶವಾಯಿತು.

"ದಕ್ಷಿಣ ಕನ್ನಡದಲ್ಲಿ ಸಣ್ಣಕತೆಗಳ ಹುಟ್ಟು ಮತ್ತು ಬೆಳವಣಿಗೆಗೆ ಪಾತ್ರ, ಘಟನೆ, ವಸ್ತು ಮತ್ತು ಸನ್ನಿವೇಶ ಈ ನಾಲ್ಕು ಅಂಶಗಳು ಒಂದು ಆಧುನಿಕ ಪ್ರಜ್ಞೆಯಿಂದ ಉದ್ದೇಶಿತ ಪರಿಣಾಮಕ್ಕಾಗಿ ದುಡಿಯುವ ಗದ್ಯ ಕಥಾನಕವೇ ಸಣ್ಣಕತೆ. ಕನ್ನಡದ ಮೊದಲನೆಯ ಸ್ವತಂತ್ರ ಸಣ್ಣಕತೆಯೆಂದು ಮಾನ್ಯವಾಗಿರುವ ಪಂಜೆ ಮಂಗೇಶರಾಯರ 'ನನ್ನ' 'ಚಿಕ್ಕತಾಯಿ', ಕತೆ, ಸುವಾಸಿನಿ ಮಾಸ ಪತ್ರಿಕೆಯ ೧೯೦೦ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಯಿತು."[೬]

೧೯೨೫ ರಿಂದ ೧೯೪೦ರ ಘಟ್ಟದಲ್ಲಿ ಸಣ್ಣಕತೆಗಳ ಬರವಣಿಗೆಯ ದೃಷ್ಟಿಯಿಂದ ಅದನ್ನು ಜನಮೆಚ್ಚಿ ಸ್ವಾಗತಿಸಿದ ದೃಷ್ಟಿಯಿಂದ ಈ ಕಾಲವನ್ನು ಸಣ್ಣಕತೆಗಳ ಸುವರ್ಣಯುಗ ಎಂದು ಕರೆಯಬಹುದು. ಶಿವರಾಮಕಾರಂತರು ಈ ಕಾಲಘಟ್ಟದಲ್ಲಿ ಸಣ್ಣಕತೆಗಳನ್ನು ಬರೆದವರು. ಈ ಕಾಲದಲ್ಲಿ ಪಂಜೆಯವರಿಂದ ಪ್ರಾರಂಭವಾದ ಲಘುಹಾಸ್ಯ ಶೈಲಿಯೂ ಕೌಟುಂಬಿಕ ವಸ್ತುವು ಎಂ. ಎನ್.

ಕಾಮತರಲ್ಲಿ ಮುಂದುವರಿದು ಸಣ್ಣಕತೆ ಸಮಾಜದ ಓರೆಕೋರೆಗಳನ್ನು ಪರಿಶೀಲಿಸುವ ಮಾಧ್ಯಮವಾದುದನ್ನು ಗಮನಿಸಬಹುದು.

ಕತೆಗಾರರು ಕತೆಗಳಲ್ಲಿ ಗಾಂಧೀಜಿಯವರಿಂದ ಪ್ರಾರಂಭವಾದ ಅಸ್ಪ್ರಶ್ಯತಾ ನಿವಾರಣೆ, ಪಾಶ್ಚಾತ್ಯ ಶಿಕ್ಷಣ ಪಡೆದ ವಿದ್ಯಾವಂತರಿಂದ ಪ್ರೇರಿತವಾದ ಸುಧಾರಣಾ ಪರನಿಲುವುಗಳನ್ನು (ಸರ್ವ ಶಿಕ್ಷಣ, ವಿಧವಾ ವಿವಾಹ, ಜಾತಿ ಪದ್ಧತಿ, ನಿರ್ಮೂಲನ, ಮುದುಕರು ಬಾಲಕಿಯರನ್ನು ಮದುವೆಯಾಗುವುದಕ್ಕೆ ವಿರೋಧ. ವೇಶ್ಯಾಸಮಸ್ಯೆಯ ಬಗ್ಗೆ ಸಹಾನುಭೂತಿ ಇತ್ಯಾದಿ) ಪ್ರಚೋದಿಸುವ ಉದ್ದೇಶ ಕಂಡು ಬರುತ್ತದೆ.

ಸುಧಾರಣಾವಾದ ಬಹಳ ವ್ಯಾಪಕವಾಗಿ ಹಬ್ಬಿ, ಸುಧಾರಕ ಸಂಘಗಳು ಊರೂರುಗಳಲ್ಲಿ ಸ್ಥಾಪನೆ ಗೊಂಡುದು ಕೂಡ ಆ ಕಾಲದ ಕತೆಗಳಲ್ಲಿ ತಿಳಿಯುತ್ತದೆ. ಉದಾಹರಣೆಗೆ ಭಾರತೀ ಬಾಯಿ ಪಣಿಯಾಡಿಯವರ "ಹುಟ್ಟು ಕೆಟ್ಟೇ" ಕತೆ ಹಾಗೂ ಕೊರಡ್ಕಲ್ ಶ್ರೀನಿವಾಸರಾಯರ ಅಜ್ಜಯ್ಯನ ಮದುವೆ' ಕತೆಯಲ್ಲಿ ಸುಧಾರಕ ಸಂಘದವರು ಮುದುಕ ರಾಮಯ್ಯನವರ ನಾಲ್ಕನೆಯ ಮದುವೆಯನ್ನು ನಿಲ್ಲಿಸಲು ಪ್ರಯತ್ನಿಸಿದರು.

ದಕ್ಷಿಣ ಕನ್ನಡದಲ್ಲಿ ೧೯೪೦ ರಿಂದ ೧೯೫೦ರವರೆಗಿನ ಅವಧಿಯನ್ನು ಪ್ರಗತಿಶೀಲ ಕತೆಗಳ ಕಾಲ ಎಂದು ಗುರುತಿಸಬಹುದು. ೧೯೪೧ರಲ್ಲಿ ಪ್ರಕಟವಾದ ಕಯ್ಯಾರ ಕಿಂಞಣ್ಣ ರೈಯವರ "ಅನ್ನದೇವರು ಮತ್ತು ಇತರ ಕತೆಗಳು". ಮೊದಲನೆಯ ಪ್ರಗತಿಶೀಲ ಕಥಾ ಸಂಕಲನ. ಅದೇ ವರ್ಷ ಪ್ರಕಟವಾದ ಲ್ಯಾಸಿಯಮ್ ಪ್ರಕಾಶನದ 'ಕಂಡೂ ಕಾಣದ ನೋಟಗಳು' ಎಂಬ ಸಂಪಾದಿತ ಕಥಾ ಸಂಕಲನವೂ ಪ್ರಗತಿಶೀಲ ಒಲವಿನ ಕತೆಗಳನ್ನು ಹೊಂದಿದೆ.

ಪತ್ರಿಕೆಗಳಲ್ಲಿ ಉತ್ತಮ ಪ್ರಗತಿಶೀಲ ಕತೆಗಳನ್ನು ಬರೆಯುತ್ತಿದ್ದ ಇನ್ನಿಬ್ಬರೆಂದರೆ ಗಣಪತಿ ಕಾಮತ್ ಮತ್ತು ಕೃಷ್ಣ ಉಪಾಧ್ಯಾಯ ನಂದಿಕೂರು, ಕಾಮತರ ಪ್ರಗತಿಶೀಲ ಕತೆಗಳು 'ನವಭಾರತ' 'ರಾಷ್ಟ್ರ ಬಂಧು' 'ಉಷಾ' ಮತ್ತು 'ಪ್ರಜಾ ಮತ'ದಲ್ಲಿ ಪ್ರಕಟವಾಗುತ್ತಿದ್ದವು. ಕೃಷ್ಣ ಉಪಾಧ್ಯಾಯರು ಕಂಠೀರವ ವಾರ ಪತ್ರಿಕೆಯ ಸಂಪಾದಕ ಬಳಗದಲ್ಲಿದ್ದು, ಆ ಪತ್ರಿಕೆಯಲ್ಲಲ್ಲದೆ ಪ್ರಜಾಮತ ಮತ್ತು ಜನಶಕ್ತಿ ಪತ್ರಿಕೆಗಳಲ್ಲೂ ಕತೆಗಳನ್ನು ಪ್ರಕಟಿಸಿದ್ದರು.

ಹತ್ತೊಂಬತ್ತನೆಯ ಶತಮಾನದಲ್ಲಿ ಅರಳುತ್ತಿದ್ದ ಕನ್ನಡ ಪತ್ರಿಕೋದ್ಯಮ ಮಹಿಳೆಯರ ಪುರೋಭಿವೃದ್ಧಿಯಲ್ಲಿ ಆಸಕ್ತಿ ತೋರುತ್ತಲೇ ಬಂದಿತ್ತು. ೧೮೮೨ರಲ್ಲಿ ಪ್ರಾರಂಭವಾದ ಎಂ. ವೆಂಕಟಕೃಷ್ಣಯ್ಯನವರ 'ಹಿತಬೋಧಿನಿ', ೧೯೦೮ ರಿಂದ ಹೊರಡುತ್ತಿದ್ದ 'ಭಾರತ ಮಿತ್ರ'ದಂಥ ಪತ್ರಿಕೆಗಳು ಸ್ತ್ರೀ ವಿದ್ಯಾಭ್ಯಾಸವೇ ಮೊದಲಾದ ಕುರಿತಾದ ವಿಷಯಗಳಲ್ಲಿ ಕಾಳಜಿ ವಹಿಸುತ್ತಿದ್ದವು. ೧೯೨೧ರಲ್ಲೂ ಸಜೀವ ಪತ್ರಿಕೆಯಾಗಿದ್ದ,



೧೯೦೧ ರಿಂದ ಬರತೊಡಗಿದ್ದ 'ಮಹಿಳಾಸಖಿ' ಎಂಬ ಪತ್ರಿಕೆ ಧಾರ್ಮಿಕ ಆಸಕ್ತಿಯೇ ಪ್ರಧಾನವಾದ ಮಹಿಳಾ ಪತ್ರಿಕೆಯಾಗಿತ್ತು. ಮಹಿಳೆಯರಿಂದ ಮಹಿಳೆಯರಿಗಾಗಿ ಪತ್ರಿಕೆ ನಡೆಸುವ ಕಾರ್ಯವನ್ನು ತಿರುಮಲಾಂಬ ೧೯೧೬ರಲ್ಲಿ ತಮ್ಮ 'ಕರ್ನಾಟಕ ನಂದಿನಿ'ಯಿಂದ ಪ್ರಾರಂಭಿಸಿದರು. ಪ್ರಾರಂಭದಲ್ಲಿ ಕಲ್ಯಾಣಮ್ಮ, ತಿರುಮಲೆ ರಾಜಮ್ಮ, ಶ್ಯಾಮಾಲಾದೇವಿ, ಎಂ. ಆರ್. ಲಕ್ಷಮ್ಮ, ವೆಂಕಮ್ಮ ಕೊಯಮತ್ತೂರ, ಸರೋಜಿನಿ ಮಹಿಷಿ ಮೊದಲಾದ ಅನೇಕ ಪತ್ರಕರ್ತೆಯರು ಈ ಕ್ಷೇತ್ರಕ್ಕೆ ಬಂದರು. ಪತ್ರಿಕಾ ಮಾಧ್ಯಮದ ಮೂಲಕ ಸ್ತ್ರೀಯರ ಪ್ರಗತಿಗಾಗಿ ಶ್ರಮಿಸಿದರು.

ಪತ್ರಿಕೆಗಳು, ಮಹಿಳಾ ವಿಮೋಚನಾ ಚಳುವಳಿಯ ಭಾಗವಾಗಿ ಬರುತ್ತಿರುವ ಪತ್ರಿಕೆಗಳು ಈ ಶತಮಾನದ ಮೊದಲಿಗೆ ಒಬ್ಬ ಪತ್ರಕರ್ತೆ ಸರಸ್ವತಿಬಾಯಿ ರಾಜವಾಡೆಯವರು ಗಿರಿಬಾಲೆ ಎಂಬ ಕಾವ್ಯನಾಮದಿಂದ ಓದುಗರಿಗೆ ಪರಿಚಿತರಾದವರು. ವಿಶಾಖ, ವೀಣಾಪಾಣಿ, ಮೊದಲಾದ ಹೆಸರುಗಳಲ್ಲೂ ಬರೆದಿದ್ದಾರೆ.

ಸರಸ್ವತಿಬಾಯಿ ರಾಜವಾಡೆಯವರು ಕತೆಗಾರ್ತಿಯಾಗಿ, ಕವಿಯಾಗಿ, ಅನುವಾದಕಿಯಾಗಿ, ಪ್ರಬಂಧಗಾರ್ತಿಯಾಗಿ, ನಾಟಕಕರ್ತೆಯಾಗಿ ಪತ್ರಕರ್ತೆಯಾಗಿ ದುಡಿದಿದ್ದಾರೆ. 'ಕಂಠೀರವ' ಪತ್ರಿಕೆಯಲ್ಲಿ ೧೯೨೯ರಲ್ಲಿ 'ನನ್ನ ಅಜ್ಞಾನ' ಎಂಬ ಕತೆ ಪ್ರಕಟವಾಯಿತು. ಇದು ಅವರ ಮೊದಲ ಪ್ರಕಟಿತ ಕತೆ. ಅದಕ್ಕೂ ಮೊದಲು ೧೯೨೮ರಲ್ಲಿ ಲೇಖನಗಳನ್ನು ಪ್ರಕಟಿಸಿದ್ದರು. ಮುಂದೆ 'ಅಂತರಂಗ', 'ನವಯುಗ', 'ಉಷಾ', 'ರಾಯಭಾರಿ', 'ನವಭಾರತ' ಮೊದಲಾದ ಅನೇಕ ಪತ್ರಿಕೆಗಳಲ್ಲಿ ಲೇಖನ, ಕತೆ, ವಿಮರ್ಶೆ, ನಾಟಕ, ಅನುವಾದ ಮೊದಲಾದವುಗಳನ್ನು ಪ್ರಕಟಿಸಿದರು. 'ನಿಸರ್ಗ' ಪತ್ರಿಕೆಗೆ ಸತತವಾಗಿ ಬರೆದರು. 'ಕಥಾವಳಿ' ಎಂಬ ಮಾಸಪತ್ರಿಕೆಯ ವನಿತಾ ವಿಭಾಗದಲ್ಲಿ ಏಳು ವರ್ಷ ಸಂಪಾದಕಿಯಾಗಿದ್ದರು. ೧೯೫೨ರಲ್ಲಿ ಪ್ರಾರಂಭವಾದ 'ಸುಪ್ರಭಾತ' ಪತ್ರಿಕೆ ಒಂದು ವರ್ಷ ನಡೆಯಿತು.

೧೯೫೨ರ ಫೆಬ್ರವರಿಯಲ್ಲಿ 'ಮಹಿಳಾ ಸಾಹಿತ್ಯದ ಪ್ರಗತಿಗಾಗಿ ಪ್ರಕಟವಾಗುವ ಮಾಸಪತ್ರಿಕೆ' ಎಂದು ಘೋಷಿಸಿಕೊಂಡು ಹೊರಟ ಪತ್ರಿಕೆ 'ಸುಪ್ರಭಾತ'. ರಾಜವಾಡೆಯವರು ಈ ಪತ್ರಿಕೆಯನ್ನು ಪ್ರಾರಂಭಿಸುವ ಪೂರ್ವದಲ್ಲಿ ಅನೇಕ ಪತ್ರಕರ್ತೆಯರು ಇಂಥ ಸಾಹಸಕ್ಕೆ ಧುಮುಕಿ ಕೈಸುಟ್ಟುಕೊಂಡಿದ್ದರು. ಹಣಕಾಸಿನ ಅಡಚಣೆಯಿಂದಲೇ ಅನೇಕ ಪತ್ರಿಕೆಗಳು ನಿಂತಿದ್ದವು. ಸ್ವತಃ ಪತ್ರಿಕೋದ್ಯಮ, ಪ್ರಕಾಶನೋದ್ಯಮಗಳ ಅನೇಕ ತೊಡಕುಗಳನ್ನು ಕಂಡಿದ್ದ ಆರ್. ಕಲ್ಯಾಣಮ್ಮನವರು ರಾಜವಾಡೆಯವರನ್ನು ಎಚ್ಚರಿಸಿದರು, ಅವರ ಧೈರ್ಯಕ್ಕೆ ಮೆಚ್ಚಿದರು.

"ಪತ್ರಿಕೆಯನ್ನು ನಡೆಸುವುದು ಎಷ್ಟು ಕಷ್ಟವೆಂಬುದನ್ನು ಅರಿತೂ ತಾವು ಈ ಸಮಯದಲ್ಲಿ ಪತ್ರಿಕಾ ಪ್ರಚಾರಕ್ಕೆ ನಿಂತಿರುವುದು ತಮ್ಮ ಸಾಹಿತ್ಯಾಭಿರುಚಿಯನ್ನೂ ಧೈರ್ಯವನ್ನೂ ವಿಶದಪಡಿಸುವುದು.' ಮತ್ತೊಂದು ಬಗೆಯ ಸಂದೇಹ, ಎಚ್ಚರಿಕೆ. ಪತ್ರಿಕೆಯು ಪ್ರಾರಂಭವಾದ ಸಂದರ್ಭದಲ್ಲಿ ಬಂದ ಕೆಲವು ಸಂದೇಶಗಳಲ್ಲಿದೆ: 'ಸ್ವಾತಂತ್ರ್ಯ ಮತ್ತು ಸುಧಾರಣೆಯ ಉನ್ಮಾದದಲ್ಲಿ ಮಹಿಳೆಯರು ದೇವದತ್ತವಾದ ತಮ್ಮ ಸ್ತ್ರೀತ್ವದ ಸಂಪತ್ತನ್ನೂ ಅದರ ಉಜ್ವಲ ಆಧ್ಯಾತ್ಮಿಕ ಗುಣಗಳನ್ನೂ ಮರೆಯದಿರಲಿ' ಎಂದು ವಿಶ್ವೇಶತೀರ್ಥರೂ, 'ಸ್ತ್ರೀ ಸ್ವಾತಂತ್ರ್ಯ ಪ್ರಚಾರದ ಈಗಳೀನ ಸ್ತ್ರೀ ಪುರುಷರ ಅನಿವಾರ್ಯವಾದ ಭಿನ್ನತೆಯಲ್ಲಿಯೂ ಕೇವಲ ಅಭಿನ್ನವಾದ ಅವರ ಜೀವನದ ಪರಸ್ಪರೈಕ್ಯವನ್ನೂ ಅನ್ಯೋನ್ಯ ಸಹಕಾರವನ್ನೂ ಮುಂಬೆಳೆಸುವ ಮಾರ್ಗದರ್ಶನದ ಸುಪ್ರಭಾತವಾಗಲಿ ಈ ನನ್ನ ಸೋದರಿಯ ಸುಪ್ರಭಾತ"[೨೭] ಎಂದು ಕಡೆಕಾರು ರಾಜಗೋಪಾಲಕೃಷ್ಣರಾಯರೂ ಸಂದೇಶವಿತ್ತರು. ನಂತರ ಆರ್ಥಿಕ ಅಡಚಣೆಯಿಂದಾಗಿಯೇ ಪತ್ರಿಕೆ ನಿಂತಿತು.

ಕೇವಲ ಪುರುಷರಚಿತ ಸಾಹಿತ್ಯದಿಂದ ಸಮಾಜದ ಆತ್ಮದರ್ಶನವಾಗಲಾರದು, ಸ್ತ್ರೀಯರೂ ಕೂಡಾ ಈ ಕ್ಷೇತ್ರದಲ್ಲಿ ಪರಿಶ್ರಮಪಡಬೇಕು, ಆದರೆ ಅವರ ಉತ್ಸಾಹ, ಪರಿಶ್ರಮಕ್ಕೆ ತಕ್ಕ ಪ್ರೋತ್ಸಾಹವಿಲ್ಲ, ಪ್ರಕಟಿಸುವವರಿಲ್ಲ ಎಂಬುದನ್ನು ತಿಳಿದ ರಾಜವಾಡೆಯವರು 'ಕಥಾವಳಿ'ಯ ವನಿತಾ ವಿಭಾಗದಲ್ಲಿ ಅವಕಾಶವನ್ನು ಕೊಟ್ಟರೂ ಅದು ಸಾಲದೆನಿಸಿ ಈ ಸ್ವತಂತ್ರ ಪತ್ರಿಕೆಯನ್ನು ಮಹಿಳೆಯರಿಂದ ಮಹಿಳೆಯರಿಗಾಗಿಯೇ ಆರಂಭಿಸಿದ್ದಾರೆ.

ಬರಹಗಾರರು ಮಹಿಳೆಯರೇ ಆಗಿರಬೇಕೆಂಬ ಇಚ್ಛೆ ಇದ್ದರೂ 'ಅದು ಎಷ್ಟರಮಟ್ಟಿಗೆ ಸಾಧ್ಯವಾಗುವುದೋ ನೋಡಬೇಕು' ಎಂಬಲ್ಲಿ ಮೊದಲ ಸಂಚಿಕೆಯಲ್ಲಿ ಅನುಮಾನ ವ್ಯಕ್ತಪಡಿಸಿದರೂ

ಸ್ತ್ರೀಯರ ಬರಹಗಳಿಂದಲೇ 'ಸುಪ್ರಭಾತ'ವನ್ನು ನಡೆಸುವುದು ಅಸಾಧ್ಯವೆಂಬ ಅರಿವು ಇದ್ದರೂ ಇಡೀ ವರ್ಷ ಮಹಿಳೆಯರ ಬರಹಗಳಿಂದಲೇ ಪತ್ರಿಕೆಯನ್ನು ನಡೆಸುವಲ್ಲಿ ಯಶಸ್ವಿಯಾಗಿದ್ದಾರೆ.

ರಾಜವಾಡೆಯವರು ಪತ್ರಿಕೋದ್ಯಮದ ಕೆಲವು ತಾಂತ್ರಿಕ ಅಂಶಗಳನ್ನು ಅರಿತವರಾಗಿದ್ದರು. ಅಲ್ಲಲ್ಲಿ ಸ್ತ್ರೀಯರನ್ನು ಕುರಿತು ಸಾಮಾನ್ಯ ವಿಷಯಗಳಲ್ಲಿ ಲೇಖನಗಳನ್ನು ಪ್ರಕಟಿಸಿದರೂ ಮುಖ್ಯವಾಗಿ ಸ್ತ್ರೀಯರ ಸೃಜನಶೀಲ ಬರವಣಿಗೆಗೆ ಈ ಪತ್ರಿಕೆ ಮೀಸಲಾಗಿದೆ. ಸ್ಥಳೀಯ ಧಾರ್ಮಿಕ, ಸಾಮಾಜಿಕ ಮೊದಲಾದ ಸಂದೇಶಗಳಿಂದ ಮೊದಲುಮಾಡಿ ವ್ಯವಸ್ಥಿತವಾಗಿ ಬಿಡುಗಡೆಗೊಂಡ ಈ ಪತ್ರಿಕೆ ವ್ಯಾವಹಾರಿಕವಾಗಿ ಅಚ್ಚುಕಟ್ಟಾಗಿಯೇ ನಿಂತಿತು.

ಹೆಣ್ಣು ಗಂಡಿನ ನಡುವಣ ಸಮಾನತೆಯನ್ನು 'ಸುಪ್ರಭಾತ' ಎತ್ತಿ ಹಿಡಿಯುತ್ತದೆ. ಆದರೆ ಅದಕ್ಕೊಂದು ಆಧ್ಯಾತ್ಮಿಕ ಪರಿವೇಷವನ್ನು ರಾಜವಾಡೆಯವರು ನೀಡಿದ್ದಾರೆ, ಇಬ್ಬರ ಹುಟ್ಟಿಗೂ 'ದೇವನೊಲುಮೆಯೆ' ಕಾರಣ ಎಂಬ ನೆಲೆಯಲ್ಲಿ ಅವರ ಸಮಾನತೆಯ ನೆಲೆಗೆ ಸಮರ್ಥನೆ ಕಾಣುತ್ತಾರೆ. ರಾಜವಾಡೆಯವರು ತಮ್ಮ ಸಂಪಾದಕೀಯಗಳಲ್ಲೂ ಇತರ ಲೇಖನಗಳಲ್ಲೂ ಸ್ತ್ರೀಯರ ಮಹತ್ವ ಮತ್ತು ಅವರ ಪ್ರಗತಿಯ ಅವಶ್ಯಕತೆಯನ್ನು ಒತ್ತಿ ಹೇಳುತ್ತಾರೆ. ರಾಜವಾಡೆಯವರು ತಮ್ಮ ಕಾಲದ ಸ್ತ್ರೀಪರ ನಿಲುವಿನಲ್ಲಿದ್ದ ಕೆಲವು ಮಿತಿಗಳನ್ನು ಸಹಜವಾಗಿ ತಾವೂ ಪಡೆದಿದ್ದಾರೆ. ಸ್ತ್ರೀ ವಿದ್ಯಾಭ್ಯಾಸದ ಅವಶ್ಯಕತೆ ಮೊದಲಾದವುಗಳನ್ನು ಒತ್ತಿ ಹೇಳುವಂತೆ ತಾಯ್ತನದ ಮಹತ್ವವನ್ನೂ ಒತ್ತಿ ಹೇಳುತ್ತಾರೆ.

ವರ್ಷದ ಮೊದಲಲ್ಲಿ ಇನ್ನೂ ಕಂಗೆಡದ ಸಂಪಾದಕಿ ಹೇಳುತ್ತಾರೆ. "ಸುಪ್ರಭಾತ ಕಂಗೆಟ್ಟಿಲ್ಲಗೆಡಲೂ ಆರದು! ಆಹತವಾದಷ್ಟೂ ಪ್ರಜ್ವಲಿಸಬೇಕೆಂಬ ಆಕಾಂಕ್ಷೆ ಬಲವಾಗುತ್ತಲೇ ಇದೆ.' 'ಕಂತಿ, ಹೊನ್ನಮ್ಮ, ನೀಲಮ್ಮ, ಗಿರಿಯಮ್ಮನವರ ಕಾರ್ಯಕ್ಷೇತ್ರವನ್ನು ಬೆಳಗುವ ಹೊಣೆಯನ್ನು ಸುಪ್ರಭಾತ ಹೊತ್ತಿದೆ'. ತನ್ನ ಸುತ್ತ ನಡೆದ ಸಾಹಿತ್ಯಿಕವಾದ ಹಾಗೂ ಸ್ತ್ರೀ ಸಂಬಂಧಿಯಾದ ಕಾರ್ಯಕ್ರಮಗಳ ವರದಿ. ವಿಶ್ಲೇಷಣೆಯನ್ನೂ 'ಸುಪ್ರಭಾತ' ತನ್ನ ಸಂಪಾದಕೀಯಗಳಲ್ಲಿ ಪ್ರಸ್ತಾಪಿಸಿದೆ. ಆರರಿಂದ ಹತ್ತರವರೆಗಿನ ಸಂಚಿಕೆಗಳು ಸಂಪಾದಕೀಯ ರಹಿತವಾಗಿ ಹೊರಬಂದಿವೆ."[೨೮]

ಮಹಿಳೆಯರ ಸಾಹಿತ್ಯದ ಪ್ರಗತಿಯನ್ನು ತನ್ನ ಗುರಿಯಾಗಿಟ್ಟುಕೊಂಡ ಪತ್ರಿಕೆ ಸ್ತ್ರೀಪರ ಧೋರಣೆಯನ್ನು ವ್ಯಕ್ತಪಡಿಸಿದ ರೀತಿ ಹಾಗೂ ಆ ಧೋರಣೆಯ ಸ್ವರೂಪ ಕುತೂಹಲಕಾರಿಯಾದದ್ದು. ಪಾಶ್ಚಾತ್ಯ ಶಿಕ್ಷಣದೊಂದಿಗೆ ಪ್ರಸರುತ್ತಿದ್ದ ಪಾಶ್ಚಾತ್ಯ ಜೀವನ ವಿಧಾನದ ರೀತಿಯನ್ನು ಸ್ತ್ರೀಯರು

ವಿರೋಧಿಸಬೇಕೆಂಬ ಧೋರಣೆ ತಿರುಮಲಾಂಬ ಅವರ ಕಾಲದಿಂದಲೂ ಬೆಳೆಯುತ್ತಿದ್ದು ಈಗ 'ಸುಪ್ರಭಾತ'ದಲ್ಲೂ ಕೆಲವು ಲೇಖಕಿಯರು ಈ ಧೋರಣೆಯನ್ನು ಎತ್ತಿ ಹಿಡಿದಿದ್ದಾರೆ.

'ಸುಪ್ರಭಾತ'ದ ನಾಲ್ಕನೆಯ ಸಂಚಿಕೆಯಲ್ಲಿ ಸಹನೆಯ ಬಗ್ಗೆ ವೃಂದಾ ಅವರು ಬರೆದಿರುವುದನ್ನು ಇದಕ್ಕೊಂದು ಚಿಕ್ಕ ನಿದರ್ಶನವಾಗಿ ಗಮನಿಸಬಹುದು. ..... ಹೆಣ್ಣು ಕೊಟ್ಟರೆ ಕುಲಕ್ಕೆ ಹೊರಗೆ ಅದೇನೋ ಸರಿ. ಆದರೆ ಇನ್ನೊಂದು ಕುಲದವರು ಆಕೆಯನ್ನು ಆದರದಿಂದ ಪ್ರೀತಿಯಿಂದ ತಮ್ಮ ಕುಲದಲ್ಲಿ ಸೇರಿಸಿಕೊಳ್ಳದಿದ್ದರೆ ಆಕೆಯ ಪಾಡು? ತಾನು ಸಹಿಸಿದ ನೋವಿನ ಮೇಲೆ ತಮ್ಮ ಕೀರ್ತಿಪತಾಕೆಯನ್ನು ಹಿಡಿಯುವವರ ಮೇಲೆ, ಅವಳಿಗೆ ಅಂತರಂಗದಲ್ಲಿ ತಿರಸ್ಕಾರ ಬೆಳೆಯುವುದು ಸಹಜ"[೨೯]

ತನ್ನವರಾರೂ ಇಲ್ಲವೆಂಬ ಭಾವನೆ ಬೆಳೆಯುತ್ತದೆ. ಅಂತೂ ಬಾಳಿನಲ್ಲಿ ಸುಖಕಾಣುವುದಿಲ್ಲ ಅವಳು'. ಹಲವಾರು ವರ್ಷಗಳ ಹಿಂದೆಯೇ ತವರುಮನೆ, ಗಂಡನಮನೆಗಳಿರುವ ಹೆಣ್ಣಿಗೆ ತನ್ನದೆಂಬ ಮನೆಯಿಲ್ಲದ ಸ್ಥಿತಿಯನ್ನು ಗುರುತಿಸುತ್ತಾ ಹೆಣ್ಣಿನ ಸಹನೆಯಿಂದಲೇ ಗಂಡಿನ ಅನ್ಯಾಯ ಪ್ರವೃತ್ತಿ ಬೆಳೆಯುತ್ತದೆ ಎನ್ನುತ್ತಾರೆ. ಹೆಣ್ಣಿನ ಮೇಲೆ ಅನೇಕ ಶತಮಾನಗಳಿಂದ ಹೇರಲಾಗಿರುವ ಇಂಥ ಮೌಲ್ಯಗಳಲ್ಲಿ ಅವಳ ದುರಂತವಿರುವುದನ್ನು ಕಳೆದ ತಲೆಮಾರಿನ ಲೇಖಕಿಯರೇ ಇಷ್ಟು ಸ್ಪಷ್ಟವಾಗಿ ಗುರುತಿಸಿದ್ದರೆನ್ನುವುದಕ್ಕೆ 'ಸುಪ್ರಭಾತ'ದಂಥ ಪತ್ರಿಕೆಯೇ ಸಾಕ್ಷಿಯಾಗಿದೆ. ಲೇಖಕಿಯರ ಸೃಜನಶೀಲ ಹಾಗೂ ಸೃಜನೇತರ ಬರಹಗಳಿಗೆ ಅವಕಾಶವಿತ್ತ 'ಸುಪ್ರಭಾತ' ತನ್ನ ಕಿರಿದಾದ ಸಮಯದಲ್ಲಿ ಸ್ತ್ರೀಯರ ಜಾಗೃತಿಗೂ ಶ್ರಮಿಸಿತು.

ಬಾಲ್ಯವಿವಾಹ, ಗಂಡಸಿನ ಮರುಮದುವೆಗಳು, ವಿಧವಾ ವಿವಾಹ, ವಿಧವೆಯರ ಕೇಶಮುಂಡನ– ಇಂಥ ವಿಷಯಗಳಲ್ಲಿ ರಾಜವಾಡೆಯವರು ತಮ್ಮ ಸ್ತ್ರೀಪರ ನಿಲುವನ್ನು ಸ್ಪಷ್ಟವಾಗಿ ಮುಂದಿಟ್ಟಿದ್ದಾರೆ, ವಿಧವೆಯರ ಕೇಶಮುಂಡನವನ್ನು ಕಾನೂನು ಅಪರಾಧವೆಂದು ಪರಿಗಣಿಸಬೇಕೆನ್ನುತ್ತಾ ಅವರು ಮಾಡುವ ವಿಮರ್ಶೆ ಲೇಖಕಿಯ ಬರವಣಿಗೆಯ ಧಾಟಿಗೆ ಒಂದು ನಿದರ್ಶನವಾದೀತು: 'ಪತಿಯು ಸತ್ತುದನ್ನು ತಿಳಿಸುವ ಧ್ವಜಪತಾಕೆಗಳಂತೆ ಸ್ತ್ರೀಯರನ್ನು ಉಪಯೋಗಿಸಿಕೊಳ್ಳುವ ಈ ರೀತಿಯು ಎಂತಹ ಕಟುತರವಾದುದು! ಧಿಕ್ಕಾರವಿರಲಿ ನಮ್ಮೀ ಆಸ್ತಿಕ ಅಸ್ತಿತ್ವಕ್ಕೆ'[೩೦] ಎಂದಿದ್ದಾರೆ.

ನಮ್ಮ ಪತ್ರಕರ್ತೆಯರಲ್ಲೇ ರಾಜವಾಡೆ ತಮ್ಮ ವೈವಿಧ್ಯಮಯ ಆಸಕ್ತಿಗಳಿಂದ, ಆಕರ್ಷಕವಾದ ಶೈಲಿಯಿಂದ, ದಿಟ್ಟತನದಿಂದ, ಪಾಂಡಿತ್ಯದಿಂದ, ಕಲ್ಪನಾಶಕ್ತಿ ಮತ್ತು ಹರಿತವಾದ ವೈಚಾರಿಕಶಕ್ತಿಯಿಂದ

ಗಮನಾರ್ಹರಾಗಿದ್ದಾರೆ. ಹಿಂದಿ, ಗುಜರಾತಿ, ತಮಿಳು, ಇಂಗ್ಲೀಷ್, ಮರಾಠಿ ಭಾಷೆಗಳನ್ನು ತಿಳಿದಿದ್ದ ಅವರ ಓದು ಕೂಡ ವಿಶಾಲವಾದ ವಲಯದ್ದಾಗಿರುವಂತೆ ತೋರುತ್ತದೆ.

ಪತ್ರಿಕೋದ್ಯಮವನ್ನು ತಮ್ಮ ವೃತ್ತಿಯಾಗಿ ಮಾಡಿಕೊಳ್ಳದಿದ್ದರೂ ಕೆಲವು ದಶಕಗಳು ಸತತವಾಗಿ ಪತ್ರಿಕೆಗಳಿಗೆ ಬರೆದ ಲೇಖಕಿ ರಾಜವಾಡೆ. ಕನ್ನಡ ಪತ್ರಿಕಾಲೋಕಕ್ಕೆ ಅವರು ಸಲ್ಲಿಸಿದ ಕೊಡುಗೆಯನ್ನು ಗಮನಿಸಿದರೆ ಅವರ ವೈಶಿಷ್ಟ್ಯ, ಸಾಧನೆಗಳನ್ನು ಮೆಚ್ಚಲೇಬೇಕು. ಕರಾವಳಿಯ ಲೇಖಕಿಯರಿಗೆ ಪತ್ರಿಕೆಗಳು ಪ್ರೋತ್ಸಾಹ ನೀಡಿವೆ.

ಕನ್ನಡ ಸಣ್ಣ ಕಥೆಗಳು ಉಗಮ ಮತ್ತು ಬೆಳವಣಿಗೆಯ ಹಿನ್ನೆಲೆಗೆ ಈ ಅನುವಾದಿತ ಕತೆಗಳ ಕೊಡುಗೆ ಹೆಚ್ಚಿನದು. ಅನುವಾದದ ಜಾಳುತನ, ಭಿನ್ನ ಸಂಸ್ಕೃತಿಯ ಆವರಣ ಪ್ರಾದೇಶಿಕತೆಯ ಅಂತರ, ಸಹಜವಲ್ಲದ ಭಾಷೆ ಇವುಗಳನ್ನು ದಾಟುವ ಪ್ರಯತ್ನದಿಂದಾಗಿ ಬಹುಶ: ೧೯೦೦ರ ಸುಮಾರಿಗೆ ನಮ್ಮದೇ ಎನಿಸುವ ಸಣ್ಣ ಕತೆಗಳು ರಚನೆಯಾದವು. ನಮ್ಮದನ್ನು ಹೇಳಬೇಕು, ಅದು ನಮ್ಮವರನ್ನು ತಲುಪಬೇಕು ಎಂಬ ಆ ಕಾಲದ ಸಹಜ ತುಡಿತ ಇಲ್ಲಿ ಒಂದು ಬಗೆಯ ಒತ್ತಾಸೆಯಾಗಿ ಪರಿಣಮಿಸಿದೆ. ಮುದ್ರಣ ಸೌಲಭ್ಯದಿಂದ ಪತ್ರಿಕೆಗಳು ಆರಂಭಗೊಂಡದ್ದು. ಓದುಗ ವರ್ಗ ಪತ್ರಿಕೆಗಳಲ್ಲಿನ ಕತೆ ಕಾದಂಬರಿಗೆ ಆಸೆ ಪಟ್ಟದ್ದು, ವ್ಯವಧಾನ ಕಡಿಮೆಯಾಗತೊಡಗಿದ್ದು ಸಣ್ಣ ಕತೆ ಹುಟ್ಟಲು, ಬೆಳೆಯಲು, ನೆಲೆಯೂರಲು ಕಾರಣವಾಯಿತು.

ಹೆಣ್ಣುಮಕ್ಕಳಿಗೆ ಶಿಕ್ಷಣ ಒಂದು ಬಗೆಯಲ್ಲಿ ಮನೋಸ್ಥೈರ್ಯವನ್ನು ಕೊಟ್ಟರೆ, ಉದ್ಯೋಗ ಆತ್ಮವಿಶ್ವಾಸವನ್ನು ಹೆಚ್ಚಿಸುವ ನೆಲೆಯಲ್ಲಿ ಮುಖ್ಯವಾಗುತ್ತದೆ. ಸ್ವಾತಂತ್ರ್ಯಪೂರ್ವ ಅವಧಿಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣ ಪಡೆದು ಬರವಣಿಗೆಯಲ್ಲಿ ತೊಡಗಿಕೊಂಡ ಲೇಖಕಿಯರು ಬೆರಳೆಣಿಕೆಯಲ್ಲಿದ್ದರೆ, ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಹಲವರು ಅಧ್ಯಾಪನ, ಬ್ಯಾಂಕಿಂಗ್ ಮೊದಲಾದ ಕ್ಷೇತ್ರಗಳಲ್ಲಿ ಉದ್ಯೋಗಸ್ಥರಾಗಿ ಬರಹಗಾರ್ತಿಯರ ಸಂಖ್ಯೆ ಗಣನೀಯವಾಗಿ ಏರಿದ್ದನ್ನು ಕಾಣಬಹುದಾಗಿದೆ.

ಅಲ್ಲಿಯವರೆಗೆ ಕಥೆ, ಕವನ, ಕಾದಂಬರಿ ಮತ್ತು ನಾಟಕ ಸಾಹಿತ್ಯ ರಚನೆಯಲ್ಲಿ ತೊಡಗಿದ್ದ ಮಹಿಳೆಯರು ಸೃಜನಶೀಲ ಸಾಹಿತ್ಯ ಪ್ರಕಾರಗಳಲ್ಲಿ ಮಾತ್ರವಲ್ಲದೆ, ಸಂಶೋಧನೆ, ವಿಮರ್ಶೆ ಮೊದಲಾದ ಇತರ ಸಾಹಿತ್ಯ ಪ್ರಕಾರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡದ್ದು ಕಂಡುಬರುತ್ತದೆ. ಸುಮಾರು ನೂರಕ್ಕೂ ಮಿಕ್ಕಿದ ಸಂಖ್ಯೆಯಲ್ಲಿ ಸಿಗುವ ಹಿರಿಕಿರಿಯ ಲೇಖಕಿಯರಲ್ಲಿ ಅನೇಕ ಮಂದಿ ಕಥೆ, ಕಾದಂಬರಿ, ಕಾವ್ಯ,

ಪ್ರಬಂಧ, ನಾಟಕ, ಅಂಕಣ ಬರಹಗಳು, ವಿಚಾರಸಾಹಿತ್ಯ, ಅನುವಾದ – ಈ ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶಿಸಿರುವುದು ತಿಳಿದುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಮಹಿಳಾ ಸಾಹಿತ್ಯ ಚರಿತ್ರೆಯ ಪುಟಗಳನ್ನು ಗಮನಿಸಿದರೆ, ಅಲ್ಲಿ ಸಿಗುವ ಮೊದಲ ತಲೆಮಾರಿನ ಲೇಖಕಿಯರೆಲ್ಲ ಶ್ರೇಣೀಕೃತ ಸಮಾಜದ ಮೇಲ್ವರ್ಗಗಳಿಂದ ಬಂದವರು. ಅನಂತರ ಸಮಾಜದ ಇತರ ಸಮುದಾಯಗಳಿಗೆ ಸೇರಿದ ಮಹಿಳೆಯರೂ ಸೇರ್ಪಡೆಗೊಂಡಿದ್ದಾರೆ.

ಕಥೆ, ಕಾದಂಬರಿ, ಕಾವ್ಯ, ಪ್ರಬಂಧ, ನಾಟಕ, ಅಂಕಣ ಬರಹಗಳು, ವಿಚಾರಸಾಹಿತ್ಯ, ಅನುವಾದ– ಈ ಎಲ್ಲ ಕ್ಷೇತ್ರಗಳಲ್ಲೂ ತೊಡಗಿಸಿಕೊಂಡವರಲ್ಲಿ ಮುಖ್ಯವಾದ ಹೆಸರು ಸಾರಾ ಅಬೂಬಕ್ಕರ್ ಹಾಗೂ ವೈದೇಹಿಯವರದು. ಹಾಗೆಯೇ ಗಂಗಾ ಪಾದೇಕಲ್, ಎ. ಪಿ. ಮಾಲತಿ ಮೊದಲಾದ ಲೇಖಕಿಯರು ಕಥೆ, ಕಾದಂಬರಿಗಳೆರಡರಲ್ಲೂ ಕೃಷಿ ಮಾಡಿದ್ದಾರೆ. ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಟಿ.ಸುನಂದಮ್ಮ ಅವರನ್ನು ಹೊರತುಪಡಿಸಿದರೆ, ಕೇವಲ ಪುರುಷ ಸಮುದಾಯಕ್ಕೆ ಸೀಮಿತವಾಗಿದ್ದ ಹಾಸ್ಯ ಬರವಣಿಗೆಯಲ್ಲಿ ಟಿ. ಎಸ್. ಅಂಬುಜಾ, ಭುವನೇಶ್ವರಿ ಹೆಗಡೆಯವರಂಥ ಲೇಖಕಿಯರು ಈ ಜಿಲ್ಲೆಯಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಜೊತೆಗೆ ಅನುವಾದ ರಂಗದಲ್ಲೂ ತಮ್ಮ ಸಾಮರ್ಥ್ಯವನ್ನು ತೋರಿಸುತ್ತಿರುವ ಪಾರ್ವತಿ ಜಿ. ಐತಾಳ್ ಮುಖ್ಯರಾಗುತ್ತಾರೆ.

ವಿವಾಹ, ಗಂಡ, ಮಕ್ಕಳು, ಗೃಹಕೃತ್ಯ ಮೊದಲಾದ ಕೌಟುಂಬಿಕ ಕಾರಣಗಳಿಗಾಗಿ ಸ್ವಾತಂತ್ರ್ಯ ಪೂರ್ವ ಅವಧಿಯ ಹೆಣ್ಣುಮಕ್ಕಳ ಸಾಹಿತ್ಯಕೃಷಿ ಮೂಲೆಗುಂಪಾದರೆ, ಸ್ವಾತಂತ್ರ್ಯೋತ್ತರ ಅವಧಿಯ ಲೇಖಕಿಯರಲ್ಲಿ ಹೆಚ್ಚಿನವರು ತಮ್ಮ ಬರವಣಿಗೆಯ ಮೊಳಕೆಯನ್ನು ಎಳವೆಯಲ್ಲೇ ಹೊಂದಿದ್ದು, ವಿವಾಹಾನಂತರದ ದಿನಗಳಲ್ಲಿ ಮುಂದುವರಿಸಿದವರು; ಇನ್ನು ಕೆಲವರು ತಮ್ಮ ಮಧ್ಯವಯಸ್ಸಿನಲ್ಲಿ ಬರೆಯಲು ತೊಡಗಿದವರು ಎಂಬುದು ಗಮನಿಸಬಹುದಾದ ಅಂಶವಾಗಿದೆ.

ಸಮಾಜ ವ್ಯವಸ್ಥೆಯ ಲಿಂಗ ರಾಜಕಾರಣದ ಅಂಶಗಳು ಸ್ವಾತಂತ್ರ್ಯ ಪೂರ್ವ ಕಾಲಘಟ್ಟದ ಮಹಿಳೆಯರನ್ನು ಅಂಚಿಗೆ ತಳ್ಳಿದರೆ ಆ ಬಳಿಕ ಬಂದ ಲೇಖಕಿಯರು ಬರವಣಿಗೆಯ ಉತ್ಸಾಹವನ್ನು ಕಳೆದುಕೊಳ್ಳಬಹುದಾದ ವಯಸ್ಸಿನಲ್ಲಿ ಪ್ರಾಯಶಃ ಕೌಟುಂಬಿಕ ಜಂಜಡಗಳಿಂದ ಒಂದು ಬಗೆಯ ತಾತ್ಕಾಲಿಕವಾದ ವಿರಾಮವನ್ನು ಅನುಭವಿಸಬಹುದಾದ ವಯಸ್ಸಿನಲ್ಲಿ ಸಾಮಾಜಿಕ ಕಟ್ಟುಪಾಡುಗಳಿಂದ ಬಿಡಿಸಿಕೊಂಡು ಅಪಾರ ಜೀವನಾನುಭವವನ್ನು ಹೊಂದಿ, ಅದನ್ನು ಸದುಪಯೋಗಪಡಿಸಿಕೊಂಡು ಸಾಹಿತ್ಯ

ರಚನೆಯ ಅಂಚಿನಿಂದ ಕೇಂದ್ರಕ್ಕೆ ಕಾಲಿಟ್ಟರು. ದಕ್ಷಿಣಕನ್ನಡ ಜಿಲ್ಲೆಯ ಹೆಚ್ಚಿನ ಲೇಖಕಿಯರು ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಕನ್ನಡ ಸಾಹಿತ್ಯ ಪರಂಪರೆಯನ್ನು ಗಮನಿಸುವಾಗ ಮಹಿಳೆಯರು ತಮ್ಮ ಅಭಿವ್ಯಕ್ತಿಯನ್ನು ಸಣ್ಣಕತೆ, ಕಾದಂಬರಿ ಹಾಗೂ ಗದ್ಯರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ಅವು ಅವರಿಗೆ ತಮ್ಮ ಮನಸ್ಸಿನ ಭಾವನೆಗಳನ್ನು ಬಿಚ್ಚಿಡಲು ಸೂಕ್ತ ಮಾಧ್ಯಮಗಳು ಅನ್ನಿಸಿರಬೇಕು. ಹೀಗಾಗಿ ಸಂಶೋಧನೆ, ಸಂಪಾದನೆ, ವಿಮರ್ಶೆ ಮತ್ತಿತ್ತರ ಸೃಜನೇತರ ಸಾಹಿತ್ಯ ಪ್ರಕಾರಗಳಲ್ಲಿ ಹೆಚ್ಚಾಗಿ ಕೆಲಸ ಮಾಡಿದ ಬರಹಗಾರ್ತಿಯರಲ್ಲಿ ಹಲವರು ಒಂದಾದರೂ ಕಥಾಸಂಕಲನವನ್ನೋ ಇಲ್ಲವೇ ಒಂದಾದರೂ ಕಾದಂಬರಿಯನ್ನೋ ಬರೆದಿರುವುದು ಕೂಡ ಇದಕ್ಕೆ ನಿದರ್ಶನವಾಗಿದೆ.

ಸಾಮಾಜಿಕವಾಗಿ ಉತ್ತಮ ಜಾತಿ, ಸಮುದಾಯಗಳಿಂದ ಬಂದ ಮಹಿಳೆಯರಲ್ಲಿ ಕೂಡ ಕೌಟುಂಬಿಕ ಶೋಷಣೆಯಿಂದ ನಲುಗಿದವರು ಕೆಲವರಾದರೆ, ಇನ್ನು ಕೆಲವರು ಆರ್ಥಿಕತೆಯ ಕಾರಣಕ್ಕೆ, ಮತ್ತೆ ಕೆಲವರು ಜಾತಿಯ ಕಾರಣಕ್ಕೆ, ಆರಂಭದಲ್ಲಿ ದಮನದ ಪ್ರಯತ್ನಕ್ಕೆ ಒಳಗಾದರೂ ಬಳಿಕ ತಮ್ಮ ಅಂತ:ಶಕ್ತಿಯ ಸಹಾಯದಿಂದ ಇಂತಹ ಸಂದರ್ಭಗಳನ್ನು ಮೀರುವ ಪ್ರಯತ್ನ ಮಾಡಿದರು; ಅದರಲ್ಲಿ ಯಶಸ್ವಿಯಾಗಿ ಶಿಕ್ಷಣ ಹಾಗೂ ಸಾಹಿತ್ಯದಲ್ಲಿ ತೊಡಗಿಸಿಕೊಂಡರು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊದಲ ಲೇಖಕಿಯರು ಕುಟುಂಬ ಜೀವನ ನಡೆಸುವುದರ ಜೊತೆಗೆ ಸಾಹಿತ್ಯ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡವರು. ಕವಯಿತ್ರಿ ಮುಳಿಯ ಮೂಕಾಂಬಿಕಾ ಅಮ್ಮ ೧೯ನೇ ಶತಮಾನದ ಉತ್ತರಾರ್ಧದಲ್ಲಿ (೧೯೭೦-೧೯೪೨) ಅಂದರೆ ೧೮೭೦ರಲ್ಲಿ ಬಂಟ್ವಾಳ ತಾಲೂಕಿನ ಚಕ್ರಕೋಡಿ ಮನೆತನದಲ್ಲಿ ಜನಿಸಿದರು. ಇವರು ರಚಿಸಿದ ಕೃತಿಗಳು, ದ್ರೌಪದೀ ವಸ್ತ್ರಾಪಹರಣ, ಹರಿಲೀಲಾಮೃತ ಸೀತಾಕಲ್ಯಾಣ, ಧ್ರುವ ಚರಿತ್ರೆ, ಪುತ್ರಕಾಮೇಷ್ಟಿ, ಗಜೇಂದ್ರ ಮೋಕ್ಷ, ಬಾಲಲೀಲೆ, ಬಿಲ್ಲಹಬ್ಬ, ಶ್ರೀಮಹಿಷ ಮರ್ದಿನೀ ಸ್ತುತಿ ಇವುಗಳಲ್ಲದೇ ಅಸಂಖ್ಯಾತ ಶೋಭಾನೆ ಹಾಡುಗಳನ್ನು ಈಕೆ ರಚಿಸಿದ್ದಾರೆ.

ಲಲಿತಾ ಆರ್. ರೈ (೧೯೨೮) ಸಾಮಾಜಿಕವಾಗಿ ಆರ್ಥಿಕವಾಗಿ ಸ್ಥಿತಿವಂತ ಬಂಟಜಾತಿಯ ಕುಟುಂಬದಲ್ಲಿ ಹುಟ್ಟಿ ಅವರ ತಂದೆಯವರ ಆಸೆಯಂತೆ ಕಾಲೇಜು ಶಿಕ್ಷಣವನ್ನು ಪೂರೈಸಿದರು. ಸಂಸಾರದಲ್ಲಿ ನೊಂದು ಬೆಂದವರು ತನ್ನ ಗಂಡ ತನ್ನನ್ನು ಭೋಗದ ವಸ್ತುವಿನಂತೆ ಬಳಸಿಕೊಂಡಾಗ ಆತನ ವಿರುದ್ಧ ತಿರುಗಿಬಿದ್ದು ಮಕ್ಕಳ ಭವಿಷ್ಯಕ್ಕಾಗಿ ಶಿಕ್ಷಕ ತರಬೇತಿ ಪಡೆದು ಉದ್ಯೋಗ ಮಾಡಿ ಬದುಕುವ

ಛಲ ತೊಟ್ಟರು. ಗಂಡನ ದೌರ್ಜನ್ಯವನ್ನು ಪ್ರತಿಭಟಿಸಿದವರು ಶೋಷಣೆಯ ವಿರುದ್ಧ ತಿರುಗಿ ಬಿದ್ದಿದ್ದಾರೆ. ಲಲಿತಾ ರೈಯವರು ಅನುವಾದ ಮಾಡುವುದರ ಮೂಲಕ ಮತ್ತು ಲೇಖನಗಳನ್ನು ಬರೆಯುವುದರ ಮುಖೇನ ಬರವಣಿಗೆಯನ್ನು ಪ್ರಾರಂಭಿಸಿದರು.

"ರಾಷ್ಟ್ರಬಂಧು" ಪತ್ರಿಕೆಯಲ್ಲಿ ಲಲಿತಾರೈಯವರ ಲೇಖನಗಳನ್ನು ಪ್ರಕಟಿಸುವುದರ ಮುಖಾಂತರ ಕಡೆಂಗೋಡ್ಲು ಶಂಕರಭಟ್ಟರು ಸಾಹಿತ್ಯಕೃಷಿಗೆ ನೀರೆರೆದರು. ಅಲ್ಲದೆ ಸಹೋದ್ಯೋಗಿಯಾಗಿದ್ದ ಕುಳಕುಂದ ಶಿವರಾಯರು (ನಿರಂಜನ) ಕತೆಗಳನ್ನು ಬರೆಯುವಂತೆ ಪ್ರೇರೇಪಿಸಿದರು. "ಕಲ್ಪನಾದತ್ತ"ರ "ಚಿತ್ತಗಾಂಗಿನ ಕ್ರಾಂತಿವೀರರು" ಎಂದು ೧೯೪೯ರಲ್ಲಿ ಅನುವಾದ ಮಾಡಿ ಪ್ರಕಟಿಸಿದರು.

ನಂತರ ಕಥಾಪ್ರಕಾರವನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿಕೊಂಡು ಬರೆಯಲು ಪ್ರಾರಂಭಿಸಿ "ಮತ್ತೆ ಬೆಳಗಿತು ಸೊಡರು" "ಇಂಟರ್ನೆಟ್ಟಿನ ಒಳಗೆ ಮತ್ತು ಇತರ ಕಥೆಗಳು" ಎಂಬ ಎರಡು ಕನ್ನಡ ಕಥಾ ಸಂಕಲನ ಹಾಗೂ "ಕುಲೆಪತ್ತುನಾ" "ಉಡಲುರ್ಕರುನಾ" ಎಂಬ ಎರಡು ತುಳು ಕಥಾ ಸಂಕಲನಗಳನ್ನು ಪ್ರಕಟಿಸಿದರು. "ಮತ್ತೆ ಬೆಳಗಿತು ಸೊಡರು" ಮತ್ತು "ಇಂಟರ್ನೆಟ್ಟಿನ ಒಳಗೆ ಮತ್ತು ಇತರ ಕಥೆಗಳು" ಕಥೆಗಳಲ್ಲಿ ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಘಟನೆಗಳನ್ನು ಆಧರಿಸಿದ ಕತೆಗಳಿಂದ ತೊಡಗಿ ಆಧುನಿಕ ಸಮಾಜದ ಸ್ಥಿತ್ಯಂತರಗಳು ಅವುಗಳಿಂದಾಗುವ ಸಮಸ್ಯೆಗಳು ತಲ್ಲಣಗಳು ಚಿತ್ರಿತಗೊಂಡಿವೆ.

"ಕುಲೆಪತ್ತುನಾ" "ಉಡಲುರ್ಕರುನಾ" ಕಥಾ ಸಂಕಲನದ ಕಥೆಗಳಲ್ಲಿ ತುಳುನಾಡಿನ ಪ್ರಕೃತಿ, ಸಂಸ್ಕೃತಿ, ಸಂಪ್ರದಾಯ, ಆಚಾರ–ವಿಚಾರ, ಪ್ರಾಮಾಣಿಕತೆ, ಶ್ರಮದ ಬದುಕು ಮುಂತಾದ ವಿಷಯಗಳು ಚಿತ್ರಿತಗೊಂಡಿವೆ.

ಆನಂದಿ ಸದಾಶಿವ ರಾವ್‌ರವರು (೧೯೨೯) ೧೯೪೭ರಲ್ಲಿ ನ್ಯಾಯವಾದಿ ಸದಾಶಿವರಾವ್ ಅವರನ್ನು ವಿವಾಹವಾದರು. ಪತಿ ಪತ್ರಿಕೆಯ ಬರವಣಿಗೆಗೆ ಉತ್ತೇಜನ ನೀಡುತ್ತಿದ್ದರು. ಆನಂದಿ ಸದಾಶಿವರಾವ್‌ರವರ ಕಥೆಗಳಿಗೆ ವಸ್ತುಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಅಂದಿನ ಜನರ ಬದುಕನ್ನೇ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಆ ಸಂದರ್ಭದ ಪ್ರಮುಖ ಲೇಖಕಿಯರಾದ ತ್ರಿವೇಣಿ, ಸರಸ್ವತಿಬಾಯಿ ರಾಜವಾಡೆ, ಅನುಪಮಾ ನಿರಂಜನರವರು ಅವರ ಬರಹಗಳನ್ನು ಗಮನಿಸಿ ಪ್ರೋತ್ಸಾಹ ತುಂಬಿದರು.

"ಗೆದ್ದವರು ಯಾರು" ಕಥೆ "ಉಷಾ" ಪತ್ರಿಕೆಯಲ್ಲಿ ಪ್ರಕಟವಾಗುವ ಮೂಲಕ ಅವರ ಸಾಹಿತ್ಯದ ಕೃಷಿ ಶುರುವಾಯಿತು. ನಂತರ ನೂರಾರು ಕಥೆಗಳು ಜನಪ್ರಗತಿ, ಕಥಾವಳಿ, ಪ್ರಜಾಮತ, ಕರ್ಮವೀರ, ರಾಷ್ಟ್ರಬಂಧು, ಚಿತ್ರಗುಪ್ತ, ಸಚೇತನ, ನವಯುಗ, ರಾಯಭಾರಿ ಮುಂತಾದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಅವರ ಸ್ನೇಹಸುಧೆ ಕಾದಂಬರಿ, ಅಪರ್ಣ, ಕಲಾವಿದೆ, ಸ್ವಾಭಿಮಾನ, ಉಡುಗೊರೆ ಮತ್ತು ಇತರ ಕಥೆಗಳು (ಕಥಾ ಸಂಕಲನಗಳು) ಎಂಬ ಒಟ್ಟು ಐದು ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರು ಇಂಗ್ಲೀಷ್‌ನಲ್ಲಿ ಮೂರು ಕವನ ಸಂಕಲನಗಳನ್ನು ಬರೆದಿದ್ದಾರೆ.

ಆನಂದಿಯವರ ಕಥೆಗಳ ವಸ್ತು ಮಹಿಳೆಯರು. ಅವರ ಕಥೆಗಳಲ್ಲಿ ಬರುವ ಹೆಣ್ಣು ಪಾತ್ರಗಳು ಭಾವನಾ ಜೀವಿಗಳಾದರೂ ಎಲ್ಲ ನೋವನ್ನು ನುಂಗಿಕೊಳ್ಳುವವರಲ್ಲಿ ಅತ್ಯಂತ ಹಟದಿಂದ ಬದುಕುವ ಮತ್ತು ತಮ್ಮ ಬದುಕಿನಲ್ಲಿ ಅನೇಕ ಆದರ್ಶಗಳನ್ನು ಪಾಲಿಸುವವರು ಆಗಿರುತ್ತಾರೆ. ಇವರ ಕತೆಗಳಲ್ಲಿ ಬರುವ ಮಹಿಳೆಯರು ಸುಸಂಸ್ಕೃತರು, ವೈಚಾರಿಕ ವ್ಯಕ್ತಿತ್ವದವರು ಆಗಿದ್ದಾರೆ. ತಮ್ಮ ಸುತ್ತಮುತ್ತಲ ಜನರ ಜಾತೀಯತೆ, ಸ್ವಾರ್ಥಮಯ ವರ್ತನೆ ದೇಶದ ಪ್ರಗತಿಗೆ ಮಾರಕ ಎಂದು ಚಿಂತಿಸುತ್ತಾರೆ. ಇವರ ಕತೆಗಳು ಆಗಿನ ಕಾಲಕ್ಕೆ ಕ್ರಾಂತಿಕಾರಿ ಅಂತರ್ಜಾತೀಯ ವಿವಾಹದಂತಹ ಸಂಗತಿಗಳು, ತ್ಯಾಗ, ಬಲಿದಾನ ಕರ್ತವ್ಯನಿಷ್ಠೆಯಂತಹ ಮೌಲ್ಯಗಳನ್ನು ಎತ್ತಿ ಹಿಡಿಯುತ್ತವೆ ಹಾಗೂ ಮಹಿಳೆಯರಿಗೆ ಸ್ವಾವಲಂಬನೆಯ ಮೌಲ್ಯವನ್ನು ಬೋಧಿಸುತ್ತವೆ.

ಮಹಿಳೆಯರೇ ಆನಂದಿಯವರ ಕಥೆಗಳ ಕೇಂದ್ರಬಿಂದುವಾಗಿದ್ದಾರೆ. ಸಮಕಾಲೀನ ವಿದ್ಯಾರ್ಥಿನಿಯರ ಮನೋಭಾವ, ದೃಷ್ಟಿಕೋನಗಳನ್ನು ಚಿತ್ರಿಸುವ ಆನಂದಿಯವರ ಏಕೈಕ ಕಾದಂಬರಿಯಾಗಿರುವ ಸ್ನೇಹ ಸುಧೆ ೧೯೫೯ರಲ್ಲಿ ಪ್ರಕಟವಾಯಿತು. ಸಾಂಪ್ರದಾಯಿಕ ಹಾಗೂ ಆಧುನಿಕ ಮನೋಭಾವದ ಎರಡೂ ಮಾದರಿಯ ಪಾತ್ರಗಳು ಇದರಲ್ಲಿವೆ.

ಪದ್ಮಾಶೆಣೈಯವರು (೧೯೩೩) ಬ್ಯಾಂಕ್ ಉದ್ಯೋಗಿಯಾಗಿದ್ದು ದಕ್ಷಿಣ ಕನ್ನಡದಲ್ಲಿ ರಾಷ್ಟ್ರಸೇವಿಕಾ ಸಮಿತಿಯನ್ನು ಸ್ಥಾಪಿಸಲು ಪ್ರಯತ್ನಪಟ್ಟರು. ಶಿಬಿರಗಳನ್ನು ಏರ್ಪಡಿಸುವುದು ಮಹಿಳೆಯರನ್ನು ಸಂಘಟಿಸುವುದು, ಧರ್ಮ ಸಂಸ್ಕೃತಿಯ ಪ್ರಚಾರ ಇತ್ಯಾದಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಲ್ಲಿ ಎತ್ತಿದ ಕೈ ಎನಿಸಿದ್ದಾರೆ.

ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಪದ್ಮಾ ಶೆಣೈಯವರು ಸಾಹಿತ್ಯ ಕೃಷಿಯನ್ನು ಆರಂಭಿಸಿದರು. "ಪ್ರಕಾಶ", "ರಾಯಭಾರಿ", ನವಯುಗ ಮುಂತಾದ ಸ್ಥಳೀಯ ಪತ್ರಿಕೆಗಳಲ್ಲಿ ಅವರ ಮಹಿಳಾ ಪಾತ್ರ ಚಿತ್ರಣ, ನೀಳ್ಗತೆಗಳು ಬೆಳಕಿಗೆ ಬಂದವು ಅರವತ್ತರ ದಶಕದಲ್ಲಿ 'ರಸವಿರಸ', 'ಕೊನೆಯ ನಿರ್ಧಾರ', 'ನಾನಿನ್ನ ಧ್ಯಾನದೊಳಿರಲು', 'ಅನುಗ್ರಹ', 'ಅನುಬಂಧ' ಮೊದಲಾದ ಕಾದಂಬರಿಗಳು ಪ್ರಕಟವಾದವು. ಕಥಾ ಸಂಕಲನಗಳು 'ದೂರದ ಆಸೆ', 'ಹರಿದ ಗಾಳಿಪಟ', 'ನೂಲಿನಂತೆ ಸೀರೆ', 'ತಾತ್ವಿಕ ಕಥೆಗಳು' ಮುಂತಾದವು. ಮಕ್ಕಳ ಬೆಳವಣಿಗೆಯಲ್ಲಿ ಕುಟುಂಬದ ಜವಾಬ್ದಾರಿ, ಕುಡಿತದಂತಹ ಸಾಮಾಜಿಕ ಪಿಡುಗುಗಳು, ವಿಘಟನೆ ಹೊಂದುತ್ತಿರುವ ಕೌಟುಂಬಿಕ ಸಂಬಂಧಗಳು, ಆಧುನಿಕ ಸಮಾಜದಲ್ಲಿ ಜೀವನ ಮೌಲ್ಯ ಹಾಗೂ ಮಾನವೀಯ ಸಂಬಂಧಗಳಿಗೆ ಇರಬೇಕಾದ ಮಹತ್ವ ಹಾಗೂ ಸ್ತ್ರೀ ಸ್ವಾತಂತ್ರ್ಯದ ವಿವಿಧ ಮಗ್ಗುಲುಗಳು ಮುಂತಾದ ವಿಚಾರಗಳು ಅವರ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿವೆ.

ಯಶವಂತಿ ಎಸ್. ಸುವರ್ಣ (೧೯೪೧) ಬಾಲ್ಯದಿಂದಲೇ ಸಂಪ್ರದಾಯಗಳನ್ನು ಮೀರಿ ಬೆಳೆಯುವ ಉತ್ಸಾಹ ಅವರಲ್ಲಿತ್ತು. ಪ್ರಶ್ನಿಸುವ, ಕೆದಕಿ ನೋಡುವ ಮೂಢನಂಬಿಕೆಗಳನ್ನು ಧಿಕ್ಕರಿಸುವ ಗುಣವನ್ನು ಅವರಲ್ಲಿ ಕಾಣಬಹುದು. ಆ ಹೆಣ್ಣು ನಾಯಿಯ ಆತ್ಮಕಥೆ, 'ದಾರಿ' ಕಥಾ ಸಂಕಲನಗಳನ್ನು, "ಪಶ್ಚಿಮಕ್ಕೆ ವಾಲಿದ ಸೂರ್ಯ" ಎಂಬ ಆತ್ಮಕಥೆಯನ್ನು 'ಮಾಯಂದಾಲ್ ದೇಯಿ ಬೈದೆತಿ' ಎಂಬ ತುಳು ಜಾನಪದ ಕೃತಿಗಳನ್ನು, ಎಳೆಯರಿಗಾಗಿ ಭಾರತರತ್ನ ಡಾ. ಅಬ್ದುಲ್ ಕಲಾಂ ವ್ಯಕ್ತಿಚಿತ್ರವನ್ನು 'ಅಂಕಣದೊಳಗೆ ಮಹಿಳೆ' ಎಂಬ ಕೃತಿಗಳನ್ನು ಪ್ರಕಟಿಸಿದ್ದಾರೆ. ಸ್ತ್ರೀ ಶೋಷಣೆ, ಮೇಲ್ಜಾತಿ-ಕೀಳುಜಾತಿ ಎಂಬ ಭಾವನೆ ಬಗ್ಗೆ ಕತೆಗಳಲ್ಲಿ ಚರ್ಚಿಸಿದ್ದಾರೆ. ಹೆಣ್ಣು ಗಂಡಿನ ಆಂತರಿಕ ಸಂಬಂಧಗಳ ತಾಕಲಾಟಗಳನ್ನು ಕೃತಿಗಳಲ್ಲಿ ಅನಾವರಣಗೊಳಿಸಿದ್ದಾರೆ.

ಎ. ಪಿ. ಮಾಲತಿ (೧೯೪೪) ಉತ್ತರ ಕನ್ನಡ ಜಿಲ್ಲೆಯ ಭಟ್ಕಳದವರು. ಅರವತ್ತು-ಎಪ್ಪತ್ತರ ದಶಕದಲ್ಲಿ ಬರವಣಿಗೆಯನ್ನು ಆರಂಭಿಸಿದ ಮಾಲತಿಯವರು ಇಪ್ಪತ್ತು ಕಾದಂಬರಿಗಳನ್ನು ಬರೆದಿದ್ದಾರೆ ಹಾಗೂ ಎರಡು ಕಥಾಸಂಕಲನಗಳು ಮತ್ತು ಏಳು ಸಂಕೀರ್ಣ ಕೃತಿಗಳನ್ನು ಪ್ರಕಟಿಸಿದ್ದಾರೆ. ಸಂಪ್ರದಾಯವಾಗಿ ಆಗಿದ್ದುಕೊಂಡೇ ಜೀವನಪರವಾದ ಆಶಾವಾದಿ ನಿಲುವುಗಳನ್ನು ತಮ್ಮ ಬರಹಗಳಲ್ಲಿ ಮಾಲತಿಯವರು ಚಿತ್ರಿಸಿದ್ದಾರೆ. (ಅರ್ಧಾಂಗಿ, ಅಘಾತ, ಅತೃಪ್ತೆ) ಮನಃ ಶಾಸ್ತ್ರೀಯ ನೆಲೆಯ ಕಾದಂಬರಿ, 'ದೇವ ಕಾದಂಬರಿ' 'ವಸಂತದ ಹೂವುಗಳು' ಕಥಾ ಸಂಕಲನ, ಸಂಜೆ ಬಿಸಿಲು.

ಲೇಖಕಿ ಕಥೆ ಕಾದಂಬರಿಗಳಲ್ಲಿ ಸಂಪ್ರದಾಯಬದ್ಧ ಸಮಾಜ ಹೆಣ್ಣಿನ ಕುರಿತಾಗಿ ಹೊಂದಿರುವ ರೂಢಿಗತ ನಿಲುವುಗಳನ್ನು ಮನೋವಿಶ್ಲೇಷಣಾತ್ಮಕ ನೆಲೆಯಲ್ಲಿ ಚರ್ಚಿಸಿದ್ದಾರೆ.

ವಿಷಮದಾಂಪತ್ಯ, ಕೌಟುಂಬಿಕ ಬಿಕ್ಕಟ್ಟುಗಳು, ಅನೈತಿಕ ಸಂಬಂಧ, ಹದಿಹರೆಯದ ಮನಸ್ಸುಗಳು, ದಾರಿ ತಪ್ಪುವ ಹಂತಗಳು ಅದರಿಂದಾಗುವ ಸಮಸ್ಯೆಗಳು, ಹೆತ್ತವರ ಪ್ರೀತಿಯಿಂದ ವಂಚಿತರಾಗುವ ಮಕ್ಕಳ ಜೀವನ ಸಮಾಜಕ್ಕೆ ಕಂಟಕವಾಗಿರುವ ಅಸ್ಪೃಶ್ಯತೆ, ಮೂಢನಂಬಿಕೆಗಳು ಮುಂತಾದವುಗಳು ಕಾದಂಬರಿಯ ವಸ್ತುಗಳಾಗಿವೆ.

ಮುಮ್ತಾಜ್ ಬೇಗಂ (೧೯೪೮) ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಥಾರಚನೆಯ ಮೂಲಕ ಸೃಜನಶೀಲ ಬರವಣಿಗೆಯನ್ನು ಆರಂಭಿಸಿದ ಮೊದಲ ಮುಸ್ಲಿಂ ಮಹಿಳೆ ಎಂಬ ಹೆಗ್ಗಳಿಕೆ ಮುಮ್ತಾಜ್ ಬೇಗಂ ಅವರಿಗೆ ಸಲ್ಲುತ್ತದೆ. ಉರ್ದು ತಾಯಿನುಡಿಯ ಕನ್ನಡದಲ್ಲಿ ಸಶಕ್ತವಾಗಿ ಬರೆಯುತ್ತಿರುವ ಮುಮ್ತಾಜ್ ಕಾನೂನು ಪದವೀಧರೆ. ತನ್ನ ಶಾಲಾದಿನಗಳಲ್ಲೇ ಬರವಣಿಗೆಯನ್ನು ಹವ್ಯಾಸದ ನೆಲೆಯಲ್ಲಿ ರೂಢಿಸಿಕೊಂಡವರು.

೧೯೬೫ರಲ್ಲಿ ಅವರ ಮೊದಲ ಸಣ್ಣಕಥೆ ನವಭಾರತ ಪತ್ರಿಕೆಯಲ್ಲಿ ಪ್ರಕಟವಾಯಿತು. ಮುನ್ನೂರಕ್ಕೂ ಹೆಚ್ಚು ಸಣ್ಣಕತೆಗಳನ್ನು ಬರೆದಿರುವ ಮುಮ್ತಾಜ್ ಅವರ ಪ್ರಥಮ ಕಥಾಸಂಕಲನ "ಅಧ್ಯಕ್ಷ" ಇಪ್ಪತ್ತು ವರ್ಷಗಳ ಬಳಿಕ ಅಂದರೆ ೧೯೮೫ರಲ್ಲಿ ಪ್ರಕಟಗೊಂಡಿತು.

ಅವರ ಮೊದಲ ಕಾದಂಬರಿ 'ತಪಸ್ವಿ" ಹಾಗೂ "ತರಂಗ" ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಪರದೇಶಿ, ಅನಂತರ ಬಂದ 'ವರ್ತುಲ', 'ಬಂದಳಿಕೆ' ಹಾಗೂ 'ಜಂಪಿ-ಕೆಂಪಿ' (ವೈಜ್ಞಾನಿಕ ಕಾದಂಬರಿ) ೧೯೮೯ ರಿಂದ ೨೦೦೨ರ ಅವಧಿಯಲ್ಲಿ ಬರೆದವುಗಳು. ೧೯೮೯ರಲ್ಲಿ ಅವರ ಕಾದಂಬರಿಗಳು ಪ್ರಕಟಗೊಂಡವು. ೨೦೧೧ರಲ್ಲಿ 'ಅಂಕುರ' ಎಂಬ ಅವರ ಕಥಾಸಂಕಲನ ಪ್ರಕಟಗೊಂಡಿದೆ. ಎಪ್ಪತ್ತರ ದಶಕದ ನಿಯತಕಾಲಿಕಗಳ ಮೂಲಕ ಕನ್ನಡದ ಓದುಗರಿಗೆ ಪರಿಚಿತರಾದ ಮುಮ್ತಾಜ್ ಮುಸ್ಲಿಂ ಹೆಣ್ಣುಮಕ್ಕಳು ಶಿಕ್ಷಣ ಪಡೆದು ಉದ್ಯೋಗಸ್ಥರಾಗಿ ಆರ್ಥಿಕ ಸ್ವಾವಲಂಬನೆಯನ್ನು ಬೆಳೆಸಿಕೊಳ್ಳಬೇಕು; ಹೆಣ್ಣು ಪುರುಷನ ಸಹಾಯವಿಲ್ಲದೆಯೂ ಕುಟುಂಬವನ್ನು ಜವಾಬ್ದಾರಿಯಿಂದ ನಿರ್ವಹಿಸಬಲ್ಲಳು; ಆದರೂ ಅವರಿಬ್ಬರೂ ಪರಸ್ಪರ ಅರ್ಥೈಸಿಕೊಂಡು ಬಾಳುವೆ ನಡೆಸಬೇಕು ಎಂಬ ಆಶಯವನ್ನು ತಮ್ಮ ಕಥೆ, ಕಾದಂಬರಿಗಳ ಮೂಲಕ ಪ್ರತಿಪಾದಿಸಿದವರು. ನವೋದಯ ಹಾಗೂ

ಬಂಡಾಯದ ಸಂವೇದನೆಗಳನ್ನು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿರುವ ಮುಮ್ತಾಜ್ ಸಾಹಿತ್ಯ, ಕಾನೂನು, ಸಮಾಜಸೇವೆ, ಸಂಘಟನೆ, ಕೃಷಿ–ಹೀಗೆ ಬಹುಮುಖೀ ಆಸಕ್ತಿಗಳಲ್ಲಿ ತಮ್ಮನ್ನು ತೊಡಗಿಸಿ ಕೊಂಡವರಾಗಿದ್ದಾರೆ.

ಜಾನಕಿ ಎಂ. ಬ್ರಹ್ಮಾವರರವರು (೧೯೫೦) ಪ್ರಾದೇಶಿಕ ಸಾಹಿತ್ಯದ ನೆಲೆಯಲ್ಲಿ ಬಹಳ ಮುಖ್ಯವಾದ ಹೆಸರು ಜಾನಕಿ ಬ್ರಹ್ಮಾವರ ಅವರದು. ಅವರ ಆರಂಭಿಕ ಬರಹಗಳು ಕನ್ನಡದಲ್ಲೇ ಇವೆ. ಆದರೆ ತುಳುವರ ಸಾಮಾಜಿಕ ಸಾಂಸ್ಕೃತಿಕ ಬದುಕಿನ ಏಳುಬೀಳುಗಳನ್ನು ಅವುಗಳ ಪ್ರಭಾವ, ಪರಿಣಾಮಗಳನ್ನು ಇಲ್ಲಿನ ಮಾತೃಪ್ರಧಾನ ಸಂಸ್ಕೃತಿಯ ಮೂಲದ ಹುಡುಕಾಟದ ಮೂಲಕ ಕಂಡುಕೊಳ್ಳುವ ಸ್ತ್ರೀಬದುಕುಗಳ ಅನಾವರಣ ಅವರ ಬರಹಗಳಲ್ಲಿ ಇದೆ.

ತುಳು ಚಿಂತನೆಯ ನೆಲೆಯಲ್ಲಿ, ಇಲ್ಲಿನ ಸಂಸ್ಕೃತಿಯ ಬೆಳಕಿನಲ್ಲಿ ಇಡಿ ಜಗತ್ತನ್ನು ನೋಡುವ ಹೊಸದೃಷ್ಟಿಯನ್ನು ತೋರಿಸಿಕೊಟ್ಟರು. ಇದು ಅವರ ಬರವಣಿಗೆಗೆ ಸಾರ್ವತ್ರಿಕತೆಯನ್ನೂ ಸಾರ್ವಕಾಲಿಕ ಗುಣವನ್ನೂ ನೀಡಿದೆ. ಅವರ ಕುದುರೆದ ಕೇದಗೆ ಕಾದಂಬರಿ ಆಧುನಿಕತೆಯ ಪ್ರವೇಶವಿಲ್ಲದ, ಬಡತನದ ಅಸಹಾಯಕ ಜನರ ಕುದುರಿನಲ್ಲಿ (ನಡುಗಡ್ಡೆ) ನಗರದ ಜೊತೆಗೆ ಏರ್ಪಡುವ ವ್ಯವಹಾರ ಹುಟ್ಟುಹಾಕುವ ಮಾನವ ಸ್ವಭಾವದ ವೈಷಮ್ಯಗಳನ್ನು ಚಿತ್ರಿಸುತ್ತದೆ.

ಕರಾವಳಿಗೇ ವಿಶಿಷ್ಟವಾದ ಗಾದೆಗಳು, ನುಡಿಗಟ್ಟುಗಳ ಬಳಕೆ, ಸಾಂಪ್ರದಾಯಿಕ ತುಳುನಾಡಿನ ಸಂಸ್ಕೃತಿಯನ್ನು ಎದುರು ಕಾಣಿಸುವ ಆಚರಣೆ, ನಂಬಿಕೆ, ಆರಾಧನೆಗಳು ಕಾದಂಬರಿಯಲ್ಲಿ ಬಳಕೆಯಾಗಿವೆ. 'ಕಪ್ಪುಗಿಡ' ಅವರ ಇನ್ನೊಂದು ಉಲ್ಲೇಖನೀಯ ತುಳು ಕಾದಂಬರಿ. ಎರಡು ತಲೆಮಾರಿನ ಮನುಷ್ಯ ಸಂಬಂಧಗಳ ಸೂಕ್ಷ್ಮದ ಜೊತೆಗೆ ಭೂಮಸೂದೆಯ ಕಾನೂನು ತುಳುನಾಡಿನ ಇತಿಹಾಸದಲ್ಲಿ ಉಂಟುಮಾಡಿದ ತಲ್ಲಣ, ಏರ್ಪಟ್ಟ ಸಂಘರ್ಷ, ಬದಲಾದ ಸಾಮಾಜಿಕ, ಕೌಟುಂಬಿಕ ಬದುಕಿನ ವಿನ್ಯಾಸಗಳು ಇಲ್ಲಿನ ಮುಖ್ಯ ಸಂಗತಿಗಳು. ಆಧುನಿಕ ಜಗತ್ತಿನಲ್ಲಿ ಗಂಡು ಮತ್ತು ಹೆಣ್ಣಿನ ಸಂಬಂಧಗಳು ತೀರ ಸಂಕೀರ್ಣಗೊಳ್ಳುತ್ತ ಹೋಗುವುದನ್ನು ಮೂರು ಜೋಡಿಗಳ ನೆಲೆಯಲ್ಲಿ ವಿಶ್ಲೇಷಣೆಗೆ ಒಳಪಡಿಸುವ 'ಯುಗ ಮಗ್'ರ್ನಗ' ಕಾದಂಬರಿ ಜಾನಕಿಯವರ ಸ್ತ್ರೀವಾದಿ ಚಿಂತನೆಗೆ ಮಾದರಿಯಾಗಿದೆ.

ಶಶಿಲೇಖಾ ಬಿ. (೧೯೫೮) ಓರ್ವ ಉತ್ತಮ ಕವಯಿತ್ರಿಯಾಗಿದ್ದಾರೆ. ಆದರೆ ಅವರು ಕಥೆಗಳ ಮೂಲಕ ತಮ್ಮ ಬರವಣಿಗೆಯನ್ನು ಆರಂಭಿಸಿದರು. ೭೦ರ ದಶಕದ ನವ್ಯಸಾಹಿತ್ಯದ ಪ್ರೇರಣೆಗೊಳಗಾದ

ಶಶಿಲೇಖಾ ಅವರು ತಮ್ಮ ಅಂತರಂಗದ ಭಾವನೆಗಳನ್ನು ಅಭಿವ್ಯಕ್ತಿಸಲು ಕಾವ್ಯವೇ ಉತ್ತಮ ಮಾರ್ಗ ಎಂಬುದಾಗಿ ಭಾವಿಸಿದರು. ಅವರ "ಗಂಧದ ಕಡ್ಡಿ", "ಒಂದು ಹಿಡಿ ಬೆಳಕು" ಕವನಸಂಕಲನಗಳಲ್ಲಿ ಪ್ರಕೃತಿ, ತಾಯಿಯ ವಾತ್ಸಲ್ಯ, ಮಾನವನ ಅಸಹಾಯಕತೆ, ದೀನದುರ್ಬಲರ ಮೇಲಿನ ನಿರಂತರ ಶೋಷಣೆ, ಭ್ರಷ್ಟಾಚಾರ, ಅಪರಾಧಗಳ ಪರಾಮರ್ಶೆ, ಸಾಮಾಜಿಕ ಮೌಲ್ಯಗಳ ನಾಶದ ಕುರಿತು ಆತಂಕ, ಹೊಯ್ದಾಟ, ಹತಾಶೆ, ಸಂಘರ್ಷ, ಹೆಣ್ಣಿಗೆ ಮಾತ್ರವೇ ಅನ್ವಯವಾಗುವ ಕಟ್ಟುಪಾಡುಗಳು ಚಿತ್ರಣಗೊಂಡಿವೆ. ಅವರ "ನೆಲದಿಂದ ಒಂದಿಷ್ಟು" ಕಥಾಸಂಕಲನ ಕೂಡುಕುಟುಂಬದ ಒಳಗಿನ ಸಂಕೀರ್ಣ ಸ್ಥಿತಿಯ ಪ್ರತಿಬಿಂಬವಾಗಿದೆ. ಅವರ ಬರವಣಿಗೆಯಲ್ಲಿ ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನಗಳ ಜೊತೆಗೆ ಸ್ತ್ರೀಪರ ಕಾಳಜಿ ವ್ಯಕ್ತವಾಗಿದೆ.

ಚಂದ್ರಕಲಾ ನಂದಾವರ (೧೯೫೦) ತನ್ನ ಕವನಗಳ ಅಂತಃಶಕ್ತಿಯಿಂದ ಕನ್ನಡ ಕಾವ್ಯಲೋಕದಲ್ಲಿ ಗುರುತಿಸಲ್ಪಡುತ್ತಿರುವ ದಕ್ಷಿಣ ಕನ್ನಡ ಜಿಲ್ಲೆಯ ಕೆಲವೇ ಮಂದಿ ಕವಯಿತ್ರಿಯರಲ್ಲಿ ಚಂದ್ರಕಲಾ ನಂದಾವರ ಒಬ್ಬರು. ಸ್ತ್ರೀವಾದಿ ಚಿಂತನೆಗಳಿಂದ ಕೂಡಿದ ಅವರ ಬರಹಗಳು, ವ್ಯಕ್ತಿಚಿತ್ರ, ಪ್ರಬಂಧ, ಸಣ್ಣಕತೆ ವಿಮರ್ಶೆ, ಅನುವಾದ – ಇವೆಲ್ಲವುಗಳಲ್ಲೂ ಅವರ ಆಲೋಚನೆಗಳ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ. ವೃತ್ತಿಯಲ್ಲಿ ಉಪನ್ಯಾಸಕಿಯಾಗಿರುವ ಅವರು ಸುಶಿಕ್ಷಿತ ಮನೆತನದಿಂದ ಬಂದವರು.

ಎಂಬತ್ತರ ದಶಕದಲ್ಲಿ ತಮ್ಮ "ನಾವು ಪ್ರಾಮಾಣಿಕರೇ" ಕವನಸಂಕಲನದ ಮೂಲಕ ಕವಯಿತ್ರಿಯಾಗಿ ಕಾಣಿಸಿಕೊಂಡ ಚಂದ್ರಕಲಾ ಅವರ ಕವನಗಳು ಸಮಾಜದ ವಿವಿಧ ಮುಖಗಳ ವೈರುಧ್ಯವನ್ನು ತೆರೆದಿಡುತ್ತವೆ. ಬಂಡಾಯದ ಸಂವೇದನೆಗಳನ್ನು ಒಳಗೊಂಡ ಇಲ್ಲಿನ ಕೆಲವು ಕವಿತೆಗಳು ಮನುಷ್ಯ ಸಮಾಜವನ್ನು ತೀಕ್ಷ್ಣವಾಗಿ ಪ್ರಶ್ನಿಸುವ ಛಾತಿಯಿಂದ ಕೂಡಿವೆ. ಆತ್ಮಾವಲೋಕನದ ಹಿನ್ನಲೆಯಲ್ಲಿ ಅವರ "ಮತ್ತೆ ಚಿತ್ತಾರ ಬರೆ ಗೆಳತಿ" ಕವನಸಂಕಲನ ಮಹತ್ವದ್ದೆನಿಸುತ್ತದೆ. ಇಲ್ಲಿನ ಕವನಗಳು ವೈಯಕ್ತಿಕ ನೆಲೆಯಲ್ಲಿ ನಿಂತುಕೊಳ್ಳದೆ ಇಡೀ ಮಾನವ ಸಮಾಜದ ಒಳಲೋಕದ ಭ್ರಮೆಗಳು, ಪೊಳ್ಳು ಮೌಲ್ಯಗಳನ್ನು ವಾಸ್ತವದ ಬೆಳಕಿನಲ್ಲಿ ಪ್ರಾಮಾಣಿಕವಾಗಿ ನಿರೂಪಿಸಿವೆ.

ಅವರ 'ಮುಖಾಮುಖಿ' ಕಥಾಸಂಕಲನದ ಕತೆಗಳು ಮನುಷ್ಯ ಸಂಬಂಧದ ಬೇರೆ ಬೇರೆ ಮುಖಗಳನ್ನು ಅತ್ಯಂತ ವಾಸ್ತವದ ನೆಲೆಯಲ್ಲಿ ಚರ್ಚಿಸುತ್ತವೆ. ಹಾಗೂ ಸಾಂಸ್ಕೃತಿಕ ಸಂಬಂಧಗಳನ್ನು

ಮೆಲುದನಿಯಲ್ಲಿ ಪ್ರಶ್ನಿಸುವ ಜೊತೆಗೆ ಸ್ತ್ರೀಪರ ಚಿಂತನೆಗಳನ್ನು ಒಳಗೊಂಡಿವೆ. ಅವರ ಹೊಸ್ತಿಲಿಂದೀಚೆಗೆ ಕೃತಿಯು ಹೆಣ್ಣಿನ ಬದುಕು ಹಾಗೂ ಸಾಹಿತ್ಯದ ಕುರಿತು ಆಪ್ತ ಆಲೋಚನೆಗಳ ಗುಚ್ಛವಾಗಿದೆ.

ಡಿ. ಬಿ. ರಜಿಯಾ (೧೯೫೪) ಜಿಲ್ಲೆಯ ಹೊರಗಿನವರಾಗಿದ್ದು, ಸುರತ್ಕಲ್‌ನ ಶೈಕ್ಷಣಿಕ ಆವರಣದ ಒಳಗೆ ಸಾಹಿತ್ಯಕ್ಕೆ ತೆರೆದುಕೊಂಡವರು ರಜಿಯಾ ಅವರು. ಮುಸ್ಲಿಂ ಸಮುದಾಯಕ್ಕೆ ಸೇರಿದ ಕೆಲವೇ ಮಂದಿ ಲೇಖಕಿಯರಲ್ಲಿ ಬಹಳ ಗಟ್ಟಿದನಿಯಲ್ಲಿ ಮಾತನಾಡುವ ಕೆಲವೇ ಮಂದಿಯಲ್ಲಿ ರಜಿಯಾ ಒಬ್ಬರು.

"ಛಾಯೆ", "ಕಳೆದುಹೋಗುತ್ತೇವೆ". "ಋತು" ಅವರ ಕವನಸಂಕಲನಗಳಾಗಿವೆ. ತಮ್ಮ ಕವನಗಳ ಮೂಲಕ ಪಾರಂಪರಿಕ ಚೌಕಟ್ಟುಗಳನ್ನು ಮುರಿಯುತ್ತ ಹೋಗುವ ರಜಿಯಾ ತಮ್ಮದೇ ಆಶಯ ಮತ್ತು ಅಭಿವ್ಯಕ್ತಿಯನ್ನು ನೀಡುತ್ತ ಬಂದ ಅಪರೂಪದ ಕವಯಿತ್ರಿಯಾಗಿದ್ದಾರೆ. ಸಾಮಾಜಿಕ ನೆಲೆಯಲ್ಲಿ ಅರ್ಥೈಸಬಹುದಾದ ಅವರ ರಚನೆಗಳಲ್ಲಿ ಧರ್ಮ, ಕೋಮುವಾದ, ರಾಜಕಾರಣಗಳ ಕ್ರೌರ್ಯವನ್ನು ಕಾಣಬಹುದಾಗಿದೆ. ಸ್ತ್ರೀ–ಪುರುಷರಿಬ್ಬರನ್ನೂ ಕೌಟುಂಬಿಕ ಸಂಬಂಧಗಳ ಹಿನ್ನಲೆಯಲ್ಲಿ ಮಾನವೀಯವಾಗಿ ಗಮನಿಸುತ್ತಾರೆ. ಮಹಿಳೆಯ ಸ್ವಸಾಮರ್ಥ್ಯದ ಅರಿವನ್ನು ಹೆಣ್ಣುಮಕ್ಕಳಲ್ಲಿ ಮತ್ತು ಅವರನ್ನು ಮುಚ್ಚಟೆಯಾಗಿರಿಸಿಕೊಂಡಿದ್ದೇವೆಂದು ಭಾವಿಸುವ ಗಂಡಸರಲ್ಲಿ ಮೂಡಿಸಬೇಕೆಂಬ ಆಶಯ ಅವರ ಕವನಗಳಲ್ಲಿ ಚಿತ್ರಿತಗೊಂಡಿದೆ.

ಲಕ್ಷ್ಮೀ ಕುಂಜತ್ತೂರು ತಮ್ಮ ಕಾದಂಬರಿಗಳ ಮೂಲಕ ಜನಜನಿತರಾದರು. ೧೯ನೆಯ ಶತಮಾನದ ಮೊದಲ ಭಾಗದಿಂದ ೨೦ನೆಯ ಶತಮಾನದವರೆಗಿನ ತಮ್ಮದೇ ಆದ ಬೋವಿ ಸಮಾಜದ ಮೂರು ತಲೆಮಾರುಗಳ ಸಾಮಾಜಿಕ ಪರಿವರ್ತನೆಯನ್ನು ಪ್ರಗತಿಪಥ, ತೆರೆಮರೆ, ವೇದಿಕೆ ನಗ್ನ ಸತ್ಯ ಎಂಬ ಕಾದಂಬರಿಗಳ ಮೂಲಕ ಗುರುತಿಸಿದ್ದಾರೆ. ಮೀನುಗಾರ ಜನಾಂಗದ ನೋವು ನಲಿವುಗಳನ್ನು ಸ್ವತಃ ಕಂಡುಂಡ ಅಪ್ಪಟ ಅನುಭವ ಈ ವಸ್ತುವಿನ ಹಿನ್ನೆಲೆಯಲ್ಲಿದೆ. ಅಂದಿನ ಸಾಮಾಜಿಕ ವಿವರಣೆ, ಬಡತನ, ಅವಮಾನಗಳನ್ನು ಮೆಟ್ಟಿನಿಲ್ಲುವ ಜನರ ಅದಮ್ಯ ಜೀವನೋತ್ಸಾಹ, ಧರ್ಮ ಮತ್ತು ಮೌಲ್ಯಗಳಲ್ಲಿ ನಂಬಿಕೆ, ಕಲೆ, ಸಂಸ್ಕೃತಿಯ ಶ್ರದ್ಧೆ, ಸಮಯದ ಮೌಲ್ಯ ತಿಳಿದ ದುಡಿಮೆಯು ಬದುಕನ್ನು ಕಟ್ಟಿದ ಬಗೆ ಅಸಾಧಾರಣವಾಗಿ ಚಿತ್ರಿತವಾಗಿದೆ.

ಮೀನುಗಾರಿಕೆ ವೃತ್ತಿಯ ವಿವಿಧ ಚಟುವಟಿಕೆಗಳು, ಮೀನು ಮಾರುತ್ತ ಊರೂರು ತಿರುಗುವ ಮೀನುಗಾರ ಹೆಂಗಸರ ದಿನಚರಿ, ಬವಣೆ, ಬೊಬ್ಬರ್ಯ ಪೂಜೆ, ತುಳು ಪಾಡ್ದನಗಳು, ಜನಪದ ಕತೆಗಳು,

ನ್ಯಾಯತೀರ್ಮಾನಗಳು ಬೋವಿ ಜನಾಂಗದ ಬದುಕಿನ ಎಲ್ಲ ಆಯಾಮಗಳ ಸಮೃದ್ಧ ವಿವರಗಳು ದಾಖಲಾಗಿವೆ. ಮಾಣಿಕ್ಯ ಹಾಗೂ ಪಮ್ಮಚ್ಚು ಎಂಬ ಸ್ವಾಭಿಮಾನಿ ಹೆಣ್ಣುಗಳು ಇಲ್ಲಿ ಅವಿಸ್ಮರಣೀಯ ಪಾತ್ರಗಳಾಗಿವೆ. ಅಂತರ್ಜಾತೀಯ ಸಂಬಂಧಗಳ ಮಾನವೀಯ ಮುಖದಂತೆಯೇ ಕೌಟುಂಬಿಕ ಹಿಂಸೆಯ ಅಮಾನವೀಯ ಮುಖವೂ ಇಲ್ಲಿ ಅನಾವರಣಗೊಳ್ಳುತ್ತದೆ. ಅತಿಯಾದ ಜಾತಿನಿಷ್ಠೆಯ ಪುರುಷಪ್ರಧಾನ ಮನೋಧರ್ಮವನ್ನು ಲೇಖಕಿ ಗುರುತಿಸುತ್ತಾರೆ.

ಪಾರ್ವತಿ ಜಿ. ಐತಾಳ್ (೧೯೫೭) ಕನ್ನಡದ ಮಟ್ಟಿಗೆ ಇತ್ತೀಚೆಗಷ್ಟೇ ಅನುವಾದಕರು ಕಾಣಿಸಿಕೊಳ್ಳುತ್ತಿದ್ದಾರೆ. ಬಹಳ ಶ್ರೀಮಂತವಾದ ಸ್ತ್ರೀಸಂವೇದನೆಗಳಿಂದ ತುಂಬಿರುವ ಮಲಯಾಳ, ಇಂಗ್ಲೀಷ್ ಸಾಹಿತ್ಯದ ಉತ್ತಮ ಬರವಣಿಗೆಗಳನ್ನು ಕನ್ನಡಕ್ಕೆ ತರುವ ಕೆಲಸದಲ್ಲಿ ಇತ್ತೀಚಿನ ಕೆಲವು ವರ್ಷಗಳಿಂದ ತೊಡಗಿಕೊಂಡವರು ಪಾರ್ವತಿ ಜಿ. ಐತಾಳ್ ಅವರು.

ಮಲಯಾಳದ ಕಥೆಯೊಂದನ್ನು ಕನ್ನಡಕ್ಕೆ ಅನುವಾದಿಸುವ ಮೂಲಕ ಅನುವಾದ ಕ್ಷೇತ್ರಕ್ಕೆ ಕಾಲಿಟ್ಟ ಪಾರ್ವತಿಯವರು ಮಲಯಾಳದ 'ಅಕ್ಷರ ಕಥೆಗಳು', 'ಯುಗಾಂತ ಮತ್ತು ಇತರ ಕಥೆಗಳು', 'ಪ್ರಸಿದ್ಧರ ಪ್ರಾತಿನಿಧಿಕ ಕಥೆಗಳು' (ಸಣ್ಣಕತೆಗಳು), 'ಬದುಕಲು ಮರೆತ ಸ್ತ್ರೀ', 'ಬರುವೆ ನಾ ಮತ್ತೊಮ್ಮೆ ಎಂದಾದರೂ', 'ದುರ್ಬೀಜ', 'ಸುಳ್ಳುಮುಳ್ಳು', 'ಮಂಜು', 'ದೇವರಕಣ್ಣು', 'ಗುಡ್ ಅರ್ಥ್' (ಕಾದಂಬರಿಗಳು), ಮಲಯಾಳದ ಹತ್ತು ಕಥೆಗಾರ್ತಿಯರು ಅವರ ಅನುವಾದಿತ ಕೃತಿಗಳಾಗಿದ್ದು, ಇವುಗಳ ಮೂಲಕ ಮಲಯಾಳ ಭಾಷೆಯ ವಾಸುದೇವನ್ ನಾಯರ್‌ರಂಥ ಪ್ರಸಿದ್ಧರ ಕಥೆ, ಕಾದಂಬರಿಗಳನ್ನು ಕನ್ನಡಿಗರಿಗೆ ಪರಿಚಯಿಸಿದ್ದಾರೆ.

ಕೇರಳದ ಸಂಸ್ಕೃತಿ, ಸಮಾಜ, ಆಚಾರ-ವಿಚಾರಗಳು, ಅಲ್ಲಿನ ಜೀವನಶೈಲಿ, ಅಲ್ಲಿನ ವ್ಯಕ್ತಿಗಳ ಮನಸ್ಸಿನ ವಿಭಿನ್ನ ಸಂವೇದನೆಗಳು, ಸ್ತ್ರೀಯರು ಸಮಾಜವನ್ನು ಧೈರ್ಯದಿಂದ ಎದುರಿಸಬೇಕೆನ್ನುವ ಕಾಳಜಿಯನ್ನು ವ್ಯಕ್ತಪಡಿಸುವ ಬರವಣಿಗೆಗಳನ್ನು ಪಾರ್ವತಿಯವರು ತಮ್ಮ ಅನುವಾದಕ್ಕೆ ಆಯ್ಕೆ ಮಾಡಿಕೊಳ್ಳುತ್ತಾರೆ. ಇತ್ತೀಚೆಗೆ ಮಲಯಾಳದ ಅತ್ಯಂತ ವಿಶಿಷ್ಟ ವ್ಯಕ್ತಿತ್ವದ ಲೇಖಕಿ ಕಮಲಾದಾಸ್ ಅವರ ಆತ್ಮಕಥೆಯನ್ನು ಕನ್ನಡಕ್ಕೆ ಅನುವಾದಿಸಿದ್ದು ಉಲ್ಲೇಖನಿಯ ಅಂಶವಾಗಿದೆ. ಅನುವಾದದ ಜೊತೆಗೆ ಸ್ವತಂತ್ರವಾಗಿ ಕವನಗಳನ್ನು, ಸ್ತ್ರೀಪ್ರಧಾನ ವಸ್ತುವನ್ನೊಳಗೊಂಡ ಕಥೆಗಳನ್ನು ಕೂಡ ಬರೆದಿದ್ದಾರೆ. ಜೊತೆಗೆ ರಂಗಭೂಮಿಯ ಚಟುವಟಿಕೆಗಳಲ್ಲಿ ಅತ್ಯಂತ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.

ಅಪಾರ ಪರಿಶ್ರಮವನ್ನು ಬಯಸುವ ಸಂಶೋಧನೆಯ ಕ್ಷೇತ್ರ ಹಾಗೂ ಉಚಿತಾನುಚಿತ ವಿವೇಚನೆ ಕೇವಲ ಪುರುಷರಿಗೆ ಮಾತ್ರವೇ ಸಾಧ್ಯ ಎಂಬ ಅಲಿಖಿತ ಧೋರಣೆಯ ನಡುವೆಯೂ ವಿಮರ್ಶಾ ಕ್ಷೇತ್ರವನ್ನು ಪ್ರವೇಶಿಸಿ, ತಮ್ಮದೇ ಆದ ಸ್ತ್ರೀದೃಷ್ಟಿಯ ಮೂಲಕ ಇಂತಹ ಪುರುಷ ಕೇಂದ್ರಿತ ಮನೋಭಾವವನ್ನು ಹುಸಿಯಾಗಿಸಿದ ಮಹಿಳೆಯರು ದಕ್ಷಿಣಕನ್ನಡ ಜಿಲ್ಲೆಯಲ್ಲಿ ಸಾಕಷ್ಟಿದ್ದಾರೆ. ಅವರಲ್ಲಿ ಬಿ. ಲೀಲಾ ಭಟ್, ಡಾ. ಸುಶೀಲಾ ಪಿ. ಉಪಾಧ್ಯ, ರೋಹಿಣಿ ಬಿ.ಎಂ., ಡಾ. ಗಾಯತ್ರೀ ನಾವಡ, ಡಾ. ಸಬಿಹಾ ಭೂಮೀಗೌಡ ಮತ್ತಿತರರು ಮುಖ್ಯರಾಗುತ್ತಾರೆ.

ಬಿ. ಎಂ. ರೋಹಿಣಿ (೧೯೪೪) ಅತ್ಯಂತ ಬಡತನದಲ್ಲಿ ಹುಟ್ಟಿ ಬೆಳೆದು ತಂದೆಯ ಪ್ರೇರಣೆ ಹಾಗೂ ತನ್ನ ಅಂತಃಶಕ್ತಿಯ ಕಾರಣದಿಂದಲೇ ಶಿಕ್ಷಣ ಪಡೆದು ಅಧ್ಯಾಪನ ವೃತ್ತಿಯನ್ನು ಕೈಗೊಂಡ ರೋಹಿಣಿ ದಮನಿತ ಸಮುದಾಯದ ದನಿಯಾಗಿದ್ದಾರೆ. ಯಾವುದೇ ಒಣ ಆದರ್ಶದ ಮಾತುಗಳನ್ನಾಡದ ಅವರದು ತಣ್ಣನೆಯ ಆದರೆ ನೇರ ನಡೆ–ನುಡಿ. ತನ್ನ ಆಲೋಚನೆಗಳಿಗೆ ಮುಖಾಮುಖಿಯಾಗುವ ಚಿಂತನೆಗಳನ್ನು ಬಹಳ ಸಹನೆಯಿಂದ ಗಮನಿಸುವ ಮೂಲಕ ಹೊಸ ಬಗೆಯ ದೃಷ್ಟಿಕೋನಗಳಿಗೆ ತೆರೆದುಕೊಳ್ಳುವ ವ್ಯಕ್ತಿತ್ವ ಅವರದು.

ಮಹಿಳಾ ವಿಷಯಗಳನ್ನು ಒಂದು ಬದ್ಧತೆಯಿಂದ ನಿರ್ವಹಿಸುವ ಅವರು ಈ ನಿಟ್ಟಿನಲ್ಲಿ ಪ್ರಕಟಿಸಿದ ಸ್ತ್ರೀ ಸಂವೇದನೆ, "ಸ್ತ್ರೀ–ಶಿಕ್ಷಣ–ಸಂಸ್ಕೃತಿ", "ಸ್ತ್ರೀ ಭಿನ್ನ ಮುಖಗಳು", "ಸಾಮಾಜಿಕ ತಲ್ಲಣಗಳು" ಕೃತಿಗಳು ಮುಖ್ಯವಾಗುತ್ತವೆ. ಇವುಗಳಲ್ಲಿ ಸ್ತ್ರೀಯರ ಕುರಿತ ಪಾರಂಪರಿಕ ಪರಿಕಲ್ಪನೆಗಳಾದ ಪಾತಿವ್ರತ್ಯ, ತಾಯ್ತನದಂತಹ ಸಂಗತಿಗಳು ಪರಿಶೀಲನೆಗೆ ಒಳಗಾಗಿವೆ. ಸ್ತ್ರೀಯರು ತಮ್ಮ ಅಂತರಂಗದಲ್ಲಿ ಕೇಳಬಹುದಾದ ಪ್ರಶ್ನೆಗಳನ್ನು ರೋಹಿಣಿಯವರು ಈ ಕೃತಿಗಳ ಮೂಲಕ ಓದುಗರ ಮುಂದಿಡುತ್ತಾರೆ. ಉದ್ಯೋಗದ ನೆಲೆಯಲ್ಲಿ ತಮ್ಮ ಇಪ್ಪತ್ತೈದು ವರ್ಷಗಳ ಅನುಭವಗಳನ್ನು ಅವರು ಅಧ್ಯಾಪಿಕೆಯ ಅಧ್ವಾನಗಳು ಕೃತಿಯಲ್ಲಿ ತೆರೆದಿಟ್ಟಿದ್ದಾರೆ.

ಕರಾವಳಿ ಪ್ರದೇಶದ ಚಿಂತನಶೀಲ ಲೇಖಕಿಯರಲ್ಲಿ ಒಬ್ಬರಾಗಿರುವ, ತುಳು–ಕನ್ನಡ ಜನಪದ ಕ್ಷೇತ್ರ, ಸ್ತ್ರೀವಾದ, ಸಂಸ್ಕೃತಿ ವಿಮರ್ಶೆ, ಸಂಶೋಧನೆ ಮತ್ತಿತ್ತರ ವಲಯಗಳಲ್ಲಿ ದುಡಿಯುತ್ತಿರುವ ಗಾಯತ್ರಿ ನಾವಡ ತಮ್ಮ ಎಳೆಹರಯದಲ್ಲೇ ಕತೆ, ಕವನ, ಲೇಖನಗಳನ್ನು 'ಜೀವಿ' ಎಂಬ ಕಾವ್ಯನಾಮದಲ್ಲಿ ಬರೆಯುತ್ತಿದ್ದವರು. ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಕುಂದಗನ್ನಡದಲ್ಲೇ ಕತೆ ಕಟ್ಟಿ ಹೇಳುವ

ಜನಪದ ಗಾಯಕಿಯಾಗಿರುವ ಮೂಕಜ್ಜಿಯನ್ನು ಗುರುತಿಸಿ, ಅವರ ಕುರಿತು ಮೂಕಜ್ಜಿ ಬದುಕು ಸಾಹಿತ್ಯ ಕೃತಿಯನ್ನು ಪ್ರಕಟಿಸಿದವರು.

ಕರಾವಳಿ ಜಾನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು ಹಾಗೂ ಸಿರಿ ಪಂಥ: ಮಹಿಳಾ ಸಬಲೀಕರಣ–ಸಮಾಜೋ ಸಾಂಸ್ಕೃತಿಕ ಅಧ್ಯಯನ –ಇವು ಅವರ ವಿದ್ವತ್ಪೂರ್ಣ ಸಂಶೋಧನೆಯ ಫಲಗಳಾಗಿವೆ. ಜನಪದ ಜಗತ್ತಿನ ಹೆಣ್ಣಿನ ಬದುಕಿನ ಜೀವನಾವರ್ತನ ಆಚರಣೆಗಳಲ್ಲಿ ಆಕೆಯ ಅತ್ಯಂತ ಸೂಕ್ಷ್ಮ ಭಾವಗಳು, ಪ್ರಕೃತಿಯ ಜೊತೆಗಿನ ಅವಿನಾಭಾವ ಸಂಬಂಧವು "ಚಿತ್ತಾರ ಬರೆದ ಬದುಕು" ಕೃತಿಯಲ್ಲಿ ಚಿತ್ರಿತವಾಗಿದೆ. ವಿರಚನೆ–ಸ್ತ್ರೀವಾದಿ ಸಂಸ್ಕೃತಿ ಚಿಂತನ, ಭಾರತೀಯ ಸ್ತ್ರೀವಾದ: ಒಂದು ಸಂಕಥನ, ಮಹಿಳಾ ಸಂಕಥನ ಕೃತಿಗಳು ಪ್ರಾಚೀನ ಕನ್ನಡ ಸಾಹಿತ್ಯದಿಂದಾರಂಭಿಸಿ, ಹೊಸಗನ್ನಡ ಕಾಲದವರೆಗಿನ ಹೆಣ್ಣಿನ ವಿಭಿನ್ನ ಸಂವೇದನೆಗಳನ್ನು ಪ್ರತಿಬಿಂಬಿಸುತ್ತವೆ.

ಸಬಿಹಾ ಭೂಮೀಗೌಡ (೧೯೫೯) ಅವರು ಉತ್ತರಕರ್ನಾಟಕದ ಗದಗ ಜಿಲ್ಲೆಯ ರೋಣ ತಾಲೂಕಿನ ಗಜೇಂದ್ರಗಡದಂತಹ ಹಳ್ಳಿಯೊಂದರ ಬಹುಜಾತಿ, ಬಹುವರ್ಗ, ಬಹುಸಂಸ್ಕೃತಿಗಳ ಕೂಡು ಜೀವನಕ್ರಮದ ಹಿನ್ನಲೆಯಿಂದ ಬಂದ ಕುಟುಂಬಕ್ಕೆ ಸೇರಿದವರು. ತಮ್ಮ ಬಾಲ್ಯವನ್ನು ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕನ್ನಡದ ಎರಡೂ ಭಾಗಗಳಲ್ಲಿ ಕಳೆಯುವ ಅಪೂರ್ವ ಅವಕಾಶವನ್ನು ಪಡೆದರು.

ಹೀಗಾಗಿ ಈ ಎರಡು ಪ್ರದೇಶಗಳ ಸಂಪೂರ್ಣ ವಿಭಿನ್ನ ಜೀವನಕ್ರಮ, ಸಂಸ್ಕೃತಿಗಳು ಅವರ ಬದುಕಿನಲ್ಲಿ ಮತ್ತು ಬರೆಹಗಳಲ್ಲಿ ಮೇಳೈಸಿವೆ. ಸುಶಿಕ್ಷಿತವೂ, ಆರ್ಥಿಕವಾಗಿ ಚೆನ್ನಾಗಿಯೂ ಇದ್ದ ಕುಟುಂಬಕ್ಕೆ ಸೇರಿದ ಅವರು ಸಹಜವಾಗಿಯೇ ತಮ್ಮ ಉನ್ನತ ಶಿಕ್ಷಣವನ್ನು ಪಡೆಯುವ ಬಯಕೆಯನ್ನು ಸುಲಭವಾಗಿ ಈಡೇರಿಸಿಕೊಂಡರು. ಈ ಅವಧಿಯಲ್ಲಿ ಅವರಿಗೆ ದೊರಕಿದ ಹಲವು ಮಂದಿ ಪ್ರಗತಿಪರ ಮನೋಧರ್ಮದ ಸಾಹಿತಿಗಳ ಪರಿಚಯವು ಅವರ ಅರಿವಿನ ವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳಲು ಅವರಿಗೆ ನೆರವಾಯಿತು.

ವಿಮರ್ಶೆಗೆ ಸಂಬಂಧಿಸಿದಂತೆ ಸಬಿಹಾ ಅವರ ಮೊದಲ ಕೃತಿ "ಬಗೆ". ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಪ್ರತಿಬಿಂಬಿತವಾದ ಹೆಣ್ಣಿನ ದಮನದ ನೆಲೆಗಳು ಹಾಗೂ ಹೆಣ್ಣಿನ ಪಡಿಯಚ್ಚುಗಳ ರಕ್ಷಣೆಯಲ್ಲಿ ಸಾಹಿತ್ಯದ ಪಾತ್ರ, ಅಕ್ಷರಸಂಪನ್ನ ದಕ್ಷಿಣಕನ್ನಡ ಜಿಲ್ಲೆಯಲ್ಲಿ ನಡೆದ ಸಾಹಿತ್ಯಸೇವೆಯ ಹರಹು, ಮಿತಿಗಳನ್ನು

ವಿಮರ್ಶಾತ್ಮಕ ನೆಲೆಯಲ್ಲಿ ಒರೆಗೆ ಹಚ್ಚಲಾಗಿದೆ. ಅವರ ಇನ್ನೆರಡು ವಿಮರ್ಶಾ ಕೃತಿಗಳು ನಿಲುಮೆ ಮತ್ತು ಅನುಸಂಧಾನ. ಸ್ವತಂತ್ರ ವಿಚಾರಧಾರೆಗಳು ಸಾಹಿತ್ಯಿಕ ವಾಗ್ವಾದಗಳಿಗೆ ಇಲ್ಲಿ ಭೂಮಿಕೆಯನ್ನು ಒದಗಿಸಿವೆ. ಹೆಚ್ಚಿನ ಲೇಖನಗಳಲ್ಲಿ ಕೆನೆಗಟ್ಟಿರುವ ಸ್ತ್ರೀವಾದಿ ಚಿಂತನೆಗಳಲ್ಲಿ ಸಬಿಹಾ ಅವರ ಛಾಪು ಸ್ಪಷ್ಟವಾಗಿ ಗೋಚರಿಸುತ್ತದೆ.

ಮಹಿಳಾ ಸಂಬಂಧೀ ವಿಚಾರಗಳು ಮತ್ತು ಅವುಗಳನ್ನು ಸ್ತ್ರೀವಾದಿ ಚಿಂತನೆಗೆ ಒಳಪಡಿಸಿ ಚರ್ಚಿಸುವುದು ನಿರಂತರ ನಡೆಯಬೇಕಾದ ಕೆಲಸ. ಈ ಕಾರ್ಯ ಬರಹ ಮತ್ತು ಹೋರಾಟ ಎಂಬ ಎರಡು ಪ್ರಧಾನ ಶಾಖೆಗಳಾಗಿವೆ, ವಿಂಗಡವಾಗಿವೆ. ಮಹಿಳಾ ವಿಷಯಗಳನ್ನು ಸ್ತ್ರೀವಾದಿ ನೆಲೆಯಲ್ಲಿ ಮಾತನಾಡಿದರೆ ಕೇಳುವುದಕ್ಕೆ ಎಷ್ಟೋ ಆಕರ್ಷಕವಾದರೂ ಸಮಾಜದ ಜನರ ಮನಃಪರಿವರ್ತನೆಯಲ್ಲಿ ಅದು ಬೀರುವ ಪ್ರಭಾವ ಮಾತ್ರ ಕಡಿಮೆ. ಹೀಗಾಗಿ ಇಂತಹ ಲಿಂಗಭೇದ ನೀತಿಯ ಜೀವನ ಕ್ರಮವನ್ನು, ಸೃಜನಾತ್ಮಕ ಬರಹದಲ್ಲಿ ತಂದಾಗ ದೊಡ್ಡ ಗುಂಪನ್ನು ತಲುಪುವ ಅವಕಾಶ ಇರುತ್ತದೆ. ಅಂತಹ ಪ್ರಯತ್ನಗಳು ಈ ಅವಧಿಯಲ್ಲಿ ನಡೆಯುತ್ತಿವೆ ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಹಿಂದೂ ಮತ್ತು ಮುಸ್ಲಿಂ ಧರ್ಮದ ಬಾಂಧವ್ಯವನ್ನು ಹೆಣ್ಣಿನ ಕಣ್ಣಲ್ಲಿ ಕಟ್ಟಿ ಕೊಟ್ಟಿದ್ದಾರೆ. ಧಾರ್ಮಿಕ ಮೂಲಭೂತವಾದವು ಪುರುಷ ಪ್ರಧಾನ ವ್ಯವಸ್ಥೆಯು ರೂಪಿಸಿದ ದುರಂತವನ್ನು ಸೂಕ್ಷ್ಮವಾಗಿ ಕತೆಗಳಲ್ಲಿ ಅನಾವರಣಗೊಳಿಸಿದ್ದಾರೆ.

ಗಂಗಾ ಪಾದೇಕಲ್‌ರವರ ಹೆಸರು ಮಹಿಳಾ ಸಾಹಿತ್ಯ ವಲಯದಲ್ಲಿ ಪರಿಚಿತವಾದುದು. ಇವರ ಮೂಲ ಹೆಸರು ಗಂಗಾರತ್ನ. ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರಿನಲ್ಲಿ ದಿನಾಂಕ ೦೧-೦೯-೧೯೪೮ ರಂದು ಜನಿಸಿದರು. ಸಾಹಿತ್ಯದ ಒಲವು, ಸಾಹಿತ್ಯ ಜ್ಞಾನ ಇರುವ ಕುಟುಂಬದಲ್ಲಿ ಬೆಳೆದ ಇವರಿಗೆ ಬಾಲ್ಯದಲ್ಲೇ ಸಾಹಿತ್ಯದ ಬಗ್ಗೆ ಆಸಕ್ತಿ ತೋರಲು ಸಾಹಿತಿಗಳಾಗಿದ್ದ ಅಜ್ಜಿ ಅಣ್ಣಂದಿರ ಪ್ರೋತ್ಸಾಹವೇ ಸಾಹಿತ್ಯ ರಚನೆಗೆ ಪ್ರೇರಣೆ. ತನ್ನೊಳಗಿನ ತುಡಿತದ ಶಮನಕ್ಕೊಂದು ಕಿರುಪ್ರಯತ್ನವೇ ಸಾಹಿತ್ಯ ರಚನೆಯ ಹಿಂದಿರುವ ಉದ್ದೇಶ ಎಂದಿದ್ದಾರೆ.

ಸಣ್ಣಕತೆ, ಕಾದಂಬರಿ, ನಾಟಕಗಳು, ಲೇಖನಗಳು, ಹಾಗೂ ಕಿರುಗತೆ ಇವರ ಆಸಕ್ತಿಯ ಸಾಹಿತ್ಯ ಪ್ರಕಾರಗಳು. ಹೊನ್ನಳ್ಳಿಯಲ್ಲೊಮ್ಮೆ, ಸೆರೆಯಿಂದ ಹೊರಗೆ, ಪಯಣದ ಹಾದಿಯಲ್ಲಿ ಮೌನರಾಗಗಳು, ಬಂಗಾರದ ಜಿಂಕೆಯ ಹಿಂದೆ, ಇನ್ನೊಂದು ಅಧ್ಯಾಯ, ಅದೃಷ್ಟರೇಖೆಗಳು, ಕನಕಾಂಬರಿ, ಮೂರು

ಕಿರುಕಾದಂಬರಿಗಳು, ಸೆರೆಗಿನಕೆಂಡ ಇತ್ಯಾದಿ ಹತ್ತು ಕಾದಂಬರಿಗಳನ್ನು ಸಂಪಾದನೆಯ ಕೃಷಿಯನ್ನು ಕೂಡ ಮಾಡಿದ್ದಾರೆ. ೧೯೯೪ - ಆಯ್ದಕಥೆಗಳು, ಪ್ರತಿಬಿಂಬ (ಮುಳಿಯ ಕೃಷ್ಣಭಟ್ಟ ಬದುಕು ಬರಹ) ಮುಳಿಯ, ಮೂಕಾಂಜಿಕೆ ಏರ್ಯ ಚಂದ್ರಭಾಗೀ ರೈ, ಸಂಪಾದಿತ ಕೃತಿಗಳನ್ನು ರಚಿಸಿದ್ದಾರೆ.

ಗಂಗಾ ಅವರ ಮೊದಲ ಕತೆ ಸುಧಾದಲ್ಲಿ ಪ್ರಕಟವಾದ "ಜಾನಕಿಯ ಕೆಲವು ಪುಟಗಳು" ಹಾಗೂ 'ಪುಲಪೇಡಿ ಮತ್ತು ಇತರ ಕಥೆಗಳು' ಮೊದಲ ಕಥಾಸಂಕಲನವಾಗಿದೆ. ಹೊಸಹೆಜ್ಜೆ, ವಾಸ್ತವ, ಕ್ಷಮಯಾ ಧರಿತ್ರಿ, ನೆಲೆತಪ್ಪಿದ ಹಕ್ಕಿ, ಮನ್ನಣೆಯ ದಾಹ, ಈ ಪ್ರಜಾರಾಜ್ಯದೊಳಗೆ, ಸಂಕ್ರಮಣ, ಇತ್ಯಾದಿ ಒಂಭತ್ತು ಕಥಾಸಂಕಲನಗಳನ್ನು ಬರೆದಿದ್ದಾರೆ.ಗಂಗಾ ಪಾದೇಕಲ್ ಅವರ ಕಥೆಗಳಲ್ಲಿ ಆರ್ಥಿಕವಾದ ದುರ್ಬಲರು, ಮಹಿಳೆಯರ ಹಾಗೂ ಬಡವರ ಪರವಾದ ಕಾಳಜಿ ಪ್ರಧಾನವಾಗಿದೆ.

ಇನ್ನಿತರ ಕಸುಬುಗಳನ್ನು ಕುರಿತ ಚಿತ್ರಣವಿದ್ದರೂ ಕೃಷಿ ಪ್ರಧಾನವಾದ ಬದುಕಿನ ಎಲ್ಲಾ ಮಗ್ಗುಲುಗಳನ್ನು ಚಿತ್ರಿಸುವತ್ತ ಗಂಗಾ ಅವರ ಆಸಕ್ತಿಯಿರುವುದು ಕಂಡುಬರುತ್ತದೆ. ಪರಂಪರೆ, ಸಂಪ್ರದಾಯದ ನಂಬಿಕೆ ಆಚಾರಗಳನ್ನು ಬದಿಗೊತ್ತಿ ಶಿಕ್ಷಣ, ಆರ್ಥಿಕ ಸ್ವಾವಲಂಬನೆಯಿಂದ ಮಹಿಳೆ ಹೊಸ ಬದುಕಿನತ್ತ ಹೆಜ್ಜೆಯಿಡುವ ಹಾಗೂ ಬದುಕಿನ, ಸಮಸ್ಯೆಗಳನ್ನು ಎದುರಿಸುತ್ತಾ ಬದುಕು ಮತ್ತು ಜೀವಪರವಾದ ಮಾನವೀಯ ಕಾಳಜಿ ಇವರ ಕಥನ ಸಾಹಿತ್ಯದ ಮುಖ್ಯ ಆಶಯವಾಗಿದೆ. ಗಂಗಾರವರು ತಮ್ಮ ಸುತ್ತಮುತ್ತಲಿನ ಆಗುಹೋಗುಗಳನ್ನು, ಅನುಭವವನ್ನು ಕಥನಗಳಾಗಿ ಹೆಣೆಯುವುದರಲ್ಲಿ ಆಸಕ್ತಿಯನ್ನು ಕಂಡವರು.

ದಕ್ಷಿಣ ಕನ್ನಡ ಜಿಲ್ಲೆಯ ಮಧ್ಯಮವರ್ಗದ, ಬಡವರ ಬದುಕನ್ನು ಅಲ್ಲಿನ ಬದುಕಿನೊಂದಿಗಿನ ಹೋರಾಟವನ್ನು ಹಾಗೂ ಕೃಷಿ, ನೆಲ ಜನಪರವಾದ ಕಾಳಜಿ ಇವರ ಸಾಹಿತ್ಯ ರಚನೆಯಲ್ಲಿ ಕಾಣಬಹುದು. ಗಂಗಾ ಅವರು ತಮ್ಮ ಸಾಹಿತ್ಯವನ್ನು ಕುರಿತು "ಮಹಿಳೆ ಮಾತ್ರವೇ ಶೋಷಣೆಗೆ ಗುರಿಯಲ್ಲ ಎಂದು ಈ ಮುನ್ನ ಬರೆದಿದ್ದೇನಾದರೂ ಸ್ತ್ರೀ ಶೋಷಣೆ ಮಿಕ್ಕೆಲ್ಲವುಗಳಿಗಿಂತಲೂ ಜಾಸ್ತಿ ಪ್ರಮಾಣದಲ್ಲಿವೆ ಎಂಬುವುದು ಕೂಡಾ ನನ್ನ ಗಮನದಲ್ಲಿದೆ. ನಾನು ಕೂಡಾ ಆ ರೀತಿಗೆ ಒಳಗಾದವಳೆ. ಹಾಗೆಂದೆ ಇದ್ದೀತು. ನನ್ನ ಬರಹಗಳಲ್ಲಿ ಅಂತಹ ಹೆಂಗಸರ ಚಿತ್ರಣಗಳು ಜಾಸ್ತಿಯಾಗಿವೆ. ಅಲ್ಲಿ ಬಂದಿರುವ ಜಾನಕಿ, ಸಾವಿತ್ರಿ, ಸರೋಜ, ಲಚ್ಚಿ, ವಸುಧ, ಗೌರ, ಕುಸುಮ, ಲಲಿತೆ ಮೊದಲಾದವರೆಲ್ಲ ನಾನು ನೋಡಿದ ಜೀವಗಳೇ. ಒಂದು ಸಣ್ಣ ಸಮಾಧಾನದ ಮಾತೆಂದರೆ ಬದುಕಿನ ಕುಲುಮೆಯಲ್ಲಿ ಬೇಯುತ್ತಲೇ ಇದ್ದರೂ ಒಳ್ಳೆಯ

ನಾಳೆಗಳ ಕುರಿತಾಗಿ ಇವರಲ್ಲಿ ಆಸೆ ನಿರೀಕ್ಷೆಗಳಿವೆ"[೨೧] ಎಂಬ ಗಂಗಾ ಅವರ ಮಾತುಗಳಲ್ಲಿ ಕಥೆಗಳ ಹಿಂದಿನ ತುಡಿತ ಸಮಾಜದಲ್ಲಿ ನಡೆಯುವ ಘಟನೆಗಳಿಗೆ ವಾಸ್ತವವಾಗಿ ಕಂಡುಬರುತ್ತದೆ.

ಬದುಕಿನಲ್ಲಿ ವ್ಯವಸ್ಥೆ, ಸಂಪ್ರದಾಯಗಳ ಸಂಕೋಲೆಗಳನ್ನು ಕಿತ್ತೆಸೆದು ಹೊಸಬದುಕಿನತ್ತ ಪಯಣಿಸುವ ಗಟ್ಟಿ ಮಹಿಳಾ ಪಾತ್ರಗಳನ್ನು ಗಂಗಾ ಅವರು ಚಿತ್ರಿಸಿದ್ದಾರೆ. ಇದನ್ನೇ ಡಾ. ಸಬೀಹಾ ಅವರು ಮುನ್ನುಡಿಯಲ್ಲಿ 'ಕಾಲದಿಂದ ಕಾಲಕ್ಕೆ ಸಮಾಜದ ಸಮಸ್ಯೆಗಳು ಬದಲಾಗುತ್ತಿರುತ್ತವೆ. ಹಾಗೆಯೇ ಆ ಸಮಸ್ಯೆಗಳನ್ನು ಪರಿಭಾವಿಸುವ ಅವುಗಳಿಗೆ ಸ್ಪಂದಿಸುವ ಬಗೆಗಳೂ ಬೇರೆಯಾಗಿರುತ್ತವೆ. ಕ್ಷಿಪ್ರಗತಿಯಿಂದ ಪರಿವರ್ತನೆಯಾಗುತ್ತಿರುವ ಸಮಾಜದಲ್ಲಿ ಸ್ತ್ರೀ ಪುರುಷರ ವ್ಯಕ್ತಿತ್ವಗಳು ಸಂಬಂಧಗಳು ವಿಭಿನ್ನವೂ ಸಂಕೀರ್ಣವೂ ಆಗುವುದು ಅನಿವಾರ್ಯ ಸಮಾಜದೊಳಗೆ ನಡೆವ ಇಂಥ ಪರಿವರ್ತನೆಗಳನ್ನು ಸಾಹಿತ್ಯ ಕೃತಿ ಹಿಡಿದಿಡಲು ಯತ್ನಿಸುತ್ತದೆ. ಈ ಪ್ರಯತ್ನ ಬಹುಮುಖವೂ, ಪ್ರಾಮಾಣಿಕವೂ, ಸೂಕ್ಷ್ಮವೂ ಆದಾಗ ಕೃತಿ ಪ್ರೌಢವೂ ಮೌಲಿಕವೂ ಆಗುತ್ತದೆ.  ಗಂಗಾ ಅವರ ಕತೆಗಳಲ್ಲಿ ಇಂಥ ಪ್ರಯತ್ನಗಳನ್ನು ಗುರುತಿಸಬಹುದು"[೨೨] ಎಂಬ ಮಾತುಗಳು ಗಂಗಾ ಅವರ ಕಥೆಗಳಲ್ಲಿನ ಸಾಮಾಜಿಕ ಪರಿವರ್ತನೆಯನ್ನು ಕುರಿತ ಅನಿಸಿಕೆ ಒಪ್ಪಿತವಾದುದು.

ಮಧ್ಯಮ, ಕೆಳಮಧ್ಯಮ ಹಾಗೂ ಕೆಳವರ್ಗದ ಸಾಮಾಜಿಕ ಬದುಕನ್ನೇ ಅವರು ಅನೇಕ ಕತೆಗಳಲ್ಲಿ ನಿರ್ವಹಿಸಿದ್ದಾರೆ.  ಜಾತಿ–ಮತ–ಧರ್ಮಗಳ ವಿಭಿನ್ನ ಸ್ತರಗಳಲ್ಲಿ ನಡೆಯುವ ಅಮಾಯಕ ಹೆಣ್ಣು ಮಕ್ಕಳ ಶೋಷಣೆಗೆ ಇಡೀ ಸಮಾಜವೇ ಜವಾಬ್ದಾರ ಎಂಬುದನ್ನು ಅವರ ಬರಹಗಳು ಧ್ವನಿಸುತ್ತವೆ. ಗಂಗಾರವರ ಅಭಿಪ್ರಾಯದಂತೆ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಶೋಷಣೆಯೆಂಬುದು ಒಂದಲ್ಲ ಒಂದು ರೀತಿಯಲ್ಲಿ ನಡೆದುಕೊಂಡೇ ಬಂದಿದೆ. ಆದಷ್ಟು ಅದರಿಂದ ಹೊರಬರುವ ಪ್ರಯತ್ನ ನಡೆಯುತ್ತಿದ್ದರೂ ಸೂಕ್ಷ್ಮವಾಗಿ, ಅದು ಸುಪ್ತವಾಗಿ ಕೆಲಸ ಮಾಡುತ್ತಾ ಇರುತ್ತದೆ ಎಂದಿದ್ದಾರೆ.

ಸಾರಾ ಅಬೂಬಕ್ಕರ್‌ರವರು 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ ಮೂಲಕ ಕನ್ನಡ ಸಾಹಿತ್ಯ ಲೋಕದಲ್ಲಿ ಭದ್ರಸ್ಥಾನವನ್ನು ತಮ್ಮದಾಗಿಸಿಕೊಂಡವರು. ಜೂನ್ ೩೦ ೧೯೩೬ರಲ್ಲಿ ಕಾಸರಗೋಡಿನಲ್ಲಿ ಜನಿಸಿದರು. ಕಾದಂಬರಿ, ಕಥೆ, ಲೇಖನಗಳು ಅನುವಾದ ಇವರ ಆಸಕ್ತಿಯ ಸಾಹಿತ್ಯ ಪ್ರಕಾರಗಳು. ಮುಸ್ಲಿಂ ಸಮುದಾಯದಿಂದ ಬಂದ ಇವರು ಕನ್ನಡದಲ್ಲಿ ಬರೆಯಬೇಕು ಎಂಬ ತುಡಿತವುಂಟಾಗುತ್ತಿತ್ತು. ಅದೇ ಹೊತ್ತಿಗೆ ಫಕೀರ್ ಮಹಮ್ಮದ್ ಕಟಪಾಡಿಯವರು ಬರೆದ 'ಒಂದು ರಾತ್ರಿ ಒಂದು ಹಗಲು' ಕಥೆ ಇವರ

ಬರವಣಿಗೆಗೆ ಪ್ರೇರಣೆಯಾಯಿತು. ಎಂ. ಕೆ. ಇಂದಿರಾ, ತ್ರಿವೇಣಿಯವರ ಬರಹಗಳು ಇನ್ನಷ್ಟು ಸ್ಫೂರ್ತಿ ನೀಡಿದವು. ಸಾಮಾಜಿಕ ಬದಲಾವಣೆಯೇ ಇವರ ಬರವಣಿಗೆಯ ಹಿಂದಿರುವ ಉದ್ದೇಶ.

ಪಿ. ಲಂಕೇಶ್‌ರವರ ಪ್ರೋತ್ಸಾಹದಿಂದ ಸಾಹಿತ್ಯ ಕ್ಷೇತ್ರದಲ್ಲಿ ಮುನ್ನುಗ್ಗಲು ಸಾಧ್ಯವಾಯಿತು. ಇವರ ಕಾದಂಬರಿಗಳು ಚಂದ್ರಗಿರಿ ತೀರದಲ್ಲಿ, ಸಹನಾ, ವಜ್ರಗಳು, ಕದನ ವಿರಾಮ, ಸುಳಿಯಲ್ಲಿ ಸಿಕ್ಕವರು, ತಳ ಒಡೆದ ದೋಣಿಯಲ್ಲಿ, ಪ್ರವಾಹ, ಸುಳಿ, ಪಂಜರ, ಭಾಷಾಂತರ ಕೃತಿಗಳು ಮನೋಮಿ, ಬಲೆ, ನಾನಿನ್ನು ನಿದ್ರಿಸುವೆ ತುರ್ತು ಪರಿಸ್ಥಿತಿಯ ಕರಾಳಮುಖ ಲೇಖನ ಸಂಗ್ರಹಗಳನ್ನು ಪ್ರವಾಸ ಕಥನಗಳನ್ನು ಬಾನುಲಿ ನಾಟಕಗಳ ಸಂಗ್ರಹವನ್ನು ಮಾಡಿದ್ದಾರೆ. ಕಥಾ ಸಂಕಲನಗಳು ಚಪ್ಪಲಿಗಳು, ಪಯಣ, ಅರ್ಧರಾತ್ರಿಯಲ್ಲಿ ಹುಟ್ಟಿದ ಕೂಸು, ಖೆಡ್ಡಾ, ಸುಮಯ್ಯಾ (ಜಾನಪದ ಕಥೆಗಳು) ಗಗನ ಸಖಿ ಮೊದಲಾದವುಗಳು "ಮುಸ್ಲಿಂ ಹೆಣ್ಣುಮಕ್ಕಳ ಶಿಕ್ಷಣ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಮುಸ್ಲಿಂ ಮಹಿಳೆಯರ ಶೋಷಣೆ ಹಾಗೂ ಕೋಮು ಸೌಹಾರ್ದ ಈ ಮೂರು ವಿಷಯಗಳ ಕುರಿತು ನಾನು ಕತೆ, ಕಾದಂಬರಿ ಹಾಗೂ ಲೇಖನಗಳನ್ನು ಬರೆಯತೊಡಗಿದೆ.

ನಾನು ಈ ಕುರಿತು ನನಗೆ ತಿಳಿದಂತೆ ಬರಹದ ಮೂಲಕ ಮೂಲಭೂತವಾದಿಗಳ ವಿರುದ್ಧ ಒಂದು ವಿಧದಲ್ಲಿ ಹೋರಾಟವನ್ನೇ ಕೈಗೊಂಡನೆನ್ನಬಹುದು"[೩೩] ಎಂದಿದ್ದಾರೆ ಸಾರಾ. ಸಾರಾರವರು ತಮ್ಮ ಕಥೆ ಕಾದಂಬರಿಗಳಲ್ಲಿ ಬಹುಪತ್ನಿತ್ವ, ತಲಾಖ್ ಸಮಸ್ಯೆ, ವರದಕ್ಷಿಣೆ ಸಮಸ್ಯೆ, ಬಡತನ, ಶಿಕ್ಷಣ, ಕೋಮುವಾದ ಮತಾಂಧತೆ ಮೊದಲಾದ ಸಮಸ್ಯೆಗಳನ್ನು ದಾಖಲಿಸುತ್ತಾ ಸಾಗಿದ್ದಾರೆ.

ಸಾರಾ ಅಬೂಬಕ್ಕರ್ ರವರು ತಮ್ಮ ಸಾಹಿತ್ಯದ ಮೂಲಕ ಮುಸ್ಲಿಂ ಹೆಣ್ಣು ಮಕ್ಕಳ ಶಿಕ್ಷಣ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಮುಸ್ಲಿಂ ಮಹಿಳೆಯರ ಶೋಷಣೆ ಹಾಗೂ ಕೋಮು ಸೌಹಾರ್ದ ಈ ಮೂರು ವಿಷಯಗಳ ಕುರಿತು ಕತೆ, ಕಾದಂಬರಿ ಹಾಗೂ ಲೇಖನಗಳನ್ನು ಬರೆಯತೊಡಗಿದರು. ತಮ್ಮ ಬರಹದ ಮೂಲಕ ಮೂಲಭೂತವಾದಿಗಳ ವಿರುದ್ಧ ಒಂದು ವಿಧದಲ್ಲಿ ಹೋರಾಟವನ್ನೇ ಕೈಗೊಂಡವರು.

ಸಾರಾ ಅಬೂಬಕ್ಕರ್‌ರವರು ಮುಸ್ಲಿಂ ಮಹಿಳೆಯರ ಮೇಲೆ ಸಂಘಟನೆಗಳು ನಿರ್ಬಂಧ ಹೇರಿದ್ದರ ವಿರುದ್ಧ ಲಂಕೇಶ್ ಪತ್ರಿಕೆಗೆ ಲೇಖನಗಳನ್ನು ಬರೆದರು. ತಲಾಖ್ ನೀಡಲ್ಪಟ್ಟ ಹೆಣ್ಣಿನ ಶೋಷಣೆ ಬಗ್ಗೆ "ಚಂದ್ರಗಿರಿಯ ತೀರದಲ್ಲಿ" ಕಾದಂಬರಿ ಬರೆದರೆ, ಬಹುಪತ್ನಿತ್ವದಿಂದ ಮಹಿಳೆ ಅನುಭವಿಸುವ ನೋವಿನ ಕುರಿತು ಸಹನಾ ಕಾದಂಬರಿಯಲ್ಲಿ ಬರೆದರು. ತಲಾಖ್ ಪೀಡಿತ ಮಹಿಳೆಗೆ ಜೀವನಾಂಶ ನೀಡಬೇಕೆಂದು

ಕೋರ್ಟು ತೀರ್ಪುನೀಡಿದಾಗ, ಮುಸ್ಲಿಂ ಪುರುಷರು, ಜೀವನಾಂಶ ನೀಡಬೇಕಾಗಿಲ್ಲವೆಂದು ವಾದಿಸಿದರು. ಇದು ಪೊಳ್ಳು ವಾದವೆಂದು ತಿಳಿಸಲು "ವಜ್ರಗಳು" ಎಂಬ ಕೃತಿಯನ್ನು ಬರೆದರು. ಹೀಗೆ ಧರ್ಮದ ಹೆಸರಿನಲ್ಲಿ ನಡೆಸುವ ಅಧರ್ಮವನ್ನು, ಮಹಿಳೆಯರ ಶೋಷಣೆಯನ್ನು ಸಾರಾರವರು ತಮ್ಮ ಬರಹಗಳ ಮೂಲಕ ಚಿತ್ರಿಸಿ ಮೂಲಭೂತವಾದಿಗಳ ವಿರುದ್ಧ ಹೋರಾಟವನ್ನು ಮಾಡಿದ್ದಾರೆ.

ಕನ್ನಡದ ಪ್ರಸಿದ್ಧ ಲೇಖಕಿ 'ವೈದೇಹಿ' ಎಂಬ ಕಾವ್ಯನಾಮದಿಂದಲೇ ಚಿರಪರಿಚಿತವಾಗಿರುವ ಜಾನಕಿ ಶ್ರೀನಿವಾಸ ಮೂರ್ತಿಯವರು ಫೆಬ್ರವರಿ ೧೨, ೧೯೪೫ ರಲ್ಲಿ ಕುಂದಾಪುರದಲ್ಲಿ ಜನಿಸಿದರು. ಇವರು ಬಾಲ್ಯದಲ್ಲಿಯೇ ಸಾಹಿತ್ಯಾಸಕ್ತಿಯನ್ನು ಬೆಳೆಸಿಕೊಂಡವರು. ಕಥೆ ಕವನ, ಮಕ್ಕಳನಾಟಕಗಳು. ಅನುವಾದ ಲೇಖನಗಳು ಮಿಶ್ರಸಂಗ್ರಹ ಇವರ ಆಸಕ್ತಿಯ ಸಾಹಿತ್ಯ ಪ್ರಕಾರಗಳು. ಅಣ್ಣ ಎಸ್. ಎನ್. ಹೆಬ್ಬಾರರು ಬರಹಗಾರರಾಗಿದ್ದು, ಅವರ ಬರಹಗಳನ್ನು ನೋಡಿ ಅವರ ಪ್ರೇರಣೆಯಿಂದ ಬರವಣಿಗೆಗೆ ತೊಡಗಿದರು. ತಾನು ಕಂಡ ಜೀವನಗಳನ್ನು ಕುರಿತ ಚಿಂತನೆಯೇ ವೈದೇಹಿಯವರಿಗೆ ಸಾಹಿತ್ಯ ರಚನೆಗೆ ಪ್ರೇರಣೆ, ಚಿಂತನೆಯ ಬೆಳಕಿನಲ್ಲಿ ಬದುಕಿನ ಜಟಿಲತೆಯನ್ನು ಬಿಡಿಸಿ ನೋಡುವುದೇ ಅರಿಯುವುದೇ ಇವರ ಸಾಹಿತ್ಯ ರಚನೆಯ ಹಿಂದಿರುವ ಉದ್ದೇಶ.

ಇವರು ಕಥಾಸಾಹಿತ್ಯ ಪ್ರಕಾರವನ್ನು ಮುಖ್ಯ ಮಾಧ್ಯಮವನ್ನಾಗಿಸಿದ್ದಾರೆ. ಇವರು ಪ್ರಕಟಿಸಿರುವ ಕಥಾ ಸಂಕಲನವೆಂದರೆ ಮರಗಿಡಬಳ್ಳಿ, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ಗೋಲ, ಅಂತರಂಗದ ಪುಟಗಳು, ಅಮ್ಮಚ್ಚಿಯೆಂಬ ನೆನಪು ಮತ್ತು ಕ್ರೌಂಚ ಪಕ್ಷಿಗಳು, ಕತೆಕತೆ ಕಾರಣ ಒಟ್ಟು ಏಳು ಕಥಾ ಸಂಕಲನಗಳನ್ನು ಹೊರತಂದಿದ್ದಾರೆ. ಸಮಾಜದಲ್ಲಿ ಗಂಡುಹೆಣ್ಣಿನ ಭಾವನಾತ್ಮಕ ಸಂಬಂಧಗಳು ಹೇಗೆಲ್ಲ ಹೆಣೆದುಕೊಂಡಿರುತ್ತವೆ ಹಾಗೂ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ತೀವ್ರವಾದ ಸಮಸ್ಯೆಗಳನ್ನು ಹೇಗೆ ಎದುರಿಸುತ್ತಾಳೆ ಎಂಬುದನ್ನು ಚರ್ಚಿಸುವ ನೆಲೆಯಲ್ಲಿ ವೈದೇಹಿಯವರು ಕಥೆಗಳನ್ನು ಹೆಣೆದಿದ್ದಾರೆ.

"ವೈದೇಹಿಯವರ ಬರವಣಿಗೆಗಳಲ್ಲಿ ಅವಿದ್ಯಾವಂತರಾದರೂ ಆಧುನಿಕತೆಯ ಸ್ಪರ್ಶವಿಲ್ಲದೆ ಬದುಕುವ ಹೆಣ್ಣುಗಳ ಅಂತರಂಗದ ಶಕ್ತಿ ಅವರ ಒಡಲ ಬೆಂಕಿಯಿಂದ ಆಸ್ಫೋಟಿಸುವ ಬಂಡಾಯ. ಸುಖವೆಂಬ ಮರೀಚಿಕೆಯ ಬೆನ್ನುಹತ್ತಿಯೂ ಭ್ರಮನಿರಸನ ಗೋಳು ಬಾಳಿಗೆ ವಿದಾಯ ಹೇಳುವ ಆಧುನಿಕಮನಸ್ಸಿನ ಹೆಣ್ಣುಗಳು ಇವರ ಕಥೆಗಳಲ್ಲಿ ಕಂಡು ಬರುತ್ತಾರೆ. ಹೆಣ್ಣಿಗೆ ಒದಗುವ ಆಯ್ಕೆಯ ಸನ್ನಿವೇಶಗಳು, ಮೀರುವ ಮೀರದಿರುವ ದ್ವಂದ್ವಗಳು, ದಾಟಲಾಗದ ಚಡಪಡಿಕೆಗಳು, ದಾಟಿದವರ

ಬಗೆಗಿನ ಸಹಜ ಅಸೂಯೆ, ಮತ್ಸರಗಳು ಕಲಾತ್ಮಕವಾಗಿ ಮಂಡಿತವಾಗಿವೆ"[೩೪] ಎಂಬ ಡಾ. ಯು. ಮಹೇಶ್ವರಿಯವರ ಮಾತುಗಳು ಇಲ್ಲಿ ಉಲ್ಲೇಖನೀಯ.

ಅವರ "ಅಸ್ಪಶ್ಯರು" ಕಾದಂಬರಿ ಜೀವನಾನುಭವ, ಮಡುಗಟ್ಟಿದ ಬದುಕಿನ ಚಲನಶೀಲ ಗತಿಗೆ ಕನ್ನಡಿ ಹಿಡಿಯುತ್ತದೆ. ಅಲ್ಲಿ ತಲೆಮಾರುಗಳ ಪರಂಪರೆಯಿರುವ ಮಡಿಪ್ರಜ್ಞೆಗೆ ಸಮಾನಾಂತರವಾಗಿ ಸಾಂಪ್ರದಾಯಿಕತೆ ಇದೆ. ವೈದಿಕ ಸಮುದಾಯದ ಒಳಗಡೆಯೂ ಅಲ್ಲಿನ ಹೆಣ್ಣುಗಳ ಬದುಕನ್ನು ಕಾಡುವ ಅಲ್ಲಿನ ನಿಶ್ಚಲ ಸಂಪ್ರದಾಯವನ್ನು ಇಲ್ಲಿನ ವಿಭಿನ್ನ ಮನಸ್ಸುಗಳು ಶಕ್ತವಾಗಿ ಎದುರಿಸುತ್ತವೆ.

ಕಥನ ಸಾಹಿತ್ಯದಲ್ಲಿ ಬಹಳ ಮುಖ್ಯರಾಗುವ ವೈದೇಹಿ ಕವಯಿತ್ರಿಯೂ ಹೌದು. ಮನೆಯ ಹೆಣ್ಣುಮಕ್ಕಳೆಲ್ಲ ಒಟ್ಟಾಗಿ ಹಾಡುತ್ತಿದ್ದ ಭಜನೆ ಪದ್ಯಗಳು ಅವರ ಒಳಗಿನ ಕವಯಿತ್ರಿಗೆ ಸ್ವರಸಂಸ್ಕಾರ ಮತ್ತು ಕಾವ್ಯಸಂಸ್ಕಾರ ನೀಡಿವೆ. ಅವರ 'ಬಿಂದು ಬಿಂದಿಗೆ', 'ಪಾರಿಜಾತ' ಹಾಗೂ 'ಹೂವ ಕಟ್ಟುವ ಕಾಯಕ' ಕವನಸಂಕಲನಗಳು ಕವಿತೆ ಎಂದರೆ ಕವಿಯ ಉಸಿರಾಟದಷ್ಟೇ ಸಹಜ ಮತ್ತು ವಿಶಿಷ್ಟ ಎಂಬುದಕ್ಕೆ ಮಾದರಿಯಾಗಿವೆ.

ಕಥನ ಮಾದರಿಯ ಬರಹಗಳ ವೈದೇಹಿಯವರ ಅಂಕಣಬರಹಗಳ ಕೃತಿ ಮಲ್ಲಿನಾಥನ ಧ್ಯಾನ ಮತ್ತು 'ಮೇಜು ಮತ್ತು ಬಡಗಿ' ಎಂಬ ಪ್ರಬಂಧ ಸಂಕಲನಗಳಲ್ಲಿ ಸಂಸ್ಕೃತಿ, ಇಲ್ಲಿನ ಪರಿಸರದ ಕುರಿತ ವೈದೇಹಿಯವರ ಕಾಳಜಿ ತೆರೆದುಕೊಂಡಿವೆ.

ವಿವಾಹದ ಬಳಿಕ ಕರಾವಳಿಯ ತವರಿನಿಂದ ಮಲೆನಾಡಿನ ಗಂಡನ ಮನೆಗೆ ಹೋದ ವೈದೇಹಿಯವರಿಗೆ ದೊರೆತ ಜೀವನಾನುಭವ ಇನ್ನೊಂದೇ ಬಗೆಯದು. ಕುಟುಂಬದ ಒಲುಮೆ, ತಾಯ್ತನದ ಸವಿಯ ಜೊತೆಗೆ ಅನಂತಮೂರ್ತಿ, ಲಂಕೇಶ್, ತೇಜಸ್ವಿ ಕೃತಿಗಳ ಓದು, ಬರವಣಿಗೆಗೆ ಲಂಕೇಶ್ ಪತ್ರಿಕೆಯ ಒತ್ತಾಸೆ, ಅನುಪಮಾ ನಿರಂಜನರ ಪ್ರೋತ್ಸಾಹ ಹಾಗೂ ನೀನಾಸಂನ ರಂಗಭೂಮಿ ಚಟುವಟಿಕೆಗಳು ವೈದೇಹಿಯವರ ಒಳಗಿನ ಸೃಜನಶೀಲ ಮುಖವು ಅನಾವರಣಗೊಳ್ಳಲು ಕಾರಣವಾದವು. ಅವರೊಳಗೆ ಅವಿತಿಟ್ಟುಕೊಂಡಿದ್ದ ಮಗುತನ ಮತ್ತು ರಂಗಭೂಮಿಯ ಪ್ರತಿಭೆ ಇವು ಹನ್ನೆರಡು ಮಕ್ಕಳ ನಾಟಕಗಳ ರಚನೆಯ ಮೂಲಕ ಹೊರಹೊಮ್ಮಿದವು.

ಇವುಗಳ ಜೊತೆಗೆ ವೈದೇಹಿಯವರು ಬಾಳಸಂಜೆಯಲ್ಲಿದ್ದ ಕೋಟ ಲಕ್ಷ್ಮೀನಾರಾಯಣ ಕಾರಂತರು, ಸೇಡಿಯಾಪು ಕೃಷ್ಣಭಟ್ಟರು, ಬಿ. ವಿ. ಕಾರಂತರು, ಸರಸ್ವತಿ ಬಾಯಿ ರಾಜವಾಡೆಯವರಂಥ ಸಾಧನಾಶೀಲರ ಬದುಕಿನ ನೆನಪುಗಳನ್ನು ಸಂಗ್ರಹಿಸಿ ಕಟ್ಟಿಕೊಟ್ಟಿದ್ದಾರೆ.

ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಬರೆದ ಅಲಕ್ಷಿತವಾಗಿದ್ದ ಮಹಿಳೆಯರ ಕೊಡುಗೆಯನ್ನು ಅಧಿಕೃತವಾಗಿ ದಾಖಲಿಸುವ Indian women struggle for freedom ಎಂಬ ಕೃತಿಯನ್ನು 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' ಎಂದು, ಮೈತ್ರೇಯಿ ಮುಖ್ಯೋಪಾಧ್ಯಾಯ ಅವರ ವಿವಿಧ ವಲಯಗಳಲ್ಲಿ ಭಾರತದ ಮಹಿಳೆಯರ ಸ್ಥಿತಿಗತಿಗಳನ್ನು ಹೇಳುವ ಸ್ವಾತಂತ್ರ್ಯೋತ್ತರ ಕಾಲಘಟ್ಟದ ಮಹಿಳಾ ಪುನರುತ್ಥಾನದ ಎರಡನೆಯ ಹಂತಕ್ಕೆ ಸಂಬಂಧಿಸಿದ Silver shackles ಎಂಬ ಕೃತಿಯನ್ನು ಬೆಳ್ಳಿಯ ಸಂಕೋಲೆಗಳು ಎಂಬುದಾಗಿ ಕನ್ನಡಕ್ಕೆ ತಂದಿದ್ದಾರೆ.

ಕನ್ನಡದ ಹೆಸರಾಂತ ಕಥೆಗಾರರಲ್ಲಿ ಮಿತ್ರಾ ವೆಂಕಟ್ರಾಜ್‌ರವರು ಒಬ್ಬರು. ಕಳೆದ ನಾಲ್ಕು ದಶಕಗಳಿಂದ ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿರುವ ಅವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಇವರು ಜುಲೈ ೧೯೪೮ ರಂದು ಕುಂದಾಪುರದಲ್ಲಿ ಜನಿಸಿದರು. ಇವರ ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಿದವರು ಗುಂಡ್ಮಿ ಚಂದ್ರಶೇಖರ ಐತಾಳರು.

ತಮ್ಮೊಳಗೆ ಕತೆಗಳ ಕಣಜವನ್ನು ಇಟ್ಟುಕೊಂಡ ಅಮ್ಮ, ಅಜ್ಜಿ, ದೊಡ್ಡಮ್ಮಂದಿರ ಕಾದಂಬರಿ ಕತೆಗಳ ಮೂಲಪ್ರೇರಣೆಯಾದರು. ಬರವಣಿಗೆ ಎನ್ನುವುದು ಮಿತ್ರಾ ವೆಂಕಟ್ರಾಜ್‌ರವರ ಮಟ್ಟಿಗೆ ಸಹಜವಾಗಿ ಸರಳವಾಗಿ ಮೂಡಿ ಬರುವಂತಹದ್ದು. ಕತೆ ಬರೆಯುವುದೆಂದರೆ ಸರಳವಾಗಿ ಅದು ತನ್ನ ಮಟ್ಟಿಗೆ ಒಂದು ಶೋಧ ದರ್ಶನ. ಒಂದು ಬಿಡುಗಡೆ, ಹೊರಬರಲೇಬೇಕಾದ ತನ್ನೊಳಗಿನ ಒತ್ತಡವೆನ್ನುತ್ತಾರೆ ಅವರು. ಇದುವೇ ಅವರ ಬರವಣಿಗೆಯ ಉದ್ದೇಶವೂ ಆಗಿದೆ. 'ರುಕುಮಾಯಿ' ಅವರ ಚೊಚ್ಚಲ ಕಥಾ ಸಂಕಲನ.

ಹಕ್ಕಿ ಮತ್ತು ಅವಳು, ಮಾಯಕದ ಸತ್ಯ ಕಥಾಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ "ಪಾಚಿ ಕಟ್ಟಿದಪಾಗಾರ' ಕಾದಂಬರಿಯು ಬೆಳಕು ಕಂಡಿದೆ. ಗ್ರಾಮೀಣ ಸಾಂಸ್ಕೃತಿಕ ಪರಿಸರ ಹಾಗೂ ಮುಂಬೈ ಮಹಾನಗರದ ಜೀವನದ ಅನುಭವಗಳನ್ನು ಅವರು ತಮ್ಮ ಕೃತಿಗಳಲ್ಲಿ ಕಲಾತ್ಮಕವಾಗಿ ಸೆರೆಹಿಡಿದಿದ್ದಾರೆ. ಮಿತ್ರಾ ವೆಂಕಟ್ರಾಜ್ ಅವರ ಕೃತಿಗಳಲ್ಲಿ ಸ್ತ್ರೀ ದನಿ, ಮಹಿಳಾ ಜಗತ್ತು ಚೆನ್ನಾಗಿ ಮೂಡಿಬಂದಿದೆ.

ಗ್ರಾಮೀಣ ಹಾಗೂ ನಗರ ಜೀವನ ಕ್ರಮದಲ್ಲಾದ ಪಲ್ಲಟ. ಮನುಷ್ಯನ ಸ್ವಭಾವದ ವಿವಿಧ ಪರಿಗಳು ಅವರ ಕೃತಿಗಳಲ್ಲಿ ಸೊಗಸಾಗಿ ಅನಾವರಣಗೊಂಡಿದೆ. ಮಿತ್ರಾ ವೆಂಕಟ್ರಾಜ್‌ರ ಕತೆಗಳು ಸ್ತ್ರೀ ಪಾತ್ರ ಪ್ರಧಾನ ಕತೆಗಳು, ಹೆಚ್ಚಿನ ಕತೆಗಳ ನಿರೂಪಕರು ಮಹಿಳೆಯರು, ಹೊಸ ತಲೆಮಾರಿನ ಮಹಿಳೆಯರ ಅಂತರಂಗದ ಮಹಾಯುದ್ಧಗಳನ್ನು ಅರ್ಥಮಾಡಿಕೊಳ್ಳುವ ರೀತಿಯ ಕಥಾವಿನ್ಯಾಸ ಇವರ ಕತೆಗಳಲ್ಲಿದೆ. ಕರ್ನಾಟಕದ ಕರಾವಳಿಯ ಕುಂದಾಪುರ ತಾಲೂಕಿನ ಗ್ರಾಮೀಣ ಪ್ರದೇಶದ ಮಹಿಳೆಯರನ್ನು ಲೇಖಕಿ ಚಿತ್ರಿಸಿದ್ದಾರೆ.

ಮಂಗಳೂರಿನ ಕಡಲ ತಡಿಯ ತುಳುನಾಡಿನವರಾದ ಡಾ. ಎಚ್ ನಾಗವೇಣಿಯವರು 'ನಾಕನೇ ನೀರು', 'ಮೀಯುವ ಆಟ', 'ವಸುಂಧರೆಯ ಗ್ಯಾನ', ಕಥಾಸಂಕಲನಗಳನ್ನು ಹಾಗೂ 'ಗಾಂಧಿ ಬಂದ' ಕಾದಂಬರಿಯನ್ನು ಬರೆದಿದ್ದಾರೆ.

ನಾಗವೇಣಿಯವರ ಕೃತಿಗಳ ಹಿಂದಿನ ಪ್ರೇರಣೆ ತಾಯಿ ಹಾಡುತ್ತಿದ್ದ ಹೇಳುತ್ತಿದ್ದ. 'ಪಾಡ್ದನ', 'ಸಂಧಿ' ಮತ್ತು 'ಉರೋಲ್', ಹಾಗೂ ತುಳು ಸಂಸ್ಕೃತಿಯ ಕಥನಗಳಂತೆ, ಪ್ರಾದೇಶಿಕ ಸಂಸ್ಕೃತಿ ಪ್ರಧಾನವಾಗಿ ನಾಗವೇಣಿಯವರ ಕೃತಿಗಳು ರೂಪತಾಳಿವೆ. ಪಾಡ್ದನಗಳು ತುಳು ಜನಪದ ಸಾಹಿತ್ಯದ ಒಂದು ವಿಶೇಷ ಪ್ರಕಾರ.

ತುಳುನಾಡಿನ ನಂಬಿಕೆ, ನಡವಳಿಕೆ, ಆಚಾರ ವಿಚಾರ, ಕಟ್ಟು ಕಟ್ಟಳೆ, ವಿಧಿ ನಿಷೇದ, ಆರಾಧನೆ, ಆಚರಣೆ, ಯುದ್ಧ, ಬೇಟೆ, ಕ್ರೀಡೆ, ನ್ಯಾಯ, ಆರ್ಥಿಕ, ರಾಜಕೀಯ, ಸಾಮಾಜಿಕ ಸ್ಥಿತಿ, ಜಾತಿ, ಬಂಧುತ್ವ ಹೆಣ್ಣು ಗಂಡಿನ ಸಂಬಂಧ, ಸಂಘರ್ಷಗಳನು ಸಮಗ್ರವಾಗಿ ಪ್ರಕಟಿಸುವ ಮೌಖಿಕ ದಾಖಲೆಗಳಾಗಿವೆ. ಕಥನಗಳಲ್ಲಿನ ವಿವರಗಳು ತುಳುನಾಡಿನ ಕೆಳವರ್ಗದ ಜನಜೀವನಕ್ಕೆ ಕನ್ನಡಿ ಹಿಡಿದಂತೆ ಚಿತ್ರಣಗೊಂಡಿವೆ. ನಾಗವೇಣಿಯವರ ಕಥನಗಳಲ್ಲಿ ಸ್ತ್ರೀತನದ, ಸ್ತ್ರೀಪರವಾದ ಕಾಳಜಿಗಳು ಅನಾವರಣಗೊಂಡಿವೆ.

ಅನುಪಮಾ ಪ್ರಸಾದ್‌ರವರು ಅಕ್ಟೋಬರ್ ೭, ೧೯೭೧ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿ ಜನಿಸಿದರು. ಅನುಪಮಾರವರು ಗೃಹಿಣಿಯಾಗಿದ್ದುಕೊಂಡು ಸಾಹಿತ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಾರೆ. ಕಥೆ, ನಾಟಕ ರಚನೆ, ಹಾಗೂ ಕಾದಂಬರಿ ಇವರ ಆಸಕ್ತಿಯ ಕ್ಷೇತಗಳು. ಸಾಮಾಜಿಕ ಬದುಕಿನ ರೀತಿ ನೀತಿ, ಕ್ರೌರ್ಯ, ಅಮಾನವೀಯ ಘಟನೆಗಳು ತೀವ್ರವಾಗಿ ಮನಸ್ಸನ್ನು ತಟ್ಟಿದಾಗ ಅದರಿಂದಾಗುವ ಮಾನಸಿಕ ಒತ್ತಡವೇ ಇವರ ಬರವಣಿಗೆಯ ಮೂಲ ಪ್ರೇರಣೆ.

ಶ್ರೇಷ್ಠ ಕಥೆಗಾರ, ಚಿಂತಕ ಎಂ. ವ್ಯಾಸರಿಂದ ದೊರೆತ ಮೆಚ್ಚುಗೆಯ ನುಡಿ ಹಾಗೂ ಅವರು ಭೌತಿಕವಾಗಿ ಇಲ್ಲವಾಗುವುದಕ್ಕೂ ಕೆಲವು ದಿನಗಳ ಮೊದಲು ನಿನಗೆ ಬರವಣಿಗೆಯಲ್ಲಿರುವ ಹಿಡಿತವನ್ನು ಗಂಭೀರವಾಗಿ ಪರಿಗಣಿಸು, ಹೇಳಬೇಕೆನಿಸಿದ್ದನ್ನು ಹೇಳಲು ಹಿಂಜರಿಯಬೇಡ ಎಂದ ಕಿವಿ ಮಾತು ತನ್ನ ಬರವಣಿಗೆಗೆ ಸ್ಫೂರ್ತಿ ನೀಡುತ್ತದೆ ಎನ್ನುತ್ತಾರೆ. ಒಪ್ಪಿತ ವ್ಯವಸ್ಥೆಯಲ್ಲಿರುವ ಕೊರತೆಗಳನ್ನು ಕಣ್ಣಿಗೆ ಕಟ್ಟುವಂತೆ ಬಿಚ್ಚಿಡುವ ಬಗ್ಗೆ ಅದೇ ಪಿತೃಪ್ರಧಾನ ವ್ಯವಸ್ಥೆಯ ಪಾಳೇಗಾರಿ ಅಹಮಿಕೆ, ಅಸಮಾಧಾನ ತೋರಿದ್ದಿದೆ ಎಂದಿದ್ದಾರೆ. ಕರಾವಳಿಯಲ್ಲಿ ಮಹಿಳಾ ಧ್ವನಿ ಆಶಾದಾಯಕ ಹಾದಿಯಲ್ಲಿದೆಯಾದರೂ ಇನ್ನಷ್ಟು ಬಲವಾಗಬೇಕು, ಕ್ರಿಯಾಶೀಲವಾಗಬೇಕು. ಸ್ತ್ರೀ ಸಮಾನತೆ ಲಿಂಗಬೇಧವಿಲ್ಲದೆ ಸಮಪಾಲು, ಸಮಬಾಳು, ಸಮಗೌರವ, ಸಮಾನಜವಾಬ್ದಾರಿ ಎಂಬ ತಾತ್ವಿಕತೆಯ ತಳಹದಿಯಲ್ಲಿ ಸಮಾಜ ಪುನಃ ನಿರ್ಮಾಣವಾಗಬೇಕು ಎಂಬ ನಂಬಿಕೆಯನ್ನು ನಾನು ಗಟ್ಟಿಗೊಳಿಸಿಕೊಂಡಿರುವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

### ೨.೪ ಭಾರತೀಯ ಸ್ತ್ರೀವಾದಿ ಚಿಂತನೆಗಳ ಸಾರ ಮತ್ತು ಪ್ರತಿರೋಧದ ವಿಭಿನ್ನ ಸ್ವರೂಪಗಳು

ಸ್ತ್ರೀವಾದವು ಮೂಲತಃ ಪಾಶ್ಚಾತ್ಯ ಪರಿಕಲ್ಪನೆಯಿಂದ ಹುಟ್ಟಿಕೊಂಡದ್ದು. ಇಂಗ್ಲೆಂಡ್ ಮತ್ತು ಯೂರೋಪ್‌ಗಳಲ್ಲಿ ಪ್ರಾರಂಭವಾದ ಈ ಔದ್ಯೋಗಿಕ ಕ್ರಾಂತಿ ಸರ್ವಸಮಾನತಾವಾದಿ ರಾಜಕೀಯ ಆದರ್ಶಗಳು ಅಲ್ಲೆಲ್ಲ ಸ್ತ್ರೀವಾದಿ ಆಲೋಚನೆಗಳು ಹುಟ್ಟಲು ಮುಖ್ಯ ಪ್ರೇರಕಗಳಾದವು. ಸ್ತ್ರೀವಾದದ ಮೂಲಭೂತ ಪರಿಕಲ್ಪನೆಗಳಾದ ಸಮಾನತೆ, ಸ್ವಾತಂತ್ರ್ಯ ಮುಂತಾದ ಅಭಿಪ್ರಾಯಗಳು ಮೊದಮೊದಲು ಪ್ರಾರಂಭವಾದದ್ದು ಫ್ರಾನ್ಸ್‌ನಲ್ಲಿ. ಮುಂದೆ ಸ್ತ್ರೀವಾದವು ಚಳವಳಿಯಾಗಿ ವ್ಯಾಪಿಸಿ ಮಹಿಳೆಯರಿಗೆ ಶಿಕ್ಷಣವನ್ನು ಕಡ್ಡಾಯಗೊಳಿಸಿದ್ದರಿಂದ ಅವರು ಶಿಕ್ಷಣವನ್ನು ಪಡೆಯುವಂತಾಯಿತು. ಇದರಿಂದ ಮಹಿಳೆಯರು ಪ್ರಜ್ಞಾವಂತರಾಗಿ ತಂತಮ್ಮ ಹಕ್ಕು ಬಾಧ್ಯತೆಗಳಿಗಾಗಿ, ಅವಕಾಶಗಳಿಗಾಗಿ ಹೋರಾಡತೊಡಗಿದರು.

ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದ ಉಗಮವಾಗುವುದಕ್ಕೆ ಮತ್ತು ವಿಪುಲವಾಗಿ ಬೆಳೆದು ಬರುವುದಕ್ಕೆ ಅಲ್ಲಿನ ಮಹಿಳಾ ಸಂಘಟನೆಗಳು, ಮಹಿಳಾ ಚಳುವಳಿಗಳು, ಮಹಿಳೆಯರ ಶಿಕ್ಷಣ ಮುಂತಾದವು ಕಾರಣ. ಅಲ್ಲಿನ ಸ್ತ್ರೀವಾದಿಗಳು ತಮ್ಮ ಕೃತಿಗಳಲ್ಲಿ ಸ್ತ್ರೀವಾದಿ ಚಿಂತನೆಗಳನ್ನು ತಮ್ಮ

ಸಾಹಿತ್ಯದ ರಚನೆಗಳಲ್ಲಿ ಅಭಿವ್ಯಕ್ತಪಡಿಸಿದ್ದು, ಸ್ತ್ರೀವಾದ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರ ವಹಿಸಿದೆ ಎನ್ನಬಹುದು. ಸ್ತ್ರೀವಾದದ ದೃಷ್ಟಿಕೋನಗಳಿಂದ ಅನೇಕ ಮಾಸಪತ್ರಿಕೆಗಳು, ವಾರಪತ್ರಿಕೆಗಳು ಉದಯಿಸಿದವು. ಇವು ಮಾತ್ರವಲ್ಲದೆ ಸ್ತ್ರೀವಾದಿ ನೆಲೆಯಿಂದ ಹಲವಾರು ಲೇಖನಗಳು ಪ್ರಾರಂಭದಿಂದಲೇ ಪ್ರಕಟವಾದವು. ಅಂದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಸ್ತ್ರೀವಾದವನ್ನು ಬೆಳೆಸುವಲ್ಲಿ ಸಾಹಿತ್ಯವು ಅಪಾರವಾದ ಕೆಲಸ ಮಾಡಿದೆ ಎನ್ನಬಹುದು.

ಜಾಗತಿಕ ಮಟ್ಟದ ಈ ಎಲ್ಲ ವಿದ್ಯಮಾನಗಳಿಗೆ ಪೂರಕವಾಗಿ ಹಲವರು ಸ್ತ್ರೀವಾದಿ ಚಿಂತಕಿಯರು ತಮ್ಮ ಚಿಂತನೆಗಳನ್ನು ಕೃತಿಗಳ ರೂಪದಲ್ಲಿ ಪ್ರಕಟಿಸಲಾರಂಭಿಸಿದರು. ಬೆಟಿಫ್ರೈಡನ್ ಎಂಬವರು 'Feminine mystique' ಎಂಬ ಕೃತಿಯನ್ನು ರಚಿಸಿದರು. ಪಿತೃಪ್ರಧಾನ ವ್ಯವಸ್ಥೆಯಲ್ಲಿದ್ದ ಸ್ತ್ರೀವಿರೋಧಿ ಮೌಲ್ಯಗಳು ಹಾಗೂ ಇವುಗಳ ಸಾಂಪ್ರದಾಯಿಕವಾದ ಮಾದರಿಗಳಲ್ಲೇ ತೊಳಲಾಡುತ್ತಿದ್ದ ಮಹಿಳೆಯರ ಸಂಕಷ್ಟಗಳೇ ಈ ಕೃತಿಯ ಕೇಂದ್ರ ವಿಷಯವಾಗಿತ್ತು. ಮೊದಲ ಹಂತದಲ್ಲಿ ಮಹಿಳೆಯರು ತಮ್ಮ ಹಕ್ಕುಬಾಧ್ಯತೆಗಳ ಬಗ್ಗೆ ಕನಿಷ್ಠ ಪ್ರಮಾಣದಲ್ಲಿ ಮಾತ್ರ ಹೋರಾಡಿದರೆ ಅನಂತರದಲ್ಲಿ ಸಮಾನ ಹಕ್ಕು, ಉದ್ಯೋಗಾವಕಾಶ, ಆಸ್ತಿಯ ಹಕ್ಕು, ತಮ್ಮ ತಾಯ್ತನದ ಆಯ್ಕೆಯನ್ನು ತಾವೇ ನಿರ್ಣಯಿಸುವಿಕೆಯ ಹಕ್ಕು ಮುಂತಾದ ಕೋರಿಕೆಗಳನ್ನು ಅಂದಿನ ಸರ್ಕಾರದ ಮುಂದಿಟ್ಟರು. ಲಿಂಗತಾರತಮ್ಯ, ಸ್ತ್ರೀವಾದ, ಪುರುಷಾಧಿಕಾರ ಮುಂತಾದ ಪದಗಳು ಆಯಾಯ ದೇಶಗಳ ಭಾಷೆಗಳಲ್ಲಿ ದಿನದಿನ್ನದ ಬಳಕೆಯಲ್ಲಿ ಬಂದವು. ಸ್ತ್ರೀವಾದಿ ಚಳವಳಿಯ ಪುನರುಜ್ಜೀವನದಿಂದ ಆಯಾಯ ಸಮಾಜಗಳಲ್ಲಿ ಗುರುತಿಸತಕ್ಕ ಬದಲಾವಣೆಗಳಾಗತೊಡಗಿದವು. ಹೀಗೆ ಸ್ತ್ರೀವಾದ ಇಪ್ಪತ್ತನೆಯ ಶತಮಾನದ ಒಂದು ಮಹತ್ತರವಾದ ಹಾಗೂ ಜಗತ್ತಿನ ಆಸಕ್ತಿಯನ್ನು ತನ್ನೆಡೆ ಸೆಳೆದುಕೊಂಡಿರುವ ವಿಷಯವಾಗಿ ಬೆಳೆಯಿತು. ಇಂದು ಅನೇಕ ಸಾಂಸ್ಕೃತಿಕ, ರಾಜಕೀಯ ಗುಂಪುಗಳೂ ಕೂಡ ಸ್ತ್ರೀವಾದದ ವಿಚಾರಗಳನ್ನು ಬಳಸಿಕೊಂಡೇ ಕೆಲಸ ಮಾಡುವಷ್ಟು ಸ್ತ್ರೀವಾದ ಬೆಳೆಯುತ್ತಿದೆ.

"ಹೊಸದಾಗಿ ಧಾರ್ಮಿಕ ಪ್ರಜ್ಞೆ ಜಾಗೃತವಾದಾಗ ಇರುವ ತೀವ್ರತೆ ಮತ್ತು ಉದ್ರೇಕ ಸ್ತ್ರೀನಿಷ್ಠ ವಿಮರ್ಶೆ ಮತ್ತು ಸ್ತ್ರೀವಾದೀ ಬರವಣಿಗೆಯಲ್ಲಿ ಕಾಣುತ್ತದೆ"[೩೫] ಎಂದು ಎಲ್ವೆನ್ ಶೊವಾಲ್ಟರ್ ಹೇಳುತ್ತಾಳೆ. ಅಲ್ಲದೆ ಇವಳ ಪ್ರಕಾರ 'ಸ್ತ್ರೀವಾದಕ್ಕೆ ಒಬ್ಬ ತಾಯಿ ಇಲ್ಲ' ಆದರೆ "ವರ್ಜಿನಿಯಾ ವೂಲ್ಫ್ – ಸ್ತ್ರೀನಿಷ್ಟ ವಿಮರ್ಶೆಯ ಆದ್ಯರಲ್ಲಿ ಒಬ್ಬಳು"[೩೬] ಎನ್ನಬಹುದು.

ಆದರೂ ಸ್ತ್ರೀವಾದವನ್ನು ಕುರಿತು ಚಿಂತಿಸಿದವರಲ್ಲಿ 'ಸಿಮೋನ್ ದ ಬೊವಾ'ಳನ್ನು ಗುರುತಿಸಬಹುದು. ಈಕೆ ರಚಿಸಿದ ಕೃತಿಯಾದ "ದಿ ಸೆಕೆಂಡ್ ಸೆಕ್ಸ್" ಕೃತಿಯಲ್ಲಿ (೧೯೪೯) ತೀರ್ವವಾದ ಧೋರಣೆಯನ್ನು ಮಂಡಿಸಿದಳು. ಹೆಣ್ಣಿನ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಕುರಿತು ಅಧ್ಯಯನ ಮಾಡುವ ಮಹತ್ವದ ಕೃತಿಯಾದ ಇದರಲ್ಲಿ "ಕೇವಲ ಪುರುಷನನ್ನು ಮಾತ್ರ 'ಕರ್ತೃ' ಎಂದು ತಿಳಿಯಲಾಗಿದೆ. ಸಾಮಾಜಿಕ ಮತ್ತು ಸಾಂಸ್ಕೃತಿಕ ವಲಯಗಳಲ್ಲಿ ಪುರುಷನಿಗೆ ಮಾತ್ರ ಪ್ರಾಧಾನ್ಯವಿದೆ; ಹೆಣ್ಣನ್ನು 'ಅನ್ಯ' ಎಂದು ಭಾವಿಸಲಾಗಿದೆ; ಪುರುಷ ಮಾತ್ರ ಮನುಷ್ಯ ಕುಲದ ಪ್ರತಿನಿಧಿ ಎಂಬ ತಿಳುವಳಿಕೆ ಇದೆ; ಪುರುಷ ಲೇಖಕರ ಬರವಣಿಗೆಯಲ್ಲಿ ಹೆಣ್ಣು ಕೇವಲ ಕೆಲವು ಮಾದರಿಗಳಲ್ಲಿ ಮಾತ್ರ ಚಿತ್ರಿತವಾಗಿದ್ದಾಳೆ"[೩೭] ಎಂದಿದ್ದಾರೆ.

ಇದೇ ರೀತಿ 'ಸ್ತ್ರೀವಾದ' ಕುರಿತು ಚಿಂತಿಸಿದ ಲೇಖಕಿಯರಲ್ಲಿ "ಅಮೇರಿಕಾದ 'ಮೇರಿ ಎಲ್ಮಿನ್' ಕೂಡ ಒಬ್ಬರು. ಇವರು ತಮ್ಮ ಕೃತಿಯಾದ 'ಥಿಂಕಿಂಗ್ ಅಬೌಟ್ ವಿಮೆನ್' (೧೯೬೮) ಪುಸ್ತಕದಲ್ಲಿ ಪುರುಷರಿಂದ ರಚಿತವಾದ ಸಾಹಿತ್ಯ ಕೃತಿಗಳು ಹೆಣ್ಣನ್ನು ನಿಂದನಾತ್ಮಕ ಸಿದ್ಧ ಮಾದರಿಗಳಲ್ಲೇ ಚಿತ್ರಿಸುವುದನ್ನು ಮತ್ತು ಇತರ ಕೆಲವು ಲೇಖಕಿಯರು ಪ್ರತಿಪಾದಿಸುವ ಪರ್ಯಾಯ ಧೋರಣೆ ಹಾಗೂ ಕ್ರಾಂತಿಕಾರಿ ನಿಲುವುಗಳನ್ನು ವಿವರಿಸಿದರು".[೩೮]

ಇವರಲ್ಲದೆ 'ಕೇಟ್ಮಿಲೆಟ್' ತನ್ನ 'ಸೆಕ್ಸುಯಲ್ ಪಾಲಿಟಿಕ್ಸ್' ಗ್ರಂಥದಲ್ಲಿ "ಪಾಶ್ಚಾತ್ಯ ಸಮಾಜದ ವಿನ್ಯಾಸ ಮತ್ತು ಸಾಮಾಜಿಕ ಸಂಸ್ಥೆಗಳೆಲ್ಲ ಗಂಡಿನ ಹಿರಿಮೆ ಮತ್ತು ಹೆಣ್ಣಿನ ಅಧೀನತೆಯನ್ನು ಮುಂದುವರೆಸುವ ಉದ್ದೇಶಗಳನ್ನು ಹೊಂದಿವೆ ಎಂದು ಪ್ರತಿಪಾದಿಸಿದಳು"[೩೯] ಎನ್ನುವಾಗ ಜಗತ್ತಿನ ಯಾವುದೇ ಮೂಲೆಗೆ ಹೋದರೂ ಹೆಣ್ಣಿನ ಮೇಲೆ ನಡೆಯುವ ಕ್ರೌರ್ಯಗಳು ಒಂದೇ ಮಾದರಿಯಲ್ಲಿವೆ ಎಂಬುದು ಈಕೆಯ ಮಾತುಗಳಿಂದ ತಿಳಿಯುತ್ತದೆ.

ಸ್ತ್ರೀವಾದದ ಅರ್ಥ ಮತ್ತು ವ್ಯಾಪ್ತಿಯ ಬಗ್ಗೆ ಹಲವರು ಭಾರತೀಯ ಸ್ತ್ರೀವಾದಿ ಚಿಂತಕಿಯರು ಬಹುಮುಖ್ಯವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

**ಎಚ್. ಎಸ್. ಶ್ರೀಮತಿ** ಅವರು "ಕುಟುಂಬದ ಒಳಗಾಗಲಿ, ಹೊರಗಾಗಲಿ ಸಮಾಜ ಸ್ತ್ರೀಯ ಮೇಲೆ ನಡೆಸುವ ದಬ್ಬಾಳಿಕೆ ಹಾಗೂ ಶೋಷಣೆಯ ಸ್ವರೂಪವನ್ನು ಅರ್ಥಮಾಡಿಕೊಂಡು, ಅಂತಹ ಪರಿಸ್ಥಿತಿಯ ನಿವಾರಣೆಗಾಗಿ ಪ್ರಜ್ಞಾಪೂರ್ವಕವಾಗಿ ನಡೆಸುವ ಚಿಂತನೆ ಹಾಗೂ ಚಟುವಟಿಕೆಗಳು"[೪೦]

(೧೯೯೯:೮) ಸ್ತ್ರೀವಾದ ಎನ್ನುತ್ತಾರೆ. ಅಂದರೆ ಮಹಿಳೆಯರ ಸರ್ವತೋಮುಖ ಪ್ರಗತಿಗಾಗಿ ಉದ್ದೇಶಪೂರ್ವಕವಾಗಿ ನಡೆಸುವ ಎಲ್ಲಾ ಬಗೆಯ ಚಿಂತನೆ ಹಾಗೂ ಚಟುವಟಿಕೆಗಳನ್ನು ಸ್ತ್ರೀವಾದವು ಬೆಂಬಲಿಸುತ್ತದೆ. ಇದು ಯಾವ ರೂಪದಲ್ಲಾದರೂ ಕಂಡುಬರಬಹುದು.

ಸ್ತ್ರೀವಾದವೆಂಬುದು ಬದುಕಿನ ಒಂದು ಜೀವನಕ್ರಮವೂ ಆಗಿದೆ ಎಂಬುದನ್ನು **ವಿಜಯಾ ದಬ್ಬೆ** ಅವರ "ಸ್ತ್ರೀವಾದ ನಮ್ಮ ಬದುಕಿನಲ್ಲಿ ಹೆಜ್ಜೆ ಹೆಜ್ಜೆಗೂ ನಮ್ಮೊಡನೆ ಬರುವಂಥದು. ಎಲ್ಲೋ ದೂರದಲ್ಲಿ ಯಾರೋ ತೆಗೆದುಕೊಳ್ಳುವ ನಿರ್ಣಯವಲ್ಲ. ಈಗಲೇ ಇಲ್ಲಿಂದಲೆ ನಾವೆಲ್ಲರೂ ಆಚರಿಸಬಹುದಾದ್ದು ಮತ್ತು ಆಚರಿಸಬೇಕಾದ್ದು"[೮೧] (೧೯೯೭-೮೦) ಎಂಬ ಮಾತು ಸಮರ್ಥಿಸುತ್ತದೆ. ಸ್ತ್ರೀವಾದ ಮತ್ತು ಸ್ತ್ರೀವಾದಿ ಚಿಂತನೆಗಳು ನಮ್ಮ ದಿನನಿತ್ಯದ ಬದುಕಿನ ವಿವಿಧ ಸ್ತರಗಳಲ್ಲಿ ಅಂತರ್ಗತವಾಗಿರುವ ವಿಚಾರಧಾರೆಯಾಗಿದೆ. ಕಥನ ಸಾಹಿತ್ಯ, ಕಾವ್ಯ, ನಾಟಕ ಹಾಗೂ ಜನಪದ ಸಾಹಿತ್ಯ-ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸ್ತ್ರೀವಾದಿ ಚಿಂತನೆಗಳು ಅಡಕವಾಗಿರುವುದನ್ನು ಕಾಣಬಹುದು. ಇವುಗಳ ಆಧಾರದಲ್ಲಿ ಹೆಚ್ಚಿನ ಕಡೆಗಳಲ್ಲಿ ಮಹಿಳೆಯರ ಸ್ಥಿತಿಯನ್ನು ಪ್ರಗತಿಯ ಕಡೆಗೆ ಕೊಂಡೊಯ್ಯುವ ಬಗ್ಗೆ ಚರ್ಚೆಗಳು ಹೆಚ್ಚುತ್ತಿವೆ. ಈ ಹಿನ್ನೆಲೆಯಿಂದ ನೋಡಿದಾಗ ಸ್ತ್ರೀವಾದವು ಸ್ತ್ರೀಯರ ಪರವಾಗಿ ನಿಲ್ಲುವ ಒಂದು 'ಪ್ರಜ್ಞಾವಂತಿಕೆ' ಎಂದು ಹೇಳಬಹುದಾಗಿದೆ.

"ಸ್ತ್ರೀವಾದ ಕೇವಲ ಅಧ್ಯಯನ ಕುತೂಹಲದ ಶೈಕ್ಷಣಿಕ ವಿಷಯವಾಗಲೀ, ಕೇವಲ ವಿವಾದಗ್ರಸ್ತ ವಿಚಾರವಾಗಲೀ, ಕೇವಲ ಬೌದ್ಧಿಕ ಚರ್ಚೆಯ ವಸ್ತುವಾಗಲೀ ಅಲ್ಲ. ಅದು ನಮ್ಮ ದಿನನಿತ್ಯದ ಬದುಕನ್ನು ಅರ್ಥಮಾಡಿಕೊಳ್ಳುವ, ನಮ್ಮ ಸಂಸ್ಕೃತಿಯನ್ನು ಬದಲಾಯಿಸುವ ಸಲುವಾಗಿ ಅದನ್ನು ಪ್ರಶ್ನಿಸಿ, ವಿಮರ್ಶಿಸಿ, ವಿಶ್ಲೇಷಿಸುವ, ಎಡೆಮಾಡಿಕೊಳ್ಳುವ ಒಂದು ಹೋರಾಟ"[೮೨] ಈ ಉಲ್ಲೇಖವು ಸ್ತ್ರೀವಾದವು ಕೇವಲ ಒಂದು ವಿಚಾರಧಾರೆಯ ವಸ್ತುವಾಗದೆ, ಶೈಕ್ಷಣಿಕ ವಿಷಯಗಳ ಆಕರ್ಷಕ ವಸ್ತುವಾಗದೆ, ಅಧ್ಯಯನದ ಆಸಕ್ತಿಯ ವಿಷಯವಾಗದೆ, ಸಂಸ್ಕೃತಿ ಸೃಷ್ಟಿಸಿರುವ ವ್ಯವಸ್ಥೆಯನ್ನು ಬದಲಾಯಿಸಿ ಮೀಸಲಾತಿಯಂಥ ವಿಶೇಷ ಸೌಲಭ್ಯ, ಸಮಾನ ಅವಕಾಶ ಕಲ್ಪಿಸುವುದರ ಜೊತೆಗೆ ಮಹಿಳೆಯರಲ್ಲಿ ಪ್ರಜ್ಞಾವಂತಿಕೆಯ ಅರಿವಿನ ಜಾಗೃತಿಯನ್ನು ಉಂಟುಮಾಡುವಂಥ ಕಾರ್ಯಚಟುವಟಿಕೆ ಎಂಬುದನ್ನು **ತೇಜಸ್ವಿನೀ ನಿರಂಜನ** ಹಾಗೂ **ಸೀಮಂತಿನೀ ನಿರಂಜನ** ಅವರ ಮಾತುಗಳು ಸ್ಪಷ್ಟಪಡಿಸುತ್ತವೆ.

ಸ್ತ್ರೀಯರ ಸಮಾನತೆಯನ್ನೂ, ಅಭಿವೃದ್ಧಿಯನ್ನೂ ಒತ್ತಾಯಿಸುವ ಸಲುವಾಗಿ ಸ್ತ್ರೀವಾದವು ಅನಂತರದಲ್ಲಿ ಚಳುವಳಿಯಾಯಿತು. **ಪ್ರೇಮ ಶಿರ್ಕೆ** ಅವರು "ಸ್ತ್ರೀಯರು ತಾವಾಗಿಯೇ ತೀರ್ಮಾನಿಸಿ, ಅವರ ಇಷ್ಟದಂತೆ ಜೀವನವನ್ನು ನಡೆಸಿಕೊಂಡು ಹೋಗುವ ಒಂದು ಸಮಾಜವನ್ನು ರೂಪಿಸುವ ಕಾರ್ಯವೈಖರಿ ಯಾಗುವುದು. ಇದು ಸ್ತ್ರೀಯರ ನಡುವೆ ಹಲವು ಬದಲಾವಣೆಗಳನ್ನೇರ್ಪಡಿಸಿ ಅವರದೇ ಆದ ಗುರಿಗಳನ್ನು ತಲುಪಲು ಸಹಾಯಕವಾಗುವ ಚಳವಳಿಯ ಚಟುವಟಿಕೆಯಾಗುವುದು"[೪೩] ಎಂದು ಸ್ಪಷ್ಟಪಡಿಸಿದ್ದಾರೆ. ಅಂದರೆ ಸಮಾನತೆಗಾಗಿ ಚಳವಳಿಗಳನ್ನು ಹುಟ್ಟು ಹಾಕುವ, ಅನಗತ್ಯ ಪದ್ಧತಿಗಳನ್ನು ಬದಲಾಯಿಸಲು ಪ್ರಯತ್ನಪಡುವ ಕಾರ್ಯಚಟುವಟಿಕೆಯನ್ನು ಸ್ತ್ರೀವಾದವು ವಿಶಾಲವಾದ ಗ್ರಹಿಕೆಯಲ್ಲಿ ತನ್ನಲ್ಲಿ ಅಡಗಿಸಿಕೊಂಡಿದೆ. ಆದ್ದರಿಂದ ಸ್ತ್ರೀವಾದಿ ಚಳುವಳಿಯನ್ನು ಗಂಡು-ಹೆಣ್ಣಿನ ನಡುವೆ ಸಮಾನತೆಯನ್ನು ತಂದು ಅದರ ಬುನಾದಿಯ ಮೇಲೆ ಹೊಸ ಸಮಾಜವನ್ನು ಕಟ್ಟಲು ಇಷ್ಟಪಡುವ ಮಹಿಳೆಯರ ಚಳವಳಿ ಎನ್ನಬಹುದು.

ಇಂದಿನ ದಿನಗಳಲ್ಲಿ ಮಹಿಳೆಯರಿಗೆ ಸಾಮಾಜಿಕ, ರಾಜಕೀಯ ಹಾಗೂ ಇನ್ನಿತರ ಕ್ಷೇತ್ರಗಳಲ್ಲಿ ಒಂದಿಷ್ಟು ಅವಕಾಶಗಳು ಲಭ್ಯವಾಗುತ್ತಿವೆ. ಜೊತೆಗೆ ಆ ಅವಕಾಶಗಳ ಕುರಿತು ಅವರಲ್ಲಿ ಅರಿವನ್ನು ಉಂಟುಮಾಡಲಾಗುತ್ತಿದೆ. ಆದರೂ ಇಂದಿಗೂ ಅಸ್ತಿತ್ವದಲ್ಲಿರುವ ಪುರುಷಪ್ರಧಾನ ರೂಢಿಗತ ದೃಷ್ಟಿಕೋನವು ಮಹಿಳೆಯರ ಈ ಸಂದರ್ಭದಲ್ಲಿ ಯಾವ ರೀತಿ ಪರಿಣಾಮವನ್ನು ಬೀರುತ್ತಿದೆ ಎಂಬುದನ್ನು ಅರಿಯಬೇಕಾಗಿದೆ.

**ಬರಗೂರು ರಾಮಚಂದ್ರಪ್ಪ** ಅವರು ಸರಿಯಾಗಿ ಗುರುತಿಸಿರುವಂತೆ, "ಈಗ ಮಹಿಳೆ ಹೋರಾಡಬೇಕಾಗಿರುವುದು ಐದು ಸಾವಿರ ವರ್ಷಗಳ ಪುರುಷಪ್ರಧಾನ ಇತಿಹಾಸದೊಡನೆ. ಈ ಇತಿಹಾಸ ಕೀರ್ತಿಸುತ್ತಾ ಬಂದಿರುವ ಪುರುಷಪ್ರಧಾನ ವ್ಯವಸ್ಥೆಯ ಮೌಲ್ಯಗಳೊಡನೆ ಈ ಹೋರಾಟದ ಗೊತ್ತುಗುರಿಗಳ ಸ್ವರೂಪವನ್ನು ವಿವರಿಸುವುದೇ ಸ್ತ್ರೀವಾದವಾಗಿದೆ".[೪೪] ಇವು ಮಹಿಳೆಯರ ಅಭಿವೃದ್ಧಿಗೆ ಬಾಧಕವಾಗಿಯೇ ಇವೆ. ಹಾಗಾಗಿ ಮಹಿಳೆಯರಿಗೆ ಅಭಿವೃದ್ಧಿಯ ಸವಲತ್ತುಗಳನ್ನು ಒದಗಿಸಿಕೊಡಲು ಅವುಗಳ ವಿರುದ್ಧ ಹೋರಾಟ ನಡೆಸುವುದು ಅನಿವಾರ್ಯ. ಈ ಹೋರಾಟದ ಕೆಲವು ಮುಖ್ಯವಾದ ಆಶಯಗಳನ್ನು ವಿವರಿಸುವುದೇ ಸ್ತ್ರೀವಾದ ಎಂಬುದು ಈ ಮೇಲಿನ ವ್ಯಾಖ್ಯೆಯಿಂದ ತಿಳಿಯುತ್ತದೆ.

"ಸ್ತ್ರೀವಾದವೆನ್ನುವುದು ಬೌದ್ಧಿಕ ಕಸರತ್ತು ಏನಲ್ಲ, ಸ್ವಾಭಿಮಾನಿಯಾದ ಹೆಣ್ಣೊಬ್ಬಳು ತನ್ನ ಘನತೆ, ಗೌರವದ ಬಗ್ಗೆ ಜಾಗೃತಳಾಗಿ ತನ್ನ ಸುತ್ತಣ ಪರಿಸರದಿಂದಲೂ ಅಂತಹುದೇ ಪ್ರತಿಕ್ರಿಯೆಯನ್ನು ಬಯಸುವಂತಹುದಾಗಿದೆ. ಪ್ರಜ್ಞಾವಂತ ಪುರುಷರು ಸ್ತ್ರೀಯರಿಗೆ ತಕ್ಕ ಘನತೆ, ಗೌರವಗಳಿಂದ ಅವರನ್ನು ಕಾಣುವುದು ಕೂಡ ಸ್ತ್ರೀವಾದವಾಗುತ್ತದೆ".[೪೫] ಸ್ತ್ರೀ–ಪುರುಷರಿಬ್ಬರೂ ಸ್ವಾಭಿಮಾನಿಗಳಾಗಿದ್ದು, ಪರಸ್ಪರರನ್ನು ಘನತೆ, ಗೌರವಗಳಿಂದ ಕಾಣುವುದು ಮಾತ್ರವಲ್ಲ, ತಂತಮ್ಮ ಸುತ್ತಮುತ್ತಲಿನ ವಾತಾವರಣಗಳಿಂದ ಅದೇ ರೀತಿಯಾದ ಅಂಶಗಳನ್ನು ನಿರೀಕ್ಷಿಸುವುದೇ ಸ್ತ್ರೀವಾದ ಎಂಬುದು **ಎನ್. ಗಾಯತ್ರಿ** ಅವರ ಮಾತುಗಳಿಂದ ಸ್ಪಷ್ಟವಾಗುತ್ತದೆ.

ಹೆಚ್ಚು ಕಡಿಮೆ ಇದೇ ರೀತಿಯಾದ ಅಭಿಪ್ರಾಯವನ್ನು **ಡಾ. ಇಂದಿರಾ** (೧೯೯೫–೨) ಅವರು ವ್ಯಕ್ತಪಡಿಸುತ್ತಾರೆ. ಅವರು "ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಯಿದೆ ಎಂಬ ವಿಷಯದ ಬಗ್ಗೆ ಅರಿವನ್ನು ಮೂಡಿಸಿಕೊಂಡು ಸಮಾಜದ ವಿವಿಧ ಸಂಸ್ಥೆಗಳಲ್ಲಿ ಸ್ತ್ರೀಯರು ಎದುರಿಸುತ್ತಿರುವ ತಾರತಮ್ಯ, ದೌರ್ಜನ್ಯ ಹಾಗೂ ಶೋಷಣೆಗಳನ್ನು ಮನಗಂಡು ಈ ಪ್ರವೃತ್ತಿಗಳನ್ನು ಕೊನೆಗಾಣಿಸಲು ನಡೆಸುವ ಎಲ್ಲಾ ಉದ್ದೇಶಿತ ಪ್ರಾಮಾಣಿಕ ಪ್ರಯತ್ನಗಳನ್ನು ಸ್ತ್ರೀವಾದ ಎಂದು ಕರೆಯಬಹುದು"[೪೬] ಎಂದಿದ್ದಾರೆ. ಲಿಂಗಾಧಾರಿತ ಅಸಮನತೆಯನ್ನು ಹೋಗಲಾಡಿಸಿ ಅದರ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಮೂಡಿಸಿಕೊಂಡು ಸ್ತ್ರೀಯರ ವಿಮೋಚನೆಗಾಗಿ, ಸ್ವಾತಂತ್ರ್ಯ ಹಕ್ಕುಗಳಿಗಾಗಿ ನಡೆಸುವ ಹೋರಾಟವೇ ಸ್ತ್ರೀವಾದ ಎನಿಸಿಕೊಳ್ಳುತ್ತದೆ. ಈ ನಿಟ್ಟಿನಲ್ಲಿ ಸ್ತ್ರೀವಾದವೆಂಬುದು ಮಹಿಳೆಯ ಸಮಾನತೆ, ಗೌರವ, ಘನತೆ ಮುಂತಾದವುಗಳನ್ನು ಸಾಧಿಸುವ ದಿಕ್ಕಿನಲ್ಲಿ ಮನೆಯ ಒಳಗೆ ಮತ್ತು ಹೊರಗಿನ ಅವರ ಬದುಕು ಮತ್ತು ತಮ್ಮ ದೇಹದ ಮೇಲೆ ತಮ್ಮ ಹಿಡಿತವನ್ನು ಸಾಧಿಸಲು, ಆಯ್ಕೆಯ ಸ್ವಾತಂತ್ರ್ಯವನ್ನು ಪಡೆಯಲು ನಡೆಸುವ ಹೋರಾಟವೇ ಒಂದು ಚಳುವಳಿಯಾಗಿದೆ ಎಂಬುದು ಗಮನಾರ್ಹ.

ಮೇಲಿನ ಎಲ್ಲ ವಿವರಣೆ ಮತ್ತು ವ್ಯಾಖ್ಯೆಗಳನ್ನು ಕ್ರೋಢೀಕರಿಸಿದಾಗ ಸ್ತ್ರೀವಾದದ ಬಗ್ಗೆ ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಬಹುದು. ಸ್ತ್ರೀವಾದವು 'ಲಿಂಗತಾರತಮ್ಯವಿಲ್ಲದೆ ಮಾನವೀಯತೆಯಿಂದ ಜೀವಿಸಲು ಸಮಾನತೆಯನ್ನು ಕೋರುತ್ತದೆ. 'ಲಿಂಗಾಧರಿತ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಆಗುತ್ತಿರುವ ಅನ್ಯಾಯಗಳನ್ನು ಹೋಗಲಾಡಿಸಿ ಮುಕ್ತ ವಾತಾವರಣವನ್ನು ಸೃಷ್ಟಿ ಮಾಡಿಕೊಡುವುದು ಮತ್ತು ಸಾಮಾಜಿಕ ದುಷ್ಟ ಶಕ್ತಿಗಳಿಂದ ಮಹಿಳೆಯರನ್ನು ವಿಮೋಚನೆಗೊಳಿಸುವುದು' **ಸ್ತ್ರೀವಾದ** ಎನಿಸಿಕೊಳ್ಳುತ್ತದೆ.

ಪುರುಷಪ್ರಧಾನ ಗ್ರಹಿಕೆಯನ್ನು ಪ್ರಶ್ನಿಸಿ, ಸ್ತ್ರೀಯರನ್ನು ರೂಢಿಗತವಾದ ಸಾಂಪ್ರದಾಯಿಕ ಕಟ್ಟುಪಾಡುಗಳ ಚೌಕಟ್ಟಿಗೆ ಒಳಪಡಿಸದೆ, ಅವರ ಮೇಲೆ ಬಲವಂತವಾಗಿ ತಾಯ್ತನವನ್ನು ಹೇರದೆ, ಪುರುಷ ಪ್ರಾಧಾನ್ಯ ಧೋರಣೆಯಿಂದಾಗಿ ಮನೆಯಿಂದ ಆರಂಭಿಸಿ ಅವರು ನೌಕರಿ ಮಾಡುತ್ತಿರುವ ಕಛೇರಿಯವರೆಗೂ ದಿನನಿತ್ಯ ನಡೆಯುತ್ತಿರುವ ಲೈಂಗಿಕ ಕಿರುಕುಳ, ಶೋಷಣೆ, ಲಿಂಗಾಧಾರಿತ ಅಸಮಾನತೆ, ತಾರತಮ್ಯಗಳನ್ನು ಮಹಿಳೆಯರ ಗುಲಾಮತನವನ್ನು ಹೋಗಲಾಡಿಸಬೇಕು. ಹಕ್ಕುಬಾಧ್ಯತೆಗಳು, ಸೌಕರ್ಯಗಳು, ಅವಕಾಶಗಳು ಪುರುಷರಂತೆಯೇ ಸ್ತ್ರೀಯರಿಗೂ ಸರಿಸಮಾನವಾಗಿ ಸಿಗಬೇಕು. ಅದಕ್ಕಾಗಿ ಹಾಗೂ ಸ್ತ್ರೀಸ್ವಾತಂತ್ರ್ಯದ ಹಕ್ಕುಗಳಿಗಾಗಿ ನಡೆಸುವ ಹೋರಾಟದಲ್ಲಿ ಸ್ತ್ರೀ-ಪುರುಷರಿಬ್ಬರೂ ತೊಡಗಿ ಸ್ತ್ರೀಯರಿಗೆ ಸಮಾನತೆಯನ್ನು ದೊರಕಿಸಿಕೊಡಲು ಪ್ರಯತ್ನಪೂರ್ವಕವಾಗಿ ನಡೆಸುವ ಕ್ರಿಯೆಯನ್ನು ಸ್ತ್ರೀವಾದವೆಂದು ಕರೆಯಬಹುದು.

ಕನ್ನಡ ಸಾಹಿತ್ಯವನ್ನು ಅವಲೋಕಿಸಿದಾಗ ಹತ್ತನೇ ಶತಮಾನದಿಂದಲೇ ಸ್ತ್ರೀವಾದಿ ಚಿಂತನೆ ದೊರೆಯುತ್ತದೆ. ಕನ್ನಡದ ಮೊತ್ತಮೊದಲ ಸ್ತ್ರೀವಾದಿ ಹತ್ತನೇ ಶತಮಾನದಲ್ಲಿದ್ದ ರನ್ನ ಎಂಬ ಮಾತಿದೆ. ಇವನು ತನ್ನ ಅಜಿತಪುರಾಣದಲ್ಲಿ ತನಗೆ ಆಶ್ರಯ ನೀಡಿದ್ದ ಅತ್ತಿಮಬ್ಬೆಯನ್ನು ಅರವತ್ತಾರು ಪದ್ಯಗಳಲ್ಲಿ ಹೃತ್ಪೂರ್ವಕವಾಗಿ ಹೊಗಳಿದ್ದಾನೆ.

ಕರ್ನಾಟಕದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಚಳವಳಿಯು ಮಹಿಳೆಯರ ಜೀವನದಲ್ಲಿ ಗಮನಾರ್ಹವಾದ ಬದಲಾವಣೆಯನ್ನುಂಟುಮಾಡಿತು. ಧಾರ್ಮಿಕ ಚಳವಳಿ ಸ್ವಾತಂತ್ರ್ಯದ ಪೂರ್ವದಲ್ಲಿಯೇ ಅದೊಂದು ಜಾತಿಯಾಗಿ ಪರಿವರ್ತನೆಗೊಂಡು ಸಮಾಜದಲ್ಲಿ ಮಹಿಳೆಯರಿಗಿದ್ದ ಅನೇಕ ಬಾಧಕಗಳನ್ನು ಹೋಗಲಾಡಿಸಿ, ಮಹಿಳೆಯರ ಅಭ್ಯುದಯದಲ್ಲಿ ತನ್ನದೇ ಆದ ಪಾತ್ರವನ್ನು ವಹಿಸಿತು. ಈ ಚಳವಳಿ ಮಹಿಳೆಯರ ಸರ್ವಸ್ವಾತಂತ್ರ್ಯಗಳಿಗಾಗಿ, ಏಳಿಗೆಗಳಿಗಾಗಿ ಶ್ರಮಿಸಿತು.

ಕರ್ನಾಟಕ ಸ್ತ್ರೀವಾದಿ ಚಿಂತನೆಯು ವಚನ ಚಳವಳಿಯೊಂದಿಗೆ, ಅಕ್ಕಮಹಾದೇವಿಯ ಆದರ್ಶ ಸ್ಮರಣೆಯೊಂದಿಗೆ ಗುರುತಿಸಬೇಕಾದ ಸ್ತ್ರೀವಾದವಾಗಿ ಸ್ವಾತಂತ್ರ್ಯದ ಆಸುಪಾಸಿನಲ್ಲಿಯೇ ರೂಢಿಗೆ ಬಂದಿತು. "ಹೀಗೆ ಸ್ವಾತಂತ್ರ್ಯದ ಪೂರ್ವದಲ್ಲಿಯೇ ಗಟ್ಟಿಗೊಂಡ ವೈದಿಕ ಹಾಗೂ ವೀರಶೈವ ಸಮುದಾಯಗಳ ಸಾಂಸ್ಕೃತಿಕ ರಾಜಕಾರಣ ನೆರಳಲ್ಲಿ ರೂಪುಗೊಂಡ ಕರ್ನಾಟಕದ ಸ್ತ್ರೀವಾದವೇ ಸ್ವಾತಂತ್ರ್ಯ ನಂತರದ ಮೂರು ದಶಕಗಳು ಕರ್ನಾಟಕದಲ್ಲಿನ ಸ್ತ್ರೀವಾದಿ ಚಿಂತನೆಯ ಕೇಂದ್ರವಾಗಿ ಮುಂದುವರಿಯಿತು.

ಸ್ತ್ರೀವಾದದ ಮೂರ್ತರೂಪಗಳಾಗಿ ಗಾರ್ಗಿ, ಮೈತ್ರೇಯಿ, ಕಾತ್ಯಾಯಿನಿಯರೊಂದಿಗೆ ಅಕ್ಕಮಹಾದೇವಿಯೂ ತನ್ನ ಸ್ಥಾನ ಸ್ಥಿರಪಡಿಸಿಕೊಂಡಳು. ಅಕ್ಕಮಹಾದೇವಿಯು ಕರ್ನಾಟಕದ ಕೊಡುಗೆಯಾಗಿ ಭಾರತೀಯ ಸ್ತ್ರೀವಾದವನ್ನು ಪ್ರವೇಶಿಸಿ ಅದನ್ನು ಪುಷ್ಟಿಗೊಳಿಸಿದಳು. ಭಾರತದ ಜನನಿಯ ತನುಜಾತೆಯಾದ ಕರ್ನಾಟಕ ಅದೇ ಸ್ವರೂಪದಲ್ಲಿ ಭಾರತೀಯ ಸ್ತ್ರೀವಾದವನ್ನು ವ್ಯಾಖ್ಯಾನಿಸಿತು".[೪೭]

ಕರ್ನಾಟಕ ಚರಿತ್ರೆಯಲ್ಲಿ ಮುಖ್ಯವಾಗಿ ಹೆಣ್ಣಿನ ಧ್ವನಿ ಕೇಳಿ ಬಂದಿದ್ದು ೧೭ನೇ ಶತಮಾನದಲ್ಲಿ. ಮೈಸೂರು ಒಡೆಯರ ಕಾಲದಲ್ಲಿ ಅನೇಕ ಆಸ್ಥಾನ ಕವಿಗಳಾಗಿ ಕವಯಿತ್ರಿಯರ ಗುಂಪೇ ಕಾಣಿಸಿಕೊಳ್ಳುತ್ತದೆ. ಒಡೆಯರ ಕಾಲಾವಧಿಯಲ್ಲಿ ಕಾವ್ಯ ರಚಿಸಿದ ಸಂಚಿ ಹೊನ್ನಮ್ಮ, ಶೃಂಗಾರಮ್ಮ, ಹೆಳವನಕಟ್ಟೆ ಗಿರಿಯಮ್ಮ ಮುಂತಾದವರು ಮುಖ್ಯರು. ಹೊನ್ನಮ್ಮನ 'ಹದಿಬದೆಯ ಧರ್ಮವನ್ನು ಸಮಗ್ರವಾಗಿ ಅವಲೋಕಿಸಿದಾಗ, ಪತಿವ್ರತಾ ಧರ್ಮವನ್ನು ಕುರಿತು ಹೇಳುವುದು ಅವಳ ಉದ್ದೇಶವಾದರೂ ಪುರುಷ ಪ್ರಾಧಾನ್ಯತೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡವಳಲ್ಲ. ಅವಳು ಚಿಕ್ಕದೇವರಾಜನ ಆಸ್ಥಾನದಲ್ಲಿದ್ದು ಆಶ್ರಯಕೊಟ್ಟಂಥ ಅರಸನೆದುರೇ 'ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವಿರಿ ಕಣ್ಣುಕಾಣದ ಗಾವಿಲರು' ಎಂದು ಹೇಳಿರುವುದು ಪುರುಷ ಪ್ರಾಧಾನ್ಯತೆಯನ್ನು ಪ್ರಶ್ನಿಸುವ ನಿಲುವಾಗಿದೆ. ಇದು ಸ್ತ್ರೀಯರ ಮೇಲಿನ ಕಟ್ಟುಪಾಡುಗಳು ಸಡಿಲವಾಗುತ್ತಿದ್ದ ಕಾಲಘಟ್ಟವಾಗಿತ್ತು. ಒಡೆಯರು ಸಾಹಿತ್ಯಪ್ರಿಯರು. ತಮ್ಮ ಕಾಲಾವಧಿಯಲ್ಲಿಯೇ ಮಹಿಳೆಯರಿಗೆ ಶಿಕ್ಷಣ ಕೊಡಿಸಿ, ಅವರಿಂದ ಕಾವ್ಯ ಬರೆಸಿದಂತಹ ಅರಸರ ಮನೋಧರ್ಮವು, ಒಡೆಯರ ಕಾಲದಲ್ಲಿ ಸ್ತ್ರೀಯರಿಗಿದ್ದ ಮುಕ್ತವಾದ ಅವಕಾಶದ ವಾತಾವರಣವನ್ನು ಸೂಚಿಸುತ್ತದೆ. ಆದರೆ ಪುರುಷಪ್ರಧಾನ ಮೌಲ್ಯಗಳಿಂದ ಬಿಡಿಸಿಕೊಂಡು ಕೃತಿರಚಿಸಬೇಕಾದ ಸಂದಿಗ್ಧತೆಯನ್ನು ಅವರು ಎದುರಿಸಿದರೆಂಬುದು ಗಮನಾರ್ಹವಾದ ಸಂಗತಿ.

ವಸಾಹತುಶಾಹಿ ಭಾರತದಲ್ಲಿ ಇಡೀ ವಿಶ್ವದ ಜ್ಞಾನ ಭಂಡಾರಕ್ಕೆ ಕೀಲಿಕೈಯಾದ ಇಂಗ್ಲಿಷನ್ನು ಕಲಿತು, ತನ್ಮೂಲಕ ಜರ್ಮನಿ, ಫ್ರಾನ್ಸ್, ರಷ್ಯಾದ ಕ್ರಾಂತಿಗಳ ಬಗ್ಗೆ ಓದಿ ಇಲ್ಲಿಯ ಜನ, ಸುಧಾರಣವಾದಿಗಳು ಹೊಸದಾಗಿ ಚಿಂತಿಸತೊಡಗಿದರು. ಈ ನಿಟ್ಟಿನಲ್ಲಿ ಭಾರತದಲ್ಲಿ ೧೮-೧೯ನೇ ಶತಮಾನದ ಸುಧಾರಣಾ ಚಳವಳಿಯಿಂದ ಮಹಿಳಾ ಚಳವಳಿಯನ್ನು ಗುರುತಿಸಬೇಕಾಗುತ್ತದೆ. ಸುಧಾರಣಾವಾದಿ ಚಳವಳಿಗಳು ಮಹಿಳೆಯರ ಅನೇಕ ಸಮಸ್ಯೆಗಳಿಗೆ ಆದ್ಯತೆ ನೀಡಿ ಶ್ರಮಿಸಿತು. ಇದರ ಪ್ರಭಾವಕ್ಕೆ ಕರ್ನಾಟಕವು ಒಳಗಾಗಿತು.

ಆಂಗಿಕ ರಚನೆಯ ಕಾರಣದಿಂದ ಸ್ತ್ರೀಯರು ನಾನಾ ಬಗೆಯಲ್ಲಿ ಶೋಷಣೆಗೆ ಒಳಪಟ್ಟಿದ್ದಾರೆ. ಗಂಡು-ಹೆಣ್ಣು ಎಂಬ ತಾರತಮ್ಯದ ನಾನಾ ಭೇದಗಳು ಇಂತಿವೆ. ಬಲಿಷ್ಠ-ದುರ್ಬಲಳೆಂದು, ಧೈರ್ಯವಂತ-ಪುಕ್ಕಲು ಸ್ವಭಾವದವಳೆಂಬ, ಪ್ರಬಲನಾದ-ಅಬಲೆಯಾದ, ಆಕ್ರಮಣಕಾರಿ-ವಿಧೇಯತೆಯ, ಪೌರುಷತ್ವದ ಸ್ವೇಚ್ಛಾಚಾರ-ಪಾವಿತ್ರತೆ, ಶೀಲದ ಬಂಧಗಳು, ಒರಟು ಸ್ವಭಾವದ ವಿಚಾರವಂತ-ದಡ್ಡಿ, ಕೋಮಲ ಸ್ವಭಾವದ, ಹೀಗೆ ನಾನಾ ರೀತಿಯ ಅಂತರದ ಹಿನ್ನೆಲೆಯಲ್ಲಿ ಸ್ತ್ರೀಯರನ್ನು ಒಂದು ನಂಬಿಕೆಗೆ, ಧೋರಣೆಗೆ ಸಿದ್ಧಪಡಿಸಲಾಗಿದೆ. ಧೀರತ್ವ, ಶೂರತ್ವ, ಕಿಚ್ಚು ಹಾಗೂ ಧೈರ್ಯಗಳೆಲ್ಲವನ್ನು ಪುರುಷನಿಗೆ ಎಂದು ಹೊಂದಿಸಿ, ಮೆದು ಧೋರಣೆಗಳಾದ ಮೃದುತ್ವ ಸಹನೆ, ತ್ಯಾಗ, ಸಂಯಮ, ವಿನಯ ಹಾಗೂ ವಿಧೇಯತೆಯನ್ನು ಹೆಣ್ಣಿನದೆಂದೇ ಕಾಲದಿಂದಲೂ ಬಿಂಬಿಸಲಾಗಿದೆ.

ಇಂಥ ಗುಣಗಳ ಆರೋಪದ ಕಾರಣದಿಂದ ಪುರುಷ ಗುಣಗಳೆಂದರೆ ಶೋಷಿಸುವಂಥ, ಅಧಿಕಾರಸ್ಥ ಗುಣಗಳುಳ್ಳವನು ಎಂಬುದು ನಿರ್ಧರಿತವಾಗಿದೆ. ಅವನು ಗಂಡಸು ಏನು ಮಾಡಿದರೂ ನಡೆಯುತ್ತದೆ ಎಂಬ ಪೂರ್ವಾಗ್ರಹ ಪೀಡಿತ ಮನಸ್ಸಿನಿಂದ ಸ್ವೇಚ್ಛಾಚಾರ ಎಂಬುದಕ್ಕೆ ಗಂಡು ಗುಣವೆಂದು, ಸಂಕೋಚದ ದೀನ ಪರಿಸ್ಥಿತಿಯಲ್ಲಿ ಹೆಣ್ಣಿರಬೇಕೆಂಬುದು ಸನಾತನವಾದಿಗಳ ಅಭಿಪ್ರಾಯ.

ಸ್ತ್ರೀವಾದ ಇಂಥ ಲಿಂಗತಾರತಮ್ಯ ಶೋಷಣೆಯನ್ನು ಪ್ರಶ್ನಿಸುತ್ತದೆ. ಇತ್ತೀಚೆಗಿನ ದಿನಗಳಲ್ಲಿ ಸ್ತ್ರೀವಾದದ ಧೋರಣೆಗಳು ಕಾಲಕಾಲಕ್ಕೆ ಬದಲಾಗುತ್ತಾ ಬಂದಿದೆ. ಸಂಪ್ರದಾಯ ನಿಲುವುಗಳು ಪುನರ್ ವ್ಯಾಖ್ಯಾನ, ಪುನರ್ ಪರಿಶೀಲನೆಯ ತರ್ಕಕ್ಕೆ ಒಳಪಡುತ್ತಿವೆ. ಉದಾಹರಣೆಗೆ ವರದಕ್ಷಿಣೆ ಬಗ್ಗೆ, ಬುರ್ಖಾ ವ್ಯವಸ್ಥೆ ಬಗ್ಗೆ, ಪಾತಿವ್ರತ್ಯ, ಸಾರ್ವಜನಿಕ ವಲಯದಲ್ಲಿ ಸ್ತ್ರೀಪ್ರವೇಶ ನಿಷೇಧ ಕುರಿತಂತೆ ಸ್ತ್ರೀವಾದಿಗಳು ಚರ್ಚಿಸಲಾರಂಭಿಸಿದರು. ಮಹಿಳೆಯ ಹಕ್ಕುಗಳನ್ನು ಕುರಿತಂತೆ ಅನೇಕ ಚಳುವಳಿಗಳು ರೂಪಿತವಾದವು.

ಬ್ರಿಟಿಷರು ಭಾರತಕ್ಕೆ ಬಂದ ನಂತರದಲ್ಲಿ ರಾಷ್ಟ್ರದ ಏಕತೆಗಾಗಿ, ಸ್ವಾತಂತ್ರ್ಯಕ್ಕಾಗಿ, ಮನೆಯಿಂದ ಹೊರಬಂದು ಚಳುವಳಿ, ಹೋರಾಟಗಳಲ್ಲಿ ಭಾಗವಹಿಸಿದ ಸ್ತ್ರೀ, ನಂತರದ ದಿನಗಳಲ್ಲಿ ತನ್ನ ಅಸ್ತಿತ್ವವನ್ನು ಕುರಿತಂತೆ ಆಲೋಚಿಸತೊಡಗಿದಳು. ತನ್ನ ಶಕ್ತಿಯ ಬಗ್ಗೆ ಆತ್ಮವಿಶ್ವಾಸವು ಬಂದನಂತರ ಸಂಘ ಸಂಸ್ಥೆಗಳನ್ನು ಕಟ್ಟಿಕೊಳ್ಳುತ್ತಾ ಉತ್ತಮ ಹವ್ಯಾಸಗಳನ್ನು ರೂಢಿಸಿಕೊಳ್ಳತೊಡಗಿದಳು. ಆಧುನಿಕ ಶಿಕ್ಷಣ, ಪಾಶ್ಚಾತ್ಯ ಆಲೋಚನೆಗಳ ಪ್ರಭಾವ, ಸಮಾಜ ಸುಧಾರಕರ ಸುಧಾರಣೆಗಳಿಂದ, ಗಾಂಧೀ ತತ್ವಗಳಿಂದ ಹಾಗೂ ತನ್ನತನದ ಜಾಗೃತಿಯಿಂದ ಮಹಿಳೆ ಪುರುಷ ಪ್ರವೇಶಿಸುತ್ತಿರುವ ಎಲ್ಲಾ ಕ್ಷೇತ್ರಗಳಿಗೆ ತಾನೂ

ಪ್ರವೇಶಿಸತೊಡಗಿದಳು. "ಇತಿಹಾಸದುದ್ದಕ್ಕೂ ಪುರುಷ ಪ್ರಪಂಚದ ಅನುಭವಗಳೇ ಸಾರ್ವತ್ರಿಕವೆಂಬಂತೆ ಅಭಿವ್ಯಕ್ತಗೊಂಡು, ಸ್ತ್ರೀಯರ ಅನಿಸಿಕೆ, ಅನುಭವ, ಸಾಧನೆ ದಾಖಲಾಗದೆ, ಏಕಮುಖ ಚರಿತ್ರೆ ನಮ್ಮದಾಗಿದೆ. ಪಿತೃಪ್ರಧಾನ ಸಮಾಜಕ್ಕೆ ಪುರುಷರ ಅನುಭವ ಅನಿಸಿಕೆಗಳೇ ಮೂಲಾಧಾರವಾಗಿದ್ದು, ಈ ಪಿತೃಪ್ರಧಾನ ಮೌಲ್ಯಗಳು ಪುರುಷರಿಗೆ ಅನುಕೂಲಕರವಾಗಿ ಮೂಡಿಬಂದವು"[೪೮] ಸ್ತ್ರೀಯರನ್ನು ಮೌಢ್ಯತೆಯ ಅಂಧಕಾರದಲ್ಲಿರಿಸಿ ಅವಳನ್ನು ಸಮಾನ ಅವಕಾಶಗಳಿಂದ ವಂಚಿಸಲಾಗಿತ್ತು.

"ಸಮಾಜದಲ್ಲಿ ಲಿಂಗಾಧಾರಿತ ಅಸಮಾನತೆಯಿದೆ ಎಂಬ ವಿಷಯದ ಬಗ್ಗೆ ಅರಿವನ್ನು ಮೂಡಿಸಿಕೊಂಡು ಸಮಾಜದ ವಿವಿಧ ಸಂಸ್ಥೆಗಳಲ್ಲಿ ಸ್ತ್ರೀಯರು ಎದುರಿಸುತ್ತಿರುವ ತಾರತಮ್ಯ, ದೌರ್ಜನ್ಯ ಹಾಗೂ ಶೋಷಣೆಗಳನ್ನು ಮನಗಂಡು ಈ ಪ್ರವೃತ್ತಿಗಳನ್ನು ಕೊನೆಗಾಣಿಸಲು ನಡೆಸುವ ಎಲ್ಲ ಉದ್ದೇಶಿತ ಪ್ರಾಮಾಣಿಕ ಪ್ರಯತ್ನಗಳನ್ನು 'ಸ್ತ್ರೀವಾದ' ಎಂದು ಕರೆಯಬಹುದು. ಈ ಅರ್ಥದಲ್ಲಿ ಸ್ತ್ರೀವಾದ ಒಂದು 'ವಿಚಾರಧಾರೆ'ಯೂ ಹೌದು ಅಥವಾ 'ಜೀವನಕ್ರಮ'ವೂ ಹೌದು. ಅಲ್ಲದೆ ಇದೊಂದು ಸಾಮಾಜಿಕ ಚಳುವಳಿಯೂ ಹೌದು. ಸ್ತ್ರೀ ಶೋಷಣೆಯ ವಿರುದ್ಧದ ಹೋರಾಟದಲ್ಲಿ ಸ್ತ್ರೀವಾದಿಗಳು ಅಳವಡಿಸಿಕೊಳ್ಳುವ ಒಂದು ಸೈದ್ಧಾಂತಿಕ ಕ್ರಮವು ಸ್ತ್ರೀವಾದವೇ. ಒಟ್ಟಿನಲ್ಲಿ ಸ್ತ್ರೀಪರ ವಿಚಾರಗಳಲ್ಲಿ ಕಾಳಜಿಯನ್ನು ಹೊಂದಿರುವ ಹಾಗೂ ಸ್ತ್ರೀಸಂಬಂಧಿ ವಿಚಾರಗಳಿಗೆ ಸ್ಪಂದಿಸುವ ಮನೋಭಾವವನ್ನು ಬೆಳೆಸಿಕೊಂಡಿರುವವರನ್ನು 'ಸ್ತ್ರೀವಾದಿ'ಗಳೆಂದೂ ಅವರ ದೃಷ್ಟಿಕೋನವನ್ನು 'ಸ್ತ್ರೀವಾದ'ವೆಂದೂ ಹೇಳುವುದು ತಪ್ಪಾಗಲಾರದು".[೪೯] ಅದಕ್ಕೆ ಇದಕ್ಕೆ ಪೂರಕವಾಗಿ ಡಾ. ಗಾಯತ್ರಿನಾವಡರವರು ತಮ್ಮ 'ಮಹಿಳಾಸಂಕಥನ ಕೃತಿ'ಯಲ್ಲಿ "ಲಿಂಗ ಸಮಾನತೆಯನ್ನು ಸ್ಥಾಪಿಸುವ ಆಶಯದಲ್ಲಿ ಕಟ್ಟಿದ ಸ್ತ್ರೀವಾದಿ ಚಳವಳಿ ಎಲ್ಲ ಅಧಿಕಾರ ಪ್ರಭುತ್ವದ ವಿರುದ್ಧ ಹೋರಾಡುತ್ತದೆ. ಹೀಗಾಗಿಯೇ ಇದು ಮಾನವ ಪರವಾದ ಹೋರಾಟ, ಲಿಂಗ ಸಮಾನತೆಯ ಪ್ರಶ್ನೆಯಲ್ಲಿ ಸ್ತ್ರೀವಾದವು ಉಭಯಲಿಂಗಿ ತತ್ವದಲ್ಲಿ ಲಿಂಗ ಪಾವಿತ್ರ್ಯವನ್ನು ಒಡೆಯುತ್ತದೆ"[೫೦] ಎಂದಿದ್ದಾರೆ. ಅಲ್ಲಿಗೆ ಸ್ತ್ರೀವಾದದ ಉದ್ದೇಶ ಬರಿಯ ಹೆಣ್ಣಿನ ಬಗ್ಗೆ ಕಾಳಜಿ ವಹಿಸುವುದಲ್ಲವೆಂದಾಯಿತು. ಈ ಹಿನ್ನೆಲೆಯನ್ನು ತಿಳಿದ ಲೇಖಕಿಯರು ಕಥೆಗಳನ್ನು ಬರೆದಿದ್ದಾರೆ.

ಹೀಗೆ ಸ್ತ್ರೀವಾದದ ದಿಕ್ಕುದೆಸೆಗಳನ್ನು ನೋಡಲು ಹೋದರೆ ಜಗತ್ತಿನೆಲ್ಲೆಡೆ ಇದರ ಚಿಂತಕರಿರುವುದನ್ನು ಗಮನಿಸಬಹುದು. ಈ ನೆಲೆಯಲ್ಲಿ ನಿಂತು ನಾವು ಕನ್ನಡ ಕಥೆಗಳನ್ನು ನೋಡುವುದಾದರೆ ಸ್ತ್ರೀಯಾಗಿ ಹುಟ್ಟಿದರಿಂದಲೇ ತಮಗಾದ ನೋವಿನ ಅನುಭವಗಳನ್ನು ಕಥೆಗಳ

ಮೂಲಕ ಅಭಿವ್ಯಕ್ತಪಡಿಸಿದ ಲೇಖಕಿಯರನ್ನು ಕಾಣಬಹುದು. ಅನುಭವ ಮಡುಗಟ್ಟುವಂತೆ ಕಥೆಗಳು ಬಹಳಷ್ಟು ಚಿಂತನೆಗೆ ಒಳಪಡಿಸುವಂಥ ಶೈಲಿಯಲ್ಲಿ ರಚನೆಗೊಂಡಿವೆ.

ಹೀಗೆ ಸ್ತ್ರೀವಾದವು ಜಗತ್ತಿನಾದ್ಯಂತ ವ್ಯಾಪಿಸಿ, ಆಯಾಯ ದೇಶಗಳ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಮತ್ತು ರಾಜಕೀಯ ವಾತಾವರಣದಲ್ಲಿ ಮಹತ್ತರವಾದ ಬದಲಾವಣೆಯನ್ನುಂಟು ಮಾಡಿ ಹಂತ ಹಂತವಾಗಿ ತನ್ನ ಗುರಿಯತ್ತ ಸಾಗುತ್ತಿದೆ. ಫ್ರಾನ್ಸ್ ಮೊದಲುಗೊಂಡು ಐರೋಪ್ಯ ದೇಶಗಳಲ್ಲಿಯೂ ಆದಾದ ಬಳಿಕ ಪೌರ್ವಾತ್ಯ ದೇಶಗಳಲ್ಲೂ ವಿಪುಲವಾಗಿ ಬೆಳೆದು ಬರುತ್ತಿದೆ.

"ಸ್ತ್ರೀವಾದಿಗಳು ಹೆಣ್ಣಿನ ಮೇಲೆ ಚಲಾಯಿಸಲ್ಪಡುವ ಎಲ್ಲ ರೀತಿಯ ಯಜಮಾನಿಕೆಯನ್ನು ವಿರೋಧಿಸುತ್ತಾರೆ. ಇದು ಕೇವಲ ತಮ್ಮ ಸ್ವಾತಂತ್ರ್ಯದ ಹುಡುಕಾಟ, ವಿಮೋಚನೆಯ ತುಡಿತವಷ್ಟೇ ಎಂದು ಭಾವಿಸಲಾಗದು. ಏಕೆಂದರೆ ಸ್ತ್ರೀವಾದ ತಾತ್ವಿಕ ನೆಲೆಯಲ್ಲಿ ಅಧಿಕಾರ ವಿರೋಧವನ್ನು ಸ್ಪಷ್ಟವಾಗಿ ದಾಖಲಿಸುತ್ತದೆ. ಫುಕೋ – ಮುಂತಾದ ವಿಮರ್ಶಕರು ಗುರುತಿಸುವಂತೆ ಇದು ಕೇವಲ ಸ್ತ್ರೀಯರ ವೈಯಕ್ತಿಕ ಹಾಗೂ ಸಾಮಾಜಿಕ ಬದುಕುಗಳಿಗಷ್ಟೇ ಸೀಮಿತವಾಗದೆ ಶೋಷಿತರ ಸಾಂಸ್ಕೃತಿಕ ವಿಮೋಚನೆಯ ಪರವಾಗಿ ಸ್ಪಂದಿಸುತ್ತದೆ. ತುಂಬಾ ವ್ಯಾಪಕವಾಗಿ ಆಲೋಚಿಸುವುದಾದರೆ ಅದು ವ್ಯಕ್ತಿ ಸಾತಂತ್ರ್ಯಕ್ಕೆ ಧಕ್ಕೆ ತರುವ ಎಲ್ಲಾ ರೀತಿಯ ಹಿಂಸೆಗಳಿಗೂ ವಿರೋಧ ಸೂಚಿಸುತ್ತದೆ".[೫೧]

"ಭಾರತೀಯ ಸ್ತ್ರೀವಾದಿ ಚಿಂತನೆ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಗಳಿಂದ ಸಾಕಷ್ಟು ಪ್ರಭಾವವನ್ನು ಪಡೆದಿದೆ. ಭಾರತೀಯ ಸಮಾಜದಲ್ಲಿ ವರ್ಗಗಳೂ ಕೂಡಾ ಮಹಿಳಾ ಬದುಕಿನ ಮೇಲೆ ಪರಿಣಾಮ ಉಂಟು ಮಾಡಿದೆ. ಒಂದು ಸಮಾಜ ವ್ಯವಸ್ಥೆಯಲ್ಲಿ ಜಾತಿ, ಧರ್ಮ, ಆರ್ಥಿಕ ಅಂತಸ್ತುಗಳು ಕೂಡಾ ಮುಖ್ಯವಾಗಿದ್ದು, ಅವು ಏಕರೂಪದವುಗಳಲ್ಲ. ಎಲ್ಲಾ ಸ್ತರಗಳಲ್ಲೂ ಮಹಿಳೆಯರು ಶೋಷಣೆ ಗೊಳಗಾಗಿದ್ದಾರೆ, ಆದರೆ ಮಹಿಳೆಯರ ಸಮಸ್ಯೆಗಳು ಒಂದೇ ರೀತಿಯದಾಗಿರುವುದಿಲ್ಲ. ಅವು ವಿಭಿನ್ನ ಸ್ವರೂಪದಾಗಿದ್ದು, ಕಾಲದಿಂದ ಕಾಲಕ್ಕೆ ಸಮಾಜದಿಂದ ಸಮಾಜಕ್ಕೆ ಬೇರೆಯಾಗಿರುತ್ತದೆ. ಆಯಾ ಪರಿಸರ, ಸಾಂಸ್ಕೃತಿಕ ರಾಜಕೀಯ ಸಾಮಾಜಿಕ ಸಂದರ್ಭಗಳಿಗೆ ಅನುಗುಣವಾಗಿ ಸಮಸ್ಯೆಗಳು ಹುಟ್ಟಿಕೊಂಡಿದೆ. ಶ್ರೀಮಂತ ವರ್ಗದ ಮಹಿಳಾ ಸಮಸ್ಯೆಗಳು. ದಲಿತ ಹೆಣ್ಣು ಮಕ್ಕಳ ಸಮಸ್ಯೆಗಿಂತ ಭಿನ್ನ ಹೀಗೆ ನಗರ, ಗ್ರಾಮೀಣ, ವಿದ್ಯಾವಂತ, ಅವಿದ್ಯಾವಂತ, ಬಡ, ಶ್ರೀಮಂತ ಮೇಲು ಜಾತಿ, ಕೀಳು ಜಾತಿ ಹೀಗೆ – ಸಮಸ್ಯೆಗಳು ಭಿನ್ನ ಸ್ವರೂಪದ್ದು.[೫೨] ಪ್ರಪಂಚದಾದ್ಯಂತ ಪುರುಷ ಪ್ರಧಾನ ಸಮಾಜದಲ್ಲಿ ಎಲ್ಲಾ ಹೆಣ್ಣುಗಳೂ

(ಸ್ತ್ರೀಯರೂ) ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗುವುದನ್ನು ಕಾಣಬಹುದು. ಹಾಗಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ವೈಜ್ಞಾನಿಕವಾಗಿ ಸಮಾಜವು ಎಷ್ಟೇ ಮುಂದುವರಿದರೂ ಲೈಂಗಿಕ ತಾರತಮ್ಯವು ಎದ್ದು ಕಾಣುತ್ತದೆ.

ಸ್ತ್ರೀ ನಿಲುವುಗಳು ಕುಟುಂಬದಲ್ಲಿ ಹೆಣ್ಣಿನ ಸ್ಥಾನಮಾನಗಳನ್ನು ನಿರ್ಧರಿಸುವಂತಹದು ಪುರುಷನ ಲೈಂಗಿಕ ಅಗತ್ಯಗಳ ನೆಲೆಯಿಂದ ಎಂಬ ಕಲ್ಪನೆಯನ್ನು ವಿರೋಧಿಸುತ್ತದೆ.

ಹೆಣ್ಣಿನಲ್ಲಿ ಆಗುವಂತಹ ಗಂಡಿನ ಯಜಮಾನತ್ವದ ಹಿನ್ನೆಲೆಯಲ್ಲಿ ಅಂದರೆ ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ಹೀಗೆ ಎಲ್ಲಾ ನೆಲೆಗಳಲ್ಲೂ ಆಗುವ ಗಂಡಿನ ದಬ್ಬಾಳಿಕೆಯನ್ನು ಪ್ರತಿಭಟಿಸುವುದು.

ಗಂಡು ಅಧಿಕಾರ ಚಲಾಯಿಸಬೇಕಾದವನು ಎಂಬ ಪಾರಂಪರಿಕ ತಿಳುವಳಿಕೆಯನ್ನು ವಿರೋಧಿಸುವುದು ಹಾಗೂ ಬದುಕಿನ ಪ್ರತಿಯೊಂದು ಪ್ರಮುಖ ತಿರುವಿನಲ್ಲಿ ತನ್ನದೇ ಆದಂತಹ ನಿರ್ಧಾರವನ್ನು ತೆಗೆದುಕೊಳ್ಳುವುದು.

ಸ್ತ್ರೀಯು ಪುರುಷ ಪ್ರಧಾನ ಸಂಸ್ಕೃತಿಯೊಳಗೆ ಕರಗಿಹೋಗಿ ಬಿಡುವ ಹಾಗೂ ಅವಳಿಗೆ ಸಮಾಜದಲ್ಲಿ ಆಸ್ತಿತ್ವವೇ ಇಲ್ಲದ ತಿಳುವಳಿಕೆಯ ವಿರೋಧವನ್ನು ವ್ಯಕ್ತಪಡಿಸುವ ನಿಟ್ಟಿನಲ್ಲಿ ಪ್ರಪಂಚದಾದ್ಯಂತ ಸ್ತ್ರೀವಾದಿಗಳು ಸಂಪ್ರದಾಯಿಕ (ಪಾರಂಪರಿಕ) ನಂಬಿಕೆಗಳನ್ನು ತೀವ್ರವಾಗಿ ಖಂಡಿಸಿ, ಸ್ವಂತ ಹಿತಾಸಕ್ತಿಯ ನಂಬಿಕೆಗಳನ್ನು ಪುನರ್ ವ್ಯಾಖ್ಯಾನ ಮಾಡುವ ಪ್ರಯತ್ನ ಮಾಡಿದ್ದಾರೆ.

'ಕುಟುಂಬವೆಂಬುದು ಮಹಿಳೆಗೆ ಅನಿವಾರ್ಯವಾಗಬಾರದು, ಆಯ್ಕೆಯ ಪ್ರಶ್ನೆಯಾಗಬೇಕು ಹಾಗೂ ಕೌಟುಂಬಿಕ ಜವಾಬ್ದಾರಿಗಳು ಸಮನಾಗಿ ಹಂಚಿಕೆಯಾಗಬೇಕು. ತನ್ನ ಲೈಂಗಿಕ ಬದುಕಿನ ಮೇಲೆ ಮಹಿಳೆಗೆ ಸ್ವಾಮ್ಯ ಜೀವೋತ್ಪಾದನೆಯಲ್ಲಿ ನಿರ್ಣಯಾತ್ಮಕ ಪಾತ್ರ, ದುಡಿಮೆ ಹಾಗೂ ದುಡಿಮೆಯ ಪ್ರತಿಫಲದ ಮೇಲೆ ಸಮಾನ ಹಕ್ಕು ಬೇಕು. ಇವೇ ಮೊದಲಾದುವು ಸ್ತ್ರೀವಾದಿ ಪ್ರಜ್ಞೆಯ, ಸ್ತ್ರೀವಾದಿ ಚಳುವಳಿಯ ಪ್ರಮುಖ ಹಕ್ಕೊತ್ತಾಯಗಳು'[೫೩] ಎಂಬುದಾಗಿ ಗುರಿಯನ್ನಿರಿಸಿಕೊಂಡು ಸ್ತ್ರೀಪರವಾದ ಆಲೋಚನೆಗಳು, ಸಿದ್ಧಾಂತಗಳು ಹೆಚ್ಚು ಪ್ರಚಾರವಾಗತೊಡಗಿದವು.

ಸ್ತ್ರೀ ಶೋಷಣೆಯನ್ನು ಕೊನೆಗಾಣಿಸುವ ಹಂಬಲ ಬಹುತೇಕ ಲೇಖಕಿಯರಲ್ಲಿದೆ. ನವೋದಯದ ಕಥೆಗಾರರಲ್ಲಿಯ ಕಾಳಜಿಗೂ, ಪ್ರಗತಿಶೀಲರ ಕಥೆಗಳ ಕಾಳಜಿಗೂ, ನವ್ಯ ಕಥೆಗಾರರ ಕಾಳಜಿಗೂ, ವ್ಯತ್ಯಸ್ಥೆಯನ್ನು ಗುರುತಿಸಿದರೂ ದಲಿತ ಬಂಡಾಯ ಸಂದರ್ಭದಲ್ಲಿ ಬಂದ ಕಥೆಗಳ ಒಂದು ವಸ್ತುವನ್ನೇ ಒಳಗೊಂಡರೂ ಅದನ್ನು ವಿವಿಧ ರೀತಿಯ ದೃಷ್ಟಿಕೋನದಿಂದ ವಿಶ್ಲೇಷಣೆಗೆ ಒಳಪಡಿಸಿವೆ. ಒಬ್ಬರಿಂದ ಮತ್ತೊಬ್ಬರಿಗೆ ಸಂಪೂರ್ಣ ವ್ಯತ್ಯಾಸವಿರುವುದನ್ನು ತಿಳಿಯಬಹುದು.

ಕಥೆಯು ಹೊರಡಿಸುವ ಆಶಯ ಮುಖ್ಯವಾಗಿ 'ಈ ಕ್ರೂರ ಸಮಾಜದ ಬದಲಾವಣೆಯೇ' ಆಗಿದೆ. ಬದಲಾವಣೆಯನ್ನು ತರುವ ನಿಟ್ಟಿನಲ್ಲಿ ಸಮಸ್ಯೆಯನ್ನು ಅರಹುವ ಸಂದರ್ಭದಲ್ಲಿ ಪ್ರತಿ ಕಥೆಗಾರರೂ ವಿಭಿನ್ನವಾಗಿ ಕಾಣುತ್ತಾರೆ. ಚರ್ಚಿಸುವ ನೆಲೆಯೂ ವಿಭಿನ್ನದ್ದು. ಸ್ತ್ರೀಪರ ಧೋರಣೆ, ಕಾಳಜಿ ಬಹುತೇಕ ಕಥೆಗಾರರ ನಿಲುವಾಗಿದೆ. ಆಧುನಿಕತೆಯ ಉಗ್ರದಾಳಿಗೆ ಸಿಲುಕಿ ನೊಂದ ಹೆಣ್ಣುಗಂಡುಗಳೇ ಕಥೆಯ ನಾಯಕಿ/ನಾಯಕರುಗಳಾಗಿದ್ದಾರೆ. ಈ ಕಥೆಗಳು ಸ್ತ್ರೀವಾದ ಮತ್ತು ಸ್ತ್ರೀ ಸಂವೇದನೆಯ ದೃಷ್ಟಿಯಿಂದ ರಚಿಸಲ್ಪಟ್ಟಂತೆ ಕಾಣುತ್ತವೆ.

ಕಥೆಗಳ ರಚನೆಯೂ ಸಹ ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನ. ಕೆಲವರು ಗ್ರಾಮೀಣ ಪರಿಸರದ ಭಾಷೆಯನ್ನು ಬಳಸಿದರೆ ಮತ್ತೆ ಕೆಲವರು ಆಧುನಿಕತೆಯ ಚಿತ್ರಣವನ್ನು ನೀಡುತ್ತಾರೆ. ಮಹಿಳಾ ಲೇಖಕಿಯರ ಸಂದರ್ಭದಲ್ಲಂತೂ ಕೆಲವೊಮ್ಮೆ ರೊಚ್ಚು, ಆವೇಶಗಳು ಕಂಡು ಬಂದರೆ ಮತ್ತೆ ಕೆಲವು ಲೇಖಕಿಯರಲ್ಲಿ ಸಮಸ್ಯೆಯ ತೀವ್ರತೆ ಹೀಗೆ ಎಲ್ಲವೂ ಕಥೆಯ ಅಂಶವಾಗಿದೆ.

ಪುರುಷ ನಿರ್ಮಿತ ಕೃತಿಗಳು ನಿರ್ಮಿತವಾದ ಕಾಲಕ್ಕಿಂತ ಹೆಚ್ಚು ತಡವಾಗಿ ಬರವಣಿಗೆ ಆರಂಭಿಸಿದ ಸ್ತ್ರೀಯರು ಮೊದಲು ತನ್ನ ಕುಟುಂಬ, ಸ್ಥಳೀಯ ಪರಿಸರ, ಕೌಟುಂಬಿಕ ವರ್ತನೆಗಳನ್ನು ಕುರಿತು ಸರಳವಾಗಿ ಬರೆಯಲಾರಂಭಿಸಿದರು. ಕಾಲನಂತರ ೭೦ ರ ದಶಕಗಳ ನಂತರ ದಲಿತ ಹಾಗೂ ಬಂಡಾಯ ಸಾಹಿತ್ಯದಿಂದ ಪ್ರೇರಿತರಾಗಿ ಸಾಹಿತ್ಯವನ್ನು ಒಂದು ಪ್ರತಿಭಟನೆಯ ಮಾಧ್ಯಮವನ್ನಾಗಿಸಿ ಬರೆಯತೊಡಗಿದರು.

ಇನ್ನು ಕಥೆಗಾರ್ತಿಯನ್ನು ಕುರಿತು ಹೇಳುವಾಗ ಮಹಿಳಾ ಸಣ್ಣ ಕತೆಗೆ ಮಹತ್ವದ ತಿರುವು ನೀಡಿದವರು 'ವೈದೇಹಿ'ಯವರು. "ಜಿ.ಎಸ್. ಆಮೂರರು 'ವೈದೇಹಿ'ಯವರ ನಿಲುವನ್ನು ಸ್ಥೂಲವಾಗಿ ದೇಶಿನಿಲುವು ಎಂದು ಕರೆಯಬಹುದು' ಎಂದಿದ್ದಾರೆ. ಬಹುತೇಕ ಕಥೆಗಳಲ್ಲಿ ವೈದೇಹಿಯವರು ಸುತ್ತಲಿನ

ಜಗತ್ತು, ಮಾನವೀಯ ಸಂಬಂಧಗಳು, ಆಪ್ತತೆಗಳು, ಸಮಸ್ಯೆಗಳನ್ನು ಕುರಿತು ದನಿ ಎತ್ತುತ್ತಾರೆ. ಉದಾ: ಅವರು ರಚಿಸಿರುವ ಕಥೆ 'ಅವಲಂಬಿತರು' ಇದು ಸಮಾಜದಲ್ಲಿ ಮನುಷ್ಯನ ಅವಲಂಬನೆ ಹೇಗಿದೆ ಎಂಬುದನ್ನು ಚಿತ್ರಿಸುತ್ತದೆ. ಅಲ್ಲದೆ ಮಾನವೀಯ ನೆಲೆಯಲ್ಲಿ ನಿಂತು ಮಾತನಾಡುತ್ತದೆ. "ಮಾನವೀಯ ಮೌಲ್ಯಗಳನ್ನು ಕಳೆದುಕೊಂಡ ಮಧ್ಯಮ ವರ್ಗದ ಕುಟುಂಬವೊಂದು ಪ್ರಬುದ್ಧತೆಯ ಹೊಸ್ತಿಲಲ್ಲಿರುವ ಅಮಾಯಕ ಹುಡುಗಿಯೊಬ್ಬಳನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ವಿಧಾನದ ಅನಾವರಣವನ್ನು ಮಾಡುತ್ತದೆ".[೫೪] ಎಷ್ಟೇ ಅನುಕಂಪನೆಯನ್ನು ವ್ಯಕ್ತಪಡಿಸಿದರೂ ಅದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನು ಮಾರ್ಮಿಕವಾಗಿ ಸೂಚಿಸುತ್ತದೆ. ಸ್ತ್ರೀಯರಿಂದಲೇ ಉಂಟಾಗಬಹುದಾದ ಸಮಸ್ಯೆಗಳನ್ನು ಬಯಲಿಗೆ ತರುವಲ್ಲಿ ಕಥೆ ಯಶಸ್ಸನ್ನು ಕಾಣುತ್ತದೆ. ಹೀಗೆ ವೈದೇಹಿಯವರ ಚಿಂತನಾ ಕ್ರಮವೇ ವಿಭಿನ್ನವಾದದ್ದು.

'ಸಾರಾ ಅಬೂಬಕ್ಕರ್' ತಮ್ಮ ಎಲ್ಲ ಕಥೆಗಳಲ್ಲೂ ಒಂದಿಲ್ಲೊಂದು ಸಮಸ್ಯೆಯನ್ನು ಅದರಲ್ಲಿ ನಲುಗುವ ಪಾತ್ರಗಳನ್ನು ನೀಡುತ್ತಾರೆ. ಈ ನೀಡುವಿಕೆ ಅಲ್ಲಿಯ ಕ್ರೂರತೆಯನ್ನು ತಿಳಿಸಲಷ್ಟೇ ಅಲ್ಲ, ಅಲ್ಲಿನ ಸಮಾಜದವರಲ್ಲಿ ಅರಿವು ಮೂಡಿಸಲು ಸಹ ಇರಬಹುದು. ಆದರೂ ಓದುಗರು ಅವುಗಳನ್ನು ಹೆಕ್ಕುವಾಗ ವಾಸ್ತವ ಬದುಕಿನ ಕ್ರೂರತೆ ಕಂಡು ಬರುತ್ತದೆ. ಸಾ.ರಾ. ಅಬೂಬಕ್ಕರ್‌ರವರ 'ಧರ್ಮ ಬಲೆ ಬೀಸಿದಾಗ', 'ನಿಯಮಾನಿಯಮಗಳ ನಡುವೆ', 'ಚಪ್ಪಲಿಗಳು' ಹೀಗೆ ಅನೇಕ ಕಥೆಗಳ ಅಂತರಂಗದಲ್ಲಿ ಹೆಣ್ಣಿನ ಹಲವು ಮಗ್ಗುಲುಗಳ ಸಮಸ್ಯೆಗಳನ್ನು ಬಿಂಬಿಸುತ್ತಾರೆ. ಕೆಲವು ಪಾತ್ರಗಳು ತಾಯಿಯಾಗಿ, ಹೆಂಡತಿಯಾಗಿ, ತಂಗಿಯಾಗಿ, ಹೇಗೆ ಹಿಂಸೆಗೊಳಗಾಗುತ್ತವೆ ಎಂಬುದನ್ನು ಪ್ರಧಾನವಾಗಿ ಕಾಣಬಹುದು. ಹೀಗೆ ಹೆಣ್ಣಿನ ಶೋಷಣೆಯ ವಿವಿಧ ಮುಖಗಳನ್ನು ಪರಿಚಯಿಸುತ್ತಲೇ ಕೆಲವೊಂದು ಬಾರಿ ಅವುಗಳನ್ನು ಎದುರಿಸುವ ಶಕ್ತಿಯನ್ನು ಪಾತ್ರಗಳಲ್ಲಿ ತುಂಬಿಸುತ್ತಾರೆ. ಹೀಗೆ 'ಮುಸ್ಲಿಂ ಸಂವೇದನೆ'ಯು ಕನ್ನಡ ಕಥಾಲೋಕದಲ್ಲಿ ಕಂಡುಬರುತ್ತದೆ.

ಪ್ರತಿರೋಧ ಎಂಬುವುದು ಪ್ರಕೃತಿಯಲ್ಲಿ, ಪ್ರತಿಯೊಂದು ಜೀವಜಂತುಗಳಲ್ಲಿ ಹುಟ್ಟಿಕೊಳ್ಳುವುದು ಸಹಜ. ಅದು ಮನುಷ್ಯರಲ್ಲೂ ಹುಟ್ಟಿನಿಂದಲೇ ಬರುವಂತಹದ್ದು, ಮಗು ತನಗೆ ಇಷ್ಟವಿಲ್ಲದುದ್ದನ್ನು ಅಳುವಿನ ಮೂಲಕ ವಿರೋಧಿಸುತ್ತದೆ. ಪ್ರಾಣಿ, ಪಕ್ಷಿಗಳು ತಮ್ಮ ಆಂಗಿಕ ವರ್ತನೆ, ಕೂಗಿನಲ್ಲಿನ ಧ್ವನಿಯ ಏರಿಳಿತದ ಮೂಲಕ ಅವುಗಳದೇ ಆದ ರೀತಿಯಲ್ಲಿ ವಿರೋಧಿಸುತ್ತವೆ. ಸಮಾಜವು ನಾಗರೀಕತೆ,

ಸಂಸ್ಕೃತಿಯ ಹೆಸರಿನಲ್ಲಿ ಹಲವು ಕಟ್ಟುಪಾಡುಗಳ, ವಿಧಿ ನಿಷೇಧಗಳ ಮೂಲಕ ಮನುಷ್ಯರ ಈ ಗುಣಗಳನ್ನು ಹತ್ತಿಕ್ಕುತ್ತದೆ. ಇದಕ್ಕೆ ತಲೆಬಾಗದೇ ಇದ್ದವರು ವಿರೋಧ ವ್ಯಕ್ತಪಡಿಸುತ್ತಾರೆ. ಈ ಪ್ರತಿರೋಧ ಸಾಂಪ್ರದಾಯಬದ್ಧವಾಗಿರಬಹುದು, ಬೌದ್ಧಿಕವಾಗಿರಬಹುದು. ಪ್ರತಿರೋಧ ಎಂದೊಡನೆ ಯಾವುದರ ವಿರುದ್ಧ ಎಂಬ ಪ್ರಶ್ನೆ ಮನಸ್ಸಿನಲ್ಲಿ ಹುಟ್ಟಿಕೊಳ್ಳುತ್ತದೆ. ಅನ್ಯಾಯ ಎಣಿಸಿದ್ದನ್ನು ತಿರಸ್ಕರಿಸುವುದೇ ಪ್ರತಿರೋಧ.

ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಪ್ರತಿರೋಧದ ವಿಭಿನ್ನ ರೂಪಗಳು ವ್ಯಕ್ತಗೊಂಡಿವೆ.

- ಸಾಂಪ್ರದಾಯಿಕ ಪ್ರತಿರೋಧದ ನೆಲೆಗಳು
- ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಪ್ರತಿರೋಧದ ನೆಲೆಗಳು
- ಪ್ರಜ್ಞಾಪೂರ್ವಕ ನೆಲೆಯಲ್ಲಿ ಪ್ರತಿರೋಧದ ನೆಲೆಗಳು
- ಮೌನದ ನೆಲೆಯಲ್ಲಿ ಪ್ರತಿರೋಧದ ನೆಲೆಗಳು
- ಸಮಾನ ಮನಸ್ಕರೊಂದಿಗಿನ ಪ್ರತಿರೋಧದ ನೆಲೆಗಳು
- ಸ್ವಗತದ ನೆಲೆಯ ಪ್ರತಿರೋಧದ ನೆಲೆಗಳು

- **ಸಾಂಪ್ರದಾಯಿಕ ಪ್ರತಿರೋಧದ ನೆಲೆಗಳು :–**

ಬದುಕಿನ ತೀರಾ ಆಳಕ್ಕಿಳಿಯದೆ ಹಳೆಯ ಮೌಲ್ಯಗಳನ್ನು ಎದುರಿಸಿ ನಿಲ್ಲಬೇಕು ಎಂದು ಕಂಡಾಗಲೂ ಯಾವುದೇ ಸಂಪ್ರದಾಯಕ್ಕೆ ಕಟ್ಟುಬಿದ್ದು, ಅದೇ ಸಾಂಪ್ರದಾಯಿಕ ವರ್ತುಲದೊಳಗೆ ಗಿರಕ್ಕಿ ಹೊಡೆಯುತ್ತಾ ಇದಿಷ್ಟು ನನ್ನ ಬಾಳು, ಇದ್ದಲ್ಲೇ ಸುಖ ಕಾಣಬೇಕು. ಇದಕ್ಕಿಂತ ಹೆಚ್ಚಿದನ್ನು ಬಯಸುವ ಹಕ್ಕು ತನಗಿಲ್ಲ ಎನ್ನುವ ಸಿದ್ಧಾಂತಕ್ಕೆ ಬರುವ, ಸಮಾಜ ಎಳೆದ ಲಕ್ಷ್ಮಣ ರೇಖೆಯನ್ನು ದಾಟುವ ಧೈರ್ಯವಿಲ್ಲದೆಯೇ ದಾಟಬೇಕಾದ ಅವಶ್ಯಕತೆ ಕಂಡು ಬಂದಿದ್ದರಿಂದಲೋ ಆ ರೇಖೆಯನ್ನು ದಾಟಬಾರದ ನಾವು ಸುಖಿಗಳು ಎಂದು ತಮ್ಮನ್ನು ತಾವೇ ವಂಚಿಸಿಕೊಳ್ಳುವ ಮನೋಭಾವನೆಯನ್ನು ಬೆಳೆಸಿಕೊಂಡ ಪಾತ್ರಗಳು ಸಂಪ್ರದಾಯಿಕ ಪ್ರತಿರೋಧದ ನೆಲೆಗಳಾಗಿ ಕತೆಗಳಲ್ಲಿ ಗುರುತಿಸಬಹುದಾಗಿದೆ.

ಎಚ್. ನಾಗವೇಣಿಯವರ "ನಾಕನೇ ನೀರು" ಶಿವಪ್ಪಚಾರಿ ಮತ್ತು ಕಿನ್ನಿ ದಂಪತಿಗಳ ಕತೆಯಾಗಿದೆ. ಹೆಣ್ಣಿನ ಸ್ಥಾನಮಾನದ ಬಗ್ಗೆ ಕತೆಯಲ್ಲಿ ಕಿನ್ನಿಯ ಮೂಲಕ ಲೇಖಕಿ ಪ್ರಶ್ನಿಸಿದ್ದಾರೆ. ಕಿನ್ನಿ ಮುಟ್ಟಾಗಿ ನೀರು ಹಾಕಿಕೊಂಡು ಮಡಿಕೋಣೆಗೆ ಬಂದಾಗ ಶಿವಪ್ಪಾಚಾರಿ ಮೈಲಿಗೆಯಾಯಿತು ಎಂದು ಆಕೆಯ ಕೆನ್ನೆಗೆ ಬಾರಿಸುತ್ತಾನೆ. ತಕ್ಷಣವೇ ಆಕೆಯ ಮನದಲ್ಲಿ ಹಲವು ಪ್ರಶ್ನೆಗಳು ಉದ್ಭವಿಸುತ್ತವೆ. ಮೂರು ನೀರು ಆದವಳನ್ನು ರಾತ್ರಿ ಮುಟ್ಟಬಹುದು. ಮಾಡಿದ ಅಡಿಗೆಯನ್ನು ತಿನ್ನಬಹುದು, ಆದರೆ ಮಡಿಕೋಣೆಗೆ ಬರಬಾರದ? ಎಂಬ ಹಲವು ವೈಚಾರಿಕ ಪ್ರಶ್ನೆಗಳು ಅವಳ ಮನಸ್ಸಿನಲ್ಲಿ ಏಳುತ್ತವೆ. ಆದರೆ ಆಕೆ ಯಾರ ಬಳಿಯಲ್ಲೂ ಹೇಳಿಕೊಳ್ಳುವುದಿಲ್ಲ. ಶಿವಪ್ಪಚಾರಿಯ ಅಮ್ಮ ರುಕುಮಾಚಾರ್ತಿಯು ಹುಂಜವನ್ನು ಓಡಿಸಲು ಹೋಗಿ ಜಾರಿಬಿದ್ದು ಕಾಲುಮುರಿದು ಕೊಂಡರೆ, ಶಿವಪ್ಪಾಚಾರಿ ಅವಳನ್ನು ವೈದ್ಯರಲ್ಲಿಗೆ ಕರೆದುಕೊಂಡು ಹೋಗುವ ಬದಲು ಮಡಿಕೋಣೆಯನ್ನು ಶುದ್ಧೀಕರಿಸುವ ಕೆಲಸದಲ್ಲಿ ತೊಡಗುತ್ತಾನೆ. ಇದಕ್ಕೆಲ್ಲ ಕಾರಣ ತನ್ನ ಹೆಂಡತಿ ಮಾಡಿದ ಮೈಲಿಗೆಯ ಕಾರಣ ಎಂದು ತಿಳಿಯುತ್ತಾನೆ. ಇಲ್ಲಿ ಮೌಢ್ಯತೆ ಮೆರೆಯುತ್ತದೆ. ಸಂಪ್ರದಾಯಗಳಿಗೆ ಜೋತುಬಿದ್ದಿರುವ ಶಿವಪ್ಪಾಚಾರಿ ತನ್ನ ಮೂಢನಂಬಿಕೆಯಿಂದ ತನ್ನ ತಾಯಿ ಮತ್ತು ಹೆಂಡತಿಯನ್ನು ನಿಕೃಷ್ಟವಾಗಿ ನಡೆಸಿಕೊಳ್ಳುತ್ತಾನೆ. ಕಿನ್ನಿಯ ಮನಸ್ಸಿನಲ್ಲಿ ಹಲವು ಪ್ರಶ್ನೆಗಳು ಹುಟ್ಟಿಕೊಂಡರೂ ಯಾವುದು ಪ್ರತಿರೋಧನಾತ್ಮಕ ನೆಲೆಗೆ ತಿರುಗುವುದಿಲ್ಲ. ಇಲ್ಲಿ ಪರಂಪರೆಯ ಮೌಢ್ಯತೆ ಗೆಲ್ಲುವುದನ್ನು ಕಥೆ ಚಿತ್ರಿಸುತ್ತದೆ.

- **ಅಪ್ರಜ್ಞಾಪೂರ್ವಕ ನೆಲೆಯಲ್ಲಿ ಪ್ರತಿರೋಧದ ನೆಲೆಗಳು :-**

ಮಹಿಳೆ ತನ್ನ ದೇಹವನ್ನು ವಿವಾಹ ಮೂಲಕ ಅಧೀನಪಡಿಸಿಕೊಂಡವಳು ಅದರಿಂದ ಹೊರಬರಲು ಸಾಧ್ಯವಿಲ್ಲ. ಆಕೆಗೆ ತನ್ನ ಅಧೀನ ಸ್ಥಿತಿಯ ಅರಿವಿದ್ದರೂ ಮುಕ್ತಳಾಗಿ ಅಭಿವ್ಯಕ್ತಗೊಳಿಸುವ ಅವಕಾಶವಿಲ್ಲ. ಶೀಲ – ಅಶ್ಲೀಲ ನೆಲೆಯಲ್ಲಿ ಮಡಿವಂತಿಕೆಯ ನೆಪದಲ್ಲಿ ಆಕೆಯನ್ನು ಮತ್ತಷ್ಟು ಶೋಷಣೆಗೊಳಪಡಿಸಲಾಗಿದೆ. ಈ ನೆಲೆಯಲ್ಲಿ ವೈದೇಹಿಯವರ 'ಗೂಡಿನೊಳಗೆ ಒಂದು ಹಕ್ಕಿ' ಕತೆಯಲ್ಲಿನ ಹೆಣ್ಣು ಒಂದು ದಿನ ಪೂರ್ತಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಆಸೆಪಡುವ ಈಕೆ ಸ್ವೇಚ್ಛೆಯನ್ನು ಅನುಭವಿಸಲು ಹೋಗಿ ಗಂಡನಿಗೆ ಹೊರಗಿನಿಂದ ಬೀಗ ಹಾಕಿಹೋಗಲು ತಿಳಿಸಿದವಳು. ನಾನಾ ಕಸರತ್ತುಗಳನ್ನು ಮಾಡುವ ಇಚ್ಛೆ ಹೊಂದುತ್ತಾಳೆ. ಕೂಗಬೇಕು, ಹಾಡಬೇಕು, ಮತ್ತು ಶಿಳ್ಳೆ ಹಾಕಬೇಕೆಂದು ಕೊಂಡವಳು, ಆ ಆಸೆಗಳನ್ನು

ಹಾಗೆ ಅದುಮಿಡುತ್ತಾಳೆ. ಆಕೆಗೆ ತಾನು ಬೋನಿನಲ್ಲಿ ತಿರುಗಾಡುವ ಹುಲಿಯಂತೆ ಅನಿಸುತ್ತದೆ. ಗಂಡನ ಪ್ಯಾಂಟು ಶರ್ಟ್ ತೊಟ್ಟು ನಿಂತವಳಿಗೆ ಅದೂ ಬೇಸರವೆನಿಸುತ್ತದೆ. ತೆಗೆದು ಬಿಸಾಕಿದವಳಿಗೆ ತಾನೊಬ್ಬ ಕ್ಯಾಬರೆ ನರ್ತಕಿ ಎನಿಸುತ್ತದೆ. ಕ್ಷಣಗಳು ಕಳೆದಂತೆ ತನ್ನ ಸ್ಥಿತಿ ನಾಲ್ಕು ಗೋಡೆಯ ನಡುವೆ ಬಂಧಿತವಾಗಿರುವಂತೆನಿಸಿ ಉಸಿರುಗಟ್ಟುತ್ತದೆ. ಹೆಣ್ಣಿನ ಸ್ವಾತಂತ್ರ್ಯ ಮತ್ತು ಸ್ವಚ್ಛಂದತೆಯನ್ನೂ ಕುರಿತ ಭಯವು ಕಾಡಿಸುತ್ತದೆ. ಅಂತಿಮವಾಗಿ ಮತ್ತು ಮೊದಲಿನಂತೆ ಅಲಂಕರಿಸಿಕೊಂಡು ಬಾಗಿಲು ತೆಗೆಯುವುದನ್ನೇ ಕಾಯುವ ಈಕೆಗೆ ನಿರ್ಬಂಧದಲ್ಲಿನ ಸ್ವಾತಂತ್ರ್ಯವೇ ನೆಮ್ಮದಿ ಎನಿಸುತ್ತದೆ. ಇವೆಲ್ಲಾ ಸಂಪ್ರದಾಯಿಕ ಮೌಲ್ಯಗಳು ಹಾಗೂ ಸ್ತ್ರೀ ವಿಮೋಚನೆಯ ನಡುವೆ ನಾಯಕಿಯ ದ್ವಂದ್ವ ಮನಸ್ಸು ಕಾಣಬಹುದು. ಸ್ತ್ರೀ ಪ್ರತಿರೋಧನೆಯ ಕಡೆಗೆ ಪುಟಿಯುವ ಇವರ ಯಾವುದೇ ಕತೆಯನ್ನು ತೆಗೆದುಕೊಂಡರೂ ಈ ಕತೆಯ ನಾಯಕಿ ಕೊನೆಯ ಹಂತದವರೆಗೂ ಸ್ತ್ರೀ ಪ್ರತಿರೋಧನೆಯ ನಿಟ್ಟಿನಲ್ಲೇ ಬೆಳೆಯುತ್ತಾ ಹೋಗಿ, ಅಂತ್ಯದಲ್ಲಿ ಮತ್ತೆ ಸಂಪ್ರದಾಯದ ಮೌಲ್ಯ ಸೇರಿಹೋಗುವುದನ್ನು ಕಾಣಬಹುದು.

- **ಪ್ರಜ್ಞಾಪೂರ್ವಕ ಪ್ರತಿರೋಧ ನೆಲೆಗಳು :-**

ಮಹಿಳೆಯರು ತಮ್ಮ ಮೇಲಾಗುತ್ತಿರುವ ಶೋಷಣೆಯನ್ನು ಅಥವಾ ಅಭಿಪ್ರಾಯಗಳ ಹೇರಿಕೆಯನ್ನು ಪ್ರಜ್ಞಾಪೂರ್ವಕವಾಗಿ ನೇರವಾದ ಮಾತುಗಳ ಮೂಲಕವೇ ಪ್ರತಿರೋಧ ವ್ಯಕ್ತಪಡಿಸುವುದು. ಇವರ ಪ್ರತಿರೋಧದ ನೆಲೆಯು ಕಣ್ಣಿಗೆ ಕಾಣುವಂತಹ ಶೋಷಣೆಯ ಸಂದರ್ಭಗಳಾಗಿವೆ. ಈ ನೆಲೆಯಲ್ಲಿ ಕತೆಗಳನ್ನು ಗಮನಿಸಬಹುದು.

ವೈದೇಹಿಯವರ 'ವಾಣಿಮಾಯಿ' ಎಂಬ ಕತೆಯಲ್ಲಿನ ವಾಣಿಮಾಯಿಗೆ ಚಿಕ್ಕವಯಸ್ಸಿನಿಂದಲೂ ಅವಳ ಬಂಧುವಾದ ನರಸಿಂಹನನ್ನು ಕಂಡರೆ ಅಷ್ಟಕ್ಕಷ್ಟೇ!. ಹೆಂಗಸರು ಚಪ್ಪಲಿ ಮುಟ್ಟುವುದನ್ನು ವಿರೋಧಿಸುವ ಇವನ ಅಭಿಪ್ರಾಯದಲ್ಲಿ ನಾಯಕಸಾನಿಯರು ಮಾತ್ರ ಮೆಟ್ಟು ಮೆಟ್ಟುತ್ತಾರೆ. ವಾಣಿಮಾಯಿಗೆ ಅವಳ ದೊಡ್ಡಪ್ಪ ತಂದುಕೊಟ್ಟ ಮೆಟ್ಟನ್ನು ಕಂಡು ಸಿಟ್ಟಾಗಿ ಅವಳ ಕಾಲಿಗೆ ಗಾಯ ಮಾಡುತ್ತಾನೆ. ಮುಂದೆ ಎಷ್ಟೋ ವರ್ಷಗಳ ನಂತರ ಅವಳಿಗೆ ಮೊಮ್ಮಕ್ಕಳಾಗಿ ಹಾಸಿಗೆಯಲ್ಲಿ ಖಾಯಿಲೆ ಬಿದ್ದು ಮಲಗಿದ್ದಾಗಲೂ ಅವಳನ್ನು ನೋಡಲು ಬಂದ ಜನರ ಮುಂದೆ ಅವಳ ಚಿಕ್ಕಂದಿನಲ್ಲಿದ್ದ ಚಪ್ಪಲಿ ಆಸೆಯ ಪ್ರಸಂಗವನ್ನು ಆಡಿಕೊಂಡು ನಗುತ್ತಾನೆ. ಪ್ರಜ್ಞೆ ಬಂದ ವಾಣಿಮಾಯಿ ನರಸಿಂಹನನ್ನು ಬಳಿಗೆ

ಕರೆಸಿಕೊಂಡು ಅವನ ಮುಖ, ಮೂಗು ಜಜ್ಜಿ ರಕ್ತಬರುವಂತೆ ಬಲಗಾಲನ್ನು ಎತ್ತಿ ಒದೆದು ತನ್ನ ಮನದೊಳಗೆ ಉರಿಯುತ್ತಿದ್ದ ಹತಾಶೆಯ ಬೇಗೆಯನ್ನು ಶಮನ ಮಾಡಿಕೊಳ್ಳುತ್ತಾಳೆ.

ಅನುಪಮಾ ಪ್ರಸಾದ್‌ರವರ "ಖಾದಿ ಅಂಗಿ"ಯ ಸೀತ್ತತೆಯು ಪುರುಷನ ಯಜಮಾನ್ಯದ ವಿರುದ್ಧ ಗಟ್ಟಿಯಾಗಿ ಕ್ಯಾಕರಿಸುವುದರ ಮೂಲಕ ಆಕೆ ದನಿ ಎಬ್ಬಿಸಬಲ್ಲಳು. ಹೆಣ್ಣು ಮನೆಯೊಳಗಣ ಗೋಡೆಗಳಿಗಷ್ಟೇ ಸೀಮಿತ ಅನ್ನುವ ಪರಂಪರೆ ಕಟ್ಟಿದ ನಿಯಮವನ್ನುಲ್ಲಂಘಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ನಡೆಯುವ ಹೋರಾಟವನ್ನು ಆಕೆ ಬೆಂಬಲಿಸಬಲ್ಲಳು. ತಾನು ಗಾಢವಾಗಿ ಪ್ರೀತಿಸಿದ ಕೃಷ್ಣಾನಂದ ರಾಜಕೀಯ ಹೋರಾಟದಲ್ಲಿ ಸತ್ತಾಗ ಹಿರಿಯರ ಇಚ್ಛೆಯ ವಿರುದ್ಧವಾಗಿ ನಿಂತು ವಿವಾಹವಾಗದೆ ಉಳಿದು ಆತನ ನೆನಪಿನಲ್ಲೇ ಬದುಕು ಸವೆಸಿದ ದಿಟ್ಟತನ ಆಕೆ ಪರಂಪರೆ ವಿಧಿಸಿದ ಕಟ್ಟುಪಾಡುಗಳನ್ನು ಧಿಕ್ಕರಿಸಿ ನಡೆಯುತ್ತಾಳೆ.

- **ಮೌನದ ನೆಲೆಯಲ್ಲಿ ಪ್ರತಿರೋಧದ ನೆಲೆಗಳು :–**

ಶೋಷಣೆಗೊಳಗಾದ ಪಾತ್ರಗಳು ತಮಗಾಗುತ್ತಿರುವ ಅನ್ಯಾಯದ ಅರಿವಿದ್ದರೂ ನಾನಾ ಕಾರಣಗಳಿಂದ ತಮ್ಮ ಪ್ರತಿರೋಧವನ್ನು ಮೌನವಾಗಿ ವ್ಯಕ್ತಪಡಿಸುವುದು.

ಸಂಪ್ರದಾಯಿಕ ಕೌಟುಂಬಿಕ ಆವರಣದೊಳಗೆ ವೈಯಕ್ತಿಕ ಮನಸ್ಸು ಮುರುಟಿಕೊಳ್ಳುವ ಅನಿವಾರ್ಯತೆಯ ಸಾರಾ ಅಬೂಬಕ್ಕರ್‌ರ 'ಚಪ್ಪಲಿಗಳು' ಕತೆಯಲ್ಲಿ ಅಭಿವ್ಯಕ್ತವಾಗಿದೆ. ಹಿಂದೂ ಸಮಾಜದಲ್ಲಿರುವಂತೆ ಮುಸ್ಲಿಂ ಸಮಾಜದಲ್ಲೂ ಪುರುಷ ಕೇಂದ್ರಿತ ಆಶಯಗಳು ಹೆಣ್ಣು ಸಮಾಜಜೀವಿ ಎಂಬುವುದನ್ನು ತಿರಸ್ಕರಿಸುತ್ತವೆ. ಕೇವಲ ಸಂತಾನದ ಅನಿವಾರ್ಯತೆಗೆ ಅವಳನ್ನು ಸೀಮಿತವಾಗಿಸಿ ದುಡಿಯುವ ಒಂದು ಸಾಧನವಾಗಿ ಪರಿವರ್ತಿಸಲಾಗಿದೆ. ಇಲ್ಲಿ ಸಮೀರಾ ತೋರುವ ಮೌನ ಪ್ರತಿರೋಧ ಅರ್ಥಪೂರ್ಣವಾಗಿದೆ.

* **<u>ಸಮಾನ ಮನಸ್ಕರೊಂದಿಗಿನ ಪ್ರತಿರೋಧ ನೆಲೆಗಳು :-</u>**

ಮಹಿಳಾ ಕಥಾ ಸಾಹಿತ್ಯದಲ್ಲಿನ ಪಾತ್ರಗಳು ತಮಗಾಗುತ್ತಿರುವ ಶೋಷಣೆಯ ವಿರುದ್ಧ ಪ್ರತಿರೋಧವನ್ನು ಸಮಾನ ಮನಸ್ಕ ವ್ಯಕ್ತಿಗಳೊಂದ್ಗೆ ತೋಡಿಕೊಂಡಿವೆ. ಈ ನೆಲೆಯಲ್ಲಿ ವೈದೇಹಿಯವರ 'ವರ್ತುಲ' ಕಥೆಯಲ್ಲಿ ಕುಸುಮಾಳ ಅತ್ತೆಯು ಸೊಸೆ ಮನೆಗೆ ಬಂದ ಕಾರಣ ಮಗ ಪಟ್ಟಣಕ್ಕೆ ಹೋಗಿ ನೆಲೆಸುವಂತಾಯಿತೆಂದು ಆಡಿಕೊಳ್ಳುತ್ತಿರುತ್ತಾಳೆ. ಮಗನಿಗೆ ನಗರದ ಸರಕಾರಿ ಉದ್ಯೋಗಕ್ಕೆ ಸೇರಬೇಕೆಂಬ ಆಸೆ. ಸೊಸೆಗೆ ಹಳ್ಳಿಯಲ್ಲೇ ಇರಲು ಇಷ್ಟಪಟ್ಟಿರುತ್ತಾಳೆ. ಅತ್ತೆಯ ವ್ಯಂಗ್ಯ ಮಾತಿಗೆ ಬೇಸತ್ತು ನನ್ನಿಂದ ಮಗ ಊರುಬಿಟ್ಟ ಎಂಬ ಅಪವಾದ ಹೋಗಲಿ ಎಂದು ಭಾವಿಸಿ ಗಂಡನಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಊರಿಗೆ ಹೋಗುವ ಎನ್ನುತ್ತಾಳೆ. ಆಗ ಆತ ಆಸ್ತಿ ನಂಬಿಕೊಂಡರೆ ಮುಂದೆ ನಮಗೆ ತಣ್ಣೀರು ಬಟ್ಟೆಯೇ ಗತಿ ಎಂದು ಹೇಳಿ ಅವಳ ಆಸೆಗೆ ತಣ್ಣೀರೆರಚುತ್ತಾನೆ. ಮಗಳ ಮದುವೆ ಮದ್ರಾಸಿನಲ್ಲಿ ಹುಡುಗನೊಡನೆ ನಿಶ್ಚಯವಾಗುತ್ತದೆ. ಆಗ ಅತ್ತೆಯ ಬಾಯಿಯಿಂದ ಅವರ ಮನೆಯಲ್ಲಿ 15 ಜನರಿರುವ ದೊಡ್ಡ ಸಂಸಾರ ದೊಡ್ಡಿಯಂತೆ ಕಾಣುತ್ತದೆ ಎಂಬ ಮಾತು ಬರುತ್ತದೆ.

ನನ್ನ ಮಗಳು ಯಾಕೆ ಅಲ್ಲಿರಬೇಕು. ಗಂಡನ ಜೊತೆ ತಾನೇ ಇರುತ್ತಾಳೆ ಎಂದು ಅವಿಭಕ್ತ ಕುಟುಂಬದ ಬಗ್ಗೆ ಗೇಲಿ ಮಾಡುತ್ತಾಳೆ. ಮಗಳು ಮಾತ್ರ ಅತ್ತೆ ಮನೆಯಲ್ಲಿ ಇರಬೇಕು. ಸೊಸೆ ಮಾತ್ರ ಜೊತೆಯಲ್ಲಿರಬೇಕು ಎಂಬ ಆಸೆಗೆ ಸೊಸೆಯ ಕಣ್ಣು ತೆರೆಯುತ್ತದೆ. ಅತ್ತೆ ಮನೆಯಲ್ಲಿ ಇಪ್ಪತ್ತು ಜನ ಇದ್ದು, ದಿನಾ ಮೂರು ಸೇರು ಅಕ್ಕಿ ಬೇಯುವ ಮನೆ, ಇಂಥಾ ಮನೆ ಆಗಿದ್ರೆ ಅತ್ತೆ ಖಂಡಿತ ತನ್ನ ಮಗಳನ್ನು ಕೊಡ್ತಿರಲಿಲ್ಲ. ಆದರೆ ತನ್ನ ತಂದೆ ತಾಯಿ ಆಗಿದ್ರೆ ಅತ್ತೆ ಖಂಡಿತಾ ತನ್ನ ಮಗಳನ್ನು ಕೊಡ್ತಿರಲಿಲ್ಲ. ಆದರೆ ತನ್ನ ತಂದೆ ತಾಯಿ ಮನೆ ನೋಡದೆ ಹೆಣ್ಣು ಕೊಟ್ಟದ್ದನ್ನು ನೆನಪಿಸಿಕೊಳ್ಳುತ್ತಾ ಒಂದು ನಿರ್ಧಾರಕ್ಕೆ ಬರುತ್ತಾಳೆ. ಅದೆಂದರೆ ತಮ್ಮ ಮಗಳನ್ನೇ ಕೊಡಲೊಪ್ಪದ ವಾತಾವರಣದಲ್ಲಿ ನನಗೆ "ನೀನು ಇರಬೇಕು" ಎಂದು ಬೋಧಿಸುವ ಹಕ್ಕು ಇವರಿಗೆಲ್ಲಿದೆ? ಗಟ್ಟಿ ಕೇಳಿದರೆ ನಮಗೆ ಮನಸ್ಸಿದ್ದರೆ ನಾವು ಇರಬಹುದು, ಇಲ್ಲವಾದರೆ ಇಲ್ಲ ಎಂದುಕೊಂಡು ಹಳ್ಳಿಗೆ ಹೋಗಿ ನೆಲೆಸುವ ನಿರ್ಧಾರಕ್ಕೆ ಬಂದು ಬಿಡುತ್ತಾಳೆ. ಮಗಳು ಬೇರೆ, ಸೊಸೆ ಬೇರೆ ಎಂದು ವಿಂಗಡಿಸುವ ಬುದ್ಧಿಯಿಂದ ಅತ್ತೆ ಸೊಸೆಯರ ನಡುವೆ ಕಿತ್ತಾಟ ನಡೆಯುವುದು ಮಗಳ ತಾಯಿಯಾಗಿ ಆಲೋಚಿಸುವುದನ್ನೇ ಸೊಸೆಯ ತಾಯಿಯ ದೃಷ್ಟಿಯಿಂದಲೂ

ನೋಡಿದರೆ, ಅಪಮಾನಗಳು ಬರುವುದಿಲ್ಲ ಎಂಬುವುದಿಲ್ಲಿ ಮಿಥ್ಯ. ಹೀಗಾಗಿ ಅತ್ತೆಯ ತಾರತಮ್ಯ ನೀತಿಗೆ ಸೊಸೆ ಊರಿಗೆ ಹೋಗದಿರುವ ನಿರ್ಧಾರ ತೆಗೆದುಕೊಳ್ಳುವುದು ಒಂದು ರೀತಿಯ ಸಮಾನ ವಯಸ್ಕ ವ್ಯಕ್ತಿಯೊಂದಿಗೆ ಪ್ರತಿರೋಧವನ್ನು ವ್ಯಕ್ತಪಡಿಸುವುದೇ ಆಗಿದೆ.

- **ಸ್ವಗತದ ನೆಲೆಯ ಪ್ರತಿರೋಧ :-**

ಪುರುಷ ಪ್ರಧಾನ ಹಿತಾಸಕ್ತಿಯ ನೆಲೆಯಲ್ಲಿ ಶೋಷಣೆಗೊಳಗಾದ ಹಲವು ಸ್ತ್ರೀ ಪಾತ್ರಗಳು ತಮಗಾಗುತ್ತಿರುವ ಅನ್ಯಾಯದ ಅರಿವಿದ್ದರೂ ಯಾರೊಂದಿಗೂ ಅದನ್ನು ಹಂಚಿಕೊಳ್ಳುವಷ್ಟು ಧೈರ್ಯವಿಲ್ಲ. ತಮ್ಮಷ್ಟಕ್ಕೆ ತಾವು ಅಂತರಂಗದ ನುಡಿಗಳನ್ನು ಹೊರಹಾಕುವ ಮೂಲಕ ಮಾನಸಿಕ ನೆಮ್ಮದಿಯನ್ನು ಪಡೆದುಕೊಂಡಿವೆ.

ವೈದೇಹಿಯವರ ಒಂದು ಅಪರಾಧ ತನಿಖೆ ಕಥೆಯಲ್ಲಿ ಕುಸುಮ ಕಲಿತು ಆರ್ಥಿಕವಾಗಿ ಸಬಲವಾಗುವ ಆಕೆ ಶೋಷಿತ ಹೆಣ್ಣಾಗಿ ಉಳಿಯುತ್ತಾಳೆ. ಮುಖ್ಯವಾಗಿ ತಾನು ಗಂಡನ ಮನೆಬಿಟ್ಟು ಬಂದ ಬಗ್ಗೆ ಯಾರಲ್ಲೂ ತಿಳಿಸದೆ ಕುಸುಮ ತನ್ನ ನೋವನ್ನೆಲ್ಲಾ ಮನದಲ್ಲೇ ಹುದುಗಿಸಿಕೊಳ್ಳುತ್ತಾಳೆ.

**ಅಡಿಟಿಪ್ಪಣಿ**

೧ ಗಾಯತ್ರಿ ನಾವಡ 'ಮಹಿಳಾ ಸಂಕಥನ', ಪುಟ ೯

೨ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೩ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೪ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೫ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೬ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೭ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೮ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೯ ರಾಮಚಂದ್ರಪ್ಪ ಬರಗೂರು, 'ಪುನರ್ ಮೌಲೀಕರಣ', ಪುಟ ೧೭೮

೧೦ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೧೧ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೧೨ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೧೩ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೧೪ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

೧೫ ಸಬಿಹಾ ಭೂಮಿಗೌಡ, 'ಬಗೆ', ಪುಟ ೨೩

೧೬ ಸಬಿಹಾ ಭೂಮಿಗೌಡ, 'ಬಗೆ', ಪುಟ ೨೪

೧೭ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೫

೧೮ ಸಬಿಹಾ ಭೂಮಿಗೌಡ, 'ಬಗೆ', ಪುಟ ೨೪

೧೯ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೫

೨೦ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೪

೨೧ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೪

೨೨ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೮

೨೩ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೮

೨೪ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೮

೨೫ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೯

೨೬ ಸಬಿಹಾ ಭೂಮಿಗೌಡ, 'ಬಗೆ', ಪುಟ ೧೯

೨೭ ವೈದೇಹಿ ಮುಂತಾದ ಕೆಲವು ಪುಟಗಳು ಪುಟ ೫೩

೨೮ ವೈದೇಹಿ ಮುಂತಾದ ಕೆಲವು ಪುಟಗಳು ಪುಟ ೫೩

೨೯ ವೈದೇಹಿ ಮುಂತಾದ ಕೆಲವು ಪುಟಗಳು ಪುಟ ೫೩

೩೦ ವೈದೇಹಿ ಮುಂತಾದ ಕೆಲವು ಪುಟಗಳು ಪುಟ ೫೭

೩೧ ಸಬಿಹಾ (ಸಂ) ಭೂಮಿಗೌಡ, 'ಚಂದ್ರಗಿರಿ', ಪುಟ ೩೪೨

೩೨ ಗಂಗಾಪಾದೇಕಲ್, 'ಮನ್ನಣೆಯ ದಾಹ' ಮುನ್ನುಡಿಯಿಂದ.

೩೩ ಸಬಿಹಾ (ಸಂ) ಭೂಮಿಗೌಡ, 'ಚಂದ್ರಗಿರಿ', ಪುಟ ೬

೩೪ ಸಬಿಹಾ (ಸಂ) ಭೂಮಿಗೌಡ, 'ಚಂದ್ರಗಿರಿ', ಪುಟ ೩೦೭

೩೫ ಓ. ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ಪುಟ ೪೦೫

೩೬ ಓ. ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ಪುಟ ೪೦೫

೩೭ ಓ. ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ಪುಟ ೪೦೫

೩೮ ಓ. ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ಪುಟ ೪೦೫

೩೯ ಓ. ಎಲ್. ನಾಗಭೂಷಣ್, ವಿಮರ್ಶೆಯ ಪರಿಭಾಷೆ, ಪುಟ ೪೦೫

೪೦ ಎಚ್. ಎಸ್. ಶ್ರೀಮತಿ, 'ಚಹರೆ', ಪುಟ ೮

೪೧ ವಿಜಯ ದಬ್ಬೆ, 'ನಾರಿ ದಾರಿ ದಿಗಂತ', ಪುಟ ೮೦

೪೨ ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ (ಸಂ) 'ಸ್ತ್ರೀವಾದಿ ಸಾಹಿತ್ಯ ವಿಮರ್ಶೆ' ಪುಟ ೧೮

೪೩ ಪ್ರೇಮ ಸಿರ್ಸೆ, 'ಮಹಿಳೆ ಸಮಾಜ ಮತ್ತು ಸವಾಲುಗಳು' ಪುಟ ೨

೪೪ ಬರಗೂರು ರಾಮಚಂದ್ರಪ್ಪ, 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀವಾದಿ ಚಿಂತನೆ' ಪುಟ ೧೮

೪೫ ಎನ್. ಗಾಯತ್ರಿ, 'ಮಹಿಳೆ ಬಿಡುಗಡೆಯ ದಾರಿಯಲ್ಲಿ' ಪುಟ ೧೮

೪೬ ಡಾ. ಇಂದಿರಾ, 'ಮಹಿಳೆ, ಸಮಾಜ ಮತ್ತು ಸಂಸ್ಕೃತಿ' ಪುಟ ೨

೪೭ ಉಷಾ, ಎಂ. 'ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು' ಪುಟ ೪೧

೪೮ ನೇಮಿಚಂದ್ರ, ಮಹಿಳಾ ಅಧ್ಯಯನ ಪುಟ ೧೦

೪೯ ಆರ್. ಇಂದಿರಾ, 'ಸ್ತ್ರೀವಾದ ದಿಕ್ಸೂಚಿ ಮೊದಲ ಮಾತು'

೫೦ ಗಾಯತ್ರಿ ನಾವಡ, 'ಮಹಿಳಾ ಸಂಕಥನ' ಪುಟ ೬೮

೫೧ ಮಂಗಳ ಪ್ರಿಯದರ್ಶಿನಿ ಡಾ. ಡಿ. 'ಸ್ತ್ರೀವಾದ ಅರ್ಥ ಮತ್ತು ವ್ಯಾಪ್ತಿ' ಪುಟ ೩೦

೫೨ ಮಂಗಳ ಪ್ರಿಯದರ್ಶಿನಿ ಡಾ. ಡಿ. 'ಸ್ತ್ರೀವಾದ ಅರ್ಥ ಮತ್ತು ವ್ಯಾಪ್ತಿ' ಪುಟ ೨೯

೫೩ ಎನ್. ಗಾಯತ್ರಿ, 'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ' ಪುಟ ೭೬

೫೪ ಆಮೂರ ಜಿ. ಎಸ್. 'ಅವಳ ಕಥೆಗಳು' ಪ್ರಸ್ತಾವನೆಯಿಂದ

# ಅಧ್ಯಾಯ: ೩

## ಲೇಖಕಿಯರ ಕಥಾಸಾಹಿತ್ಯದಲ್ಲಿ ಪ್ರತಿನಿಧಿತವಾಗಿರುವ

## ಕೌಟುಂಬಿಕ ಸಮಸ್ಯೆಗಳು

೩.೧ ತಾಯ್ತನ

೩.೨ ಗೃಹಿಣಿತ್ವ

೩.೩ ಮಗಳು-ಸೊಸೆ

೩.೪ ವೈಧವ್ಯ

೩.೫ ವೃದ್ದಾಪ್ಯ

೩.೬ ಲೈಂಗಿಕತೆ

## ೩.೧ ತಾಯ್ತನ

ಅಸಮಾನತೆಯೇ ಉಸಿರಾಗಿರುವ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಮಕ್ಕಳ ಬದುಕು ಎಷ್ಟೊಂದು ಅತಂತ್ರವಾಗಿದೆ ಎಂಬ ತೀವ್ರ ಕಾಳಜಿಯಿಂದ ಹೊರಹೊಮ್ಮಿದ ಸಾರಾ ಅಬೂಬಕ್ಕರ್‌ರವರ ಕಥೆಗಳ ಅಂತರಾಳಕ್ಕೆ ಇಳಿದಾಗ ಧರ್ಮದ ಹೆಸರಿನಲ್ಲಿ ಹೆಣ್ಣಿನ ಮೇಲಾಗುತ್ತಿರುವ ದೌರ್ಜನ್ಯ ಹಾಗೂ ಶೋಷಣೆ, ನೋವು ಅನಾವರಣಗೊಳ್ಳುತ್ತಾ ಹೋಗುತ್ತವೆ. ತಾಯಿಯಾಗಿ ಎಲ್ಲಾ ಜವಾಬ್ದಾರಿಗಳನ್ನು ಹೊತ್ತ ಹೆಣ್ಣು ನಿರಂತರ ಹೋರಾಟದಲ್ಲಿ ಬದುಕು ಸಾಗಿಸುತ್ತಾ ಕೊನೆಯುಸಿರೆಳೆದರೂ ಜವಾಬ್ದಾರಿ ಹೀನ ತಂದೆ ಸಾಯುವವರೆಗೂ ತನ್ನ ಸಂಸಾರದ ಭಾರವನ್ನು ಹೊರದೆ ಸಲೀಸಾದ ಜೀವನವನ್ನೇ ಸಾಗಿಸುತ್ತಿರುತ್ತಾನೆ.

ಸಾರಾ ಅಬೂಬಕ್ಕರ್ ಅವರ 'ಧರ್ಮ ಬಲೆ ಬೀಸಿದಾಗ' ಕಥೆಯನ್ನು ಅವಲೋಕಿಸಿದಾಗ ಕರೀಂ ಸಾಬರ ಹೆಂಡತಿ ಖತೀಜಾಬಿ ತಾಯಿಯಾಗಿ ತನ್ನ ಮಗಳ ಮೇಲಿನ ಕಾಳಜಿಯನ್ನು ತಂದೆಗೆ ನೂರು ಪಾಲು ಮಿಗಿಲಾಗಿ ವಹಿಸಿಕೊಂಡ ದಿಟ್ಟ ಹೆಣ್ಣು. ಮಸೀದಿಯ ಜಮಾಅತ್ ಸಮಿತಿಯ ತೀರ್ಪನ್ನು ಉಲ್ಲಂಘಿಸಿದ ಕಾರಣ ಅವಳ ಕುಟುಂಬವನ್ನು ಊರವರೆಲ್ಲರೂ ಬಹಿಷ್ಕರಿಸಬೇಕು ಎಂದು ಕಾನೂನು ಹೊರಡಿಸಿ ಡಂಗುರ ಸಾರಿದಾಗ ಆಕೆ ಸ್ವಲ್ಪ ಬೆಚ್ಚಿ ಬಿದ್ದಳೇ ವಿನಃ ಆಘಾತಗೊಂಡರೂ ಎಚ್ಚೆತ್ತುಕೊಂಡಳು.

ತನ್ನ ಮೇಲೆ ವ್ಯಭಿಚಾರ ಹಾಗೂ ಕುಡಿತದ ಸುಳ್ಳು ಆಪಾದನೆ ಹೊರಿಸಿ ತನಗೆ ಮಸೀದಿಗೆ ಕರೆಸಿ ಛಡಿ ಏಟು ಕೊಡಬೇಕೆಂದು ಮಸೀದಿ ತೀರ್ಮಾನವಿತ್ತಾಗ ಆಕೆ ಹೀಗೆ ಯೋಚನೆ ಮಾಡುತ್ತಾಳೆ... ತನ್ನನ್ನು ಮಸೀದಿಗೆ ಕರೆಸಿ ಛಡಿ ಏಟು ಕೋಡಬೇಕಾದರೆ ತಾನು ಕೊಲ್ಲಿ ರಾಷ್ಟ್ರಗಳಲ್ಲಿದ್ದೇನೆಯೇ? ವ್ಯಭಿಚಾರ ಮಾಡಬೇಕಾದರೆ ಸ್ತ್ರೀ ಪುರುಷರಿಬ್ಬರೂ ಇರಬೇಡವೇ? ಇಲ್ಲಿ ಶಿಕ್ಷೆ ತನಗೊಬ್ಬಳಿಗೆ ಹೇಗೆ ನೀಡಿದ್ದಾರೆ ? ಈ ಜನರ ಭಂಡತನವನ್ನು ಬಯಲಿಗೆಳೆಯದಿದ್ದರೆ ತನ್ನ ಹೆಸರು ಖತೀಜಾಬಿನೇ ಎಂದಲ್ಲ"...[೧] ಹೇಳುತ್ತಾಳೆ. ಇಲ್ಲಿ ಆಕೆಯ ಪ್ರತಿರೋಧದ ಧ್ವನಿ ಒಬ್ಬಳು ಜವಾಬ್ದಾರಿಯುತ ತಾಯಿಯಾಗಿ ತನ್ನ ಮಗಳ ಮೇಲಿನ ಕಾಳಜಿಯಿಂದ ತನ್ನ ಎಳೆಯ ವಯಸ್ಸಿನ ಮಗಳನ್ನು ಆಕೆಯ ತಂದೆಯ ವಯಸ್ಸಿನ ಗಂಡಸಿಗೆ ಮದುವೆ ಮಾಡಲು ಅವಳ ಮನಸ್ಸು ಸುತರಾಂ ಒಪ್ಪುವುದಿಲ್ಲ.

ತಾಯಿಯಾಗಿ ಆಕೆ ತನ್ನ ಮಗಳನ್ನು ಮುದುಕ ಮಸೀದಿಯ ಅಧ್ಯಕ್ಷನಾದ ಇಬ್ರಾಹಿಂ ಹಾಜಿಗೆ ಮದುವೆ ಮಾಡಲು ನಿರಾಕರಿಸಿದಳು. ಅದಕ್ಕೆ ಆಕೆ ಜಮಾತ್ ಸಮಿತಿಯನ್ನೇ ಎದುರು ಹಾಕಿಕೊಳ್ಳಲು

ನಿರ್ಧರಿಸುತ್ತಾಳೆ. ಗಂಡ ಕರೀಂ ಸಾಬಿ ತಂದೆಯಾಗಿ ಕರ್ತವ್ಯವನ್ನು ನಿಭಾಯಿಸದೇ ಇದ್ದಾಗ ಹೆಚ್ಚಿನ ಜವಾಬ್ದಾರಿಯನ್ನು ತನ್ನ ಸಂಸಾರಕ್ಕೋಸ್ಕರ ಆಕೆಯೇ ಹೊರೆ ಹೊತ್ತವಳು.

ತಾಯಿಯೊಬ್ಬಳ ದೀನ ಬದುಕು ವಿಸ್ತರಿಸಿಕೊಳ್ಳುವುದು 'ಅರಕ್ಷಿತ' ಕಥೆಯಲ್ಲಿ. ಕೈಜುಮ್ಮ ಏಳೆಂಟು ಮಕ್ಕಳ ತಾಯಿ. ಹಡೆದದ್ದು ಒಂದೇ ಗಂಡು, ಉಳಿದುವೆಲ್ಲಾ ಹೆಣ್ಣು ಮಕ್ಕಳು. ತೀವ್ರ ಬಡತನದಲ್ಲಿ ಅವರನ್ನು ಸಾಕಬೇಕಾದ ಮತ್ತು ಮದುವೆ ಮಾಡಬೇಕಾದ ಅನಿವಾರ್ಯತೆಯ ಸುಳಿಯಲ್ಲಿ ಬಿದ್ದವಳು. ಆಕೆಯ ಗಂಡ ದೂರದ ಊರಲ್ಲಿ ವ್ಯಾಪಾರಿಯಾಗಿದ್ದುಕೊಂಡು ಖರ್ಚಿಗೆ ಒಂದಿಷ್ಟು ಹಣ ಮಾತ್ರ ಕಳುಹಿಸಿ ಸಂಸಾರದ ಜವಾಬ್ದಾರಿಯಿಂದ ಕೈತೊಳೆದುಕೊಳ್ಳುತ್ತಿರುವ ಬೇಜವಾಬ್ದಾರಿಯ ಅಪ್ಪ. ಬಾಡಿಗೆ ಮನೆಯಲ್ಲಿದ್ದುಕೊಂಡು ಆಕೆ ಮಕ್ಕಳಿಗೆ ಮದುವೆ ಮಾಡಬೇಕು, ಚಿಕ್ಕವರಿಗೆ ಓದಿಸಬೇಕು.

ದೊಡ್ಡ ಮಗಳ ಮದುವೆಯ ಸಂದರ್ಭದಲ್ಲಿ ಆಕೆಯ ಒತ್ತಾಯಕ್ಕೆ ಒಂದು ದೊಡ್ಡ ಬಾಡಿಗೆ ಮನೆಯನ್ನು ಗೊತ್ತು ಮಾಡಿದನಾದರೂ ಕ್ರಮೇಣ ಬಾಡಿಗೆ ಕಟ್ಟಲಾಗದೆ ಹೋದಾಗ ಮನೆಯ ಯಜಮಾನನ ಕಿರುಕುಳದಿಂದ ಆಕೆ ತಪ್ಪಿಸಿಕೊಳ್ಳಲು ಹೆಣಗಾಡಬೇಕಾದ ಅನಿವಾರ್ಯತೆ. ತನ್ನ ಬಾಡಿಗೆ ಮನೆಯ ಜಾಗವನ್ನೆಲ್ಲಾ ಮನೆಯ ಯಜಮಾನ ಮತ್ತವನ ಗಂಡು ಮಕ್ಕಳು ಆಕ್ರಮಿಸಿ ಒಂದೇ ಒಂದು ಕೋಣೆಯನ್ನಷ್ಟೇ ಅವಳ ಸಂಸಾರಕ್ಕೆ ನೀಡಿದಾಗ ಯಜಮಾನನ ಗಂಡು ಮಕ್ಕಳಿಂದ ತನ್ನ ಹೆಣ್ಣು ಮಕ್ಕಳನ್ನು ರಕ್ಷಿಸಿಕೊಳ್ಳಲು ಆಕೆ ಒದ್ದಾಡುವ ತಾಯಿಯಾಗಿ ಆಕೆಯ ಮನದ ತಳಮಳ ಹೇಳತೀರದ್ದು. ಜೊತೆಗೆ ಅಳಿಯನ ಒತ್ತಡ ಬೇರೆ.

ತನ್ನ ಹೆಂಡತಿಯನ್ನು ಅದೇ ಬಾಡಿಗೆ ಮನೆಗೆ ಚೊಚ್ಚಲ ಬಾಣಂತನಕ್ಕೆ ಕಳಿಸಲಾರೆ, ಬೇರೆ ಮನೆ ಮಾಡು ಎಂದು ತಾಕೀತು. ಕೈಜುಮ್ಮ ಕಂಗೆಟ್ಟು ಹೋಗುತ್ತಾಳೆ. ಇಷ್ಟಾದರೂ ಗಂಡ ಉಸ್ತಾದ್ ವ್ಯಾಪಾರಕ್ಕೆ ಹೋದವ ಮನೆಗೆ ತಿರುಗಿ ಬಾರದೆ ಮಕ್ಕಳ–ಹೆಂಡತಿಯ ಯೋಗಕ್ಷೇಮ ವಿಚಾರಿಸದೆ ತಿಂಗಳಾನುಗಟ್ಟಲೆ ಕಳೆಯುವುದು ಅವನ ಜವಾಬ್ದಾರಿಹೀನ ಪ್ರವೃತ್ತಿ.

ತನ್ನ ಸಂಸಾರ–ಹೆಂಡತಿ–ಮಕ್ಕಳು ಅತಂತ್ರ ಸ್ಥಿತಿಯಲ್ಲಿರುವುದು ಅವನಿಗೆ ಗೊತ್ತಿದ್ದರೂ ಆತ ಅಪ್ಪನಾಗಿ ಯಾವುದರ ಪರಿವೆಯೇ ಇಲ್ಲದೆ ಬದುಕಿದವ. ಕೊನೆಗೆ ಆಕೆ ತನ್ನ ಸಂಕಟ ಕುತ್ತಿಗೆಯವರೆಗೆ ಬಂದಾಗ ತನ್ನ ಗಂಡನ ಹುಡುಕುವಿಕೆಗಾಗಿ ತನ್ನ ಎಳೆಯ ವಯಸ್ಸಿನ ಗಂಡು ಮಗುವನ್ನೇ

ಕಳೆದುಕೊಳ್ಳುತ್ತಾಳೆ. ಆಕೆಯ ಮಾತೃ ಹೃದಯ ಎಷ್ಟೋ ವರ್ಷಗಳವರೆಗೆ ತನ್ನ ತಂದೆಯನ್ನು ಹುಡುಕಿ ಹೊರಟ ಮಗನ ಹಿಂದಿರುಗುವಿಕೆಗಾಗಿ ಹಂಬಲಿಸುತ್ತಲೇ ಇರುತ್ತದೆ.

'ಅಪಹರಣ' ಕತೆಯಲ್ಲಿ ಸಂಶೋಧನೆಯಲ್ಲಿ ತೊಡಗಿರುವ ಗಂಡ ತನ್ನ ಸಂಸಾರದ ಸಂಪೂರ್ಣ ಜವಾಬ್ದಾರಿ ಮರೆತ ಆಸಾಮಿ. ಅಲ್ಲೂ ಹೆಣ್ಣೇ ತಾಯಿಯಾಗಿ ಸಂಸಾರದ ಹೊಣೆ ಹೊತ್ತವಳು. ಗಂಡನ ಬೇಜವಾಬ್ದಾರಿತನದಿಂದ ತಾನು ಹೆತ್ತ ಮಗುವನ್ನೇ ಕಳೆದುಕೊಂಡ ನತದೃಷ್ಟೆ. 'ಬೆಂಕಿ ಬಿತ್ತು ನಿಮ್ಮ ಸಂಶೋಧನೆಗೆ'[೨] ಎಂಬ ಆಕೆಯ ಕಠೋರವಾದ ಮಾತಿನಲ್ಲಿ ಯಜಮಾನ ಬುದ್ಧಿಗೆ ತಾಯ್ತನದ ಎದೆಯೊಡಲಿನ ಆಳದಿಂದ ಸೀಳಿ ಬಂದ ಆಕೆಯ ಪ್ರತಿರೋಧದ ಧ್ವನಿ. ಬೆಳೆದ ಮಗಳ ಮದುವೆಯ ಚಿಂತೆಯಾಗಲೀ, ಓದುವ ಮಗನ ಖರ್ಚಿನ ಗೋಜಾಗಲೀ ಇಲ್ಲದ ಅಪ್ಪನಾಗಿ ದೊಡ್ಡ ಸಂಶೋಧಕನಾಗಲು ಹೊರಡುತ್ತಾನೆ.

ಆದರೆ ಸಂಶೋಧನೆಯಲ್ಲೂ ಸಾರ್ಥಕತೆಯಾಗಲೀ, ಗೆಲುವಾಗಲೀ ಕಾಣದೆ ಸೋತು ಹೋಗುತ್ತಾನೆ. ಮಗಳ ಮದುವೆಯ ಚಿಂತೆಗೆ ಹೋಗದೆ ಗ್ರಂಥ ಪ್ರಕಟಣೆಗೆ ಮುಂದಾಗುವ ಆತನ ಹೆಂಡತಿ ಗೊಣಗಿ ಕೆಂಗಣ್ಣಿನಿಂದ ನೋಡುವಾಗ ನಯವಾದ ಮಾತುಗಳಿಂದ "ಇಷ್ಟು ದಿನ ಹೊತ್ತ ಭಾರವನ್ನು ಇನ್ನೊಂದಿಷ್ಟು ದಿನ ಹೊರಲಾರೆಯಾ? ಎಂದಾಗ ಆಕೆ ಪ್ರತಿರೋಧವೆತ್ತುವುದು. ಹೀಗೆ... ಭಾರ ಹೊರಿಸಿದಾಗ ಹೊರದೆ ಇನ್ನೇನು ಮಾಡಲಿ?"[೩] ತಾಯಿಯಾಗಿ ಅವಳು ಇಷ್ಟನ್ನಾದರೂ ಹೇಳದೆ ಬೇರೆ ದಾರಿಯಿಲ್ಲ ಎನ್ನುತ್ತಾಳೆ.

'ಮೂಲೆ ಮುಟ್ಟಿದ ಹುಳು' ಕಥೆಯಲ್ಲಿ ಸರಸಮ್ಮ ಗಂಡನಿಂದ ಮೋಸಕ್ಕೊಳಗಾದ ಅಸಹಾಯಕ ಹೆಣ್ಣು ಮಗಳು. ಗಂಡು ಮಗು 'ವಿಜಯ'ನನ್ನು ಆಕೆಯ ಕೈಗಿತ್ತು ಇನ್ನೊಬ್ಬಳನ್ನು ಮದುವೆಯಾಗಿ ಹಾಯಾಗಿ ಐಷಾರಾಮದಲ್ಲಿ ಜೀವನ ಸಾಗಿಸಿದ ಆಕೆಯ ಗಂಡ ಗೋವಿಂದ ಶೆಟ್ಟಿ. ತನ್ನ ಮಗ ಗತಿಗೋತ್ರವಿಲ್ಲದೆ ಕಣ್ಣೆದುರೇ ಓಡಾಡುತ್ತಿದ್ದರೂ ಸ್ವಲ್ಪವೂ ಭಾವನಾತ್ಮಕ ಸಂಬಂಧ ಇರಿಸಿಕೊಳ್ಳದೆ ಮಗನನ್ನು ಮತ್ತು ಹೆಂಡತಿಯನ್ನು ದೂರಿವಿರಿಸಿದ ನಾಲಾಯಕ್ಕು ಅಪ್ಪ. ಆದರೆ ಮಗನನ್ನು ಹೆತ್ತ ತಪ್ಪಿಗೆ ಸರಸಮ್ಮ ಆತನ ಬದುಕು ಹಸನಾಗಿಸುವ ಕನಸು ಕಾಣುತ್ತಾಳೆ. ಮಗನ ಮೇಲಿನ ಮಮಕಾರ ಭವಿಷ್ಯದ ಚಿಂತನೆ ಎಲ್ಲಾ ಭಾರವನ್ನು ತಾಯಿಯಾಗಿ ಆಕೆ ಹೊರುತ್ತಾಳೆ. ಮಗನಿಗಾಗಿ ರಾತ್ರಿ ಹಗಲು ತನ್ನ ಜೀವದ ಹಂಗು ತೊರೆದು ದುಡಿಯುತ್ತಾಳೆ.

ಆದರೆ ಮಗನೋ ಆಕೆಯ ಯಾವ ಕನಸನ್ನೂ ನನಸಾಗಿಸದೆ ಪೋಲಿ ಹುಡುಗನಾಗಿ, ಓದಿದರೂ ದುಡಿಯದ ಸೋಮಾರಿಯಾಗಿ ತನ್ನ ಮನೆಗೆ ಕಂಟಕನಾಗುತ್ತಾನೆ. ತಾಯಿಯ ಬದುಕಿಗೆ ಮುಳುವಾಗುತ್ತಾನೆ. ಹೆತ್ತಮ್ಮನ ಮನೋಭಿಲಾಷೆಯನ್ನು ಅರ್ಥಮಾಡಿಕೊಳ್ಳಲಾಗದ ವ್ಯಕ್ತಿಯಾಗಿ ರೂಪುಗೊಳ್ಳುತ್ತಾನೆ. ಆಕೆಯ ಗಂಡ ಆಕೆಯನ್ನು ತ್ಯಜಿಸಿದ ಸಂದರ್ಭದಲ್ಲಿ ಆಕೆ ಜೀವನಾಂಶ ಕೇಳಿದಾಗ ಹೇಳಿದ ಮಾತು... "ನಿನಗೆ ಚಿನ್ನದಂತಹ ಮಗನನ್ನು ಕೊಟ್ಟಿಲ್ಲವಾ?"[೪] ವಿಪರ್ಯಾಸವೆಂದರೆ ಆ ಚಿನ್ನದಂತಹ ಮಗನಿಂದ ಆಕೆಗೆ ಏನೂ ದಕ್ಕಿಲ್ಲ. ಬೇಜವಾಬ್ದಾರಿಯ ಅಪ್ಪ ಮಗನ ಮಧ್ಯೆ ಸಿಲುಕಿದ ಸರಸಮ್ಮನ ಬದುಕು ಅಸಹನೀಯವಾಗಿರುತ್ತದೆ.

ತನ್ನ ಬದುಕಿನ ಕೊನೆಗಾಲಕ್ಕೆ ಆಸರೆಯೊಂದಿರಲಿ ಎಂದು ಆಕೆ ಬಯಸಿ ಅಪ್ಪಣ್ಣ ಎಂಬ ಹೊಟೇಲು ಮಾಲೀಕನ ಮನೆ ಸೇರುತ್ತಾಳೆ. ತಾನು ಯಾವ ಮಗನ ಸಲುವಾಗಿ ತನ್ನ ಜೀವ ತೇದೆನೋ, ಆತನೇ ತನ್ನನ್ನು ಅರ್ಥೈಸಿಕೊಳ್ಳದೇ ಹೋದಾಗ ಆತನನ್ನು ತ್ಯಜಿಸುವ ಯೋಚನೆ ಮಾಡುತ್ತಾಳೆ. ಇದು ಒಂದು ದೃಷ್ಟಿಕೋನದಲ್ಲಿ ನೋಡಿದಾಗ ಒಂದು ರೀತಿ ಪ್ರತಿರೋಧವೇ ಆಗಿದೆ.

ಗಂಗಾ ಪಾದೇಕಲ್‌ರವರ 'ವಿದಾಯ' ಕಥೆಯ ತಾಯಿ ಮಗನು ಅಂತರಾತ್ಮದ ಮಾತುಗಳನ್ನು ಬೆಸೆಯುವ ಕಥೆಯಾಗಿದೆ. ತಾಯಿಯನ್ನು ಕಳೆದುಕೊಂಡ ತಬ್ಬಲಿ ಹುಡುಗನನ್ನು ಕಲ್ಯಾಣಿ ತಾಯಿಯ ಪ್ರೀತಿ ತೋರಿಸಿ ಬೆಳೆಸುತ್ತಾಳೆ, ಸಂಗೀತ ಕಲಿಸುತ್ತಾಳೆ. ಆತ ಮುಂದೆ ತಾಯಿಯನ್ನು ಮರೆತು ಬಿಡುತ್ತಾನೆ. ಒಮ್ಮೆ ತನ್ನ ಊರಿನಲ್ಲಿ ಸಂಗೀತ ಕಛೇರಿ ನೀಡಿ ಬರುತ್ತಿರುವಾಗ ಆತನನ್ನು ಬರಮಾಡಿಕೊಂಡ ಮುದುಕಿಯೇ ತನ್ನ ತಾಯಿಯೆಂದು ತಿಳಿದು ನೋವು ಉಂಟಾಗುತ್ತದೆ. "ಯಾರ ಬಳಿಯೂ ಹೇಳಿಕೊಳ್ಳಲಾರದೆ ಚಡಪಡಿಸುವ ಆತನಿಗೆ ಅಲ್ಲಿ ಸೇರಿದ ಜನ ಅವಳೊಬ್ಬಳು ಹುಚ್ಚಿ ಯಾವ ಕಲಾವಿದ ಬಂದರೂ ಅವಳದಿದ್ದೇ ಗಲಾಟೆ"[೫] ಎನ್ನುವ ಮಾತು ಮತ್ತೆ ಮತ್ತೆ ಅವನನ್ನು ತಿವಿಯುತ್ತದೆ ಆಗ ಅವನಿಗೆ ಅದು ಗಲಾಟೆಯಲ್ಲ, ಹುಡುಕುವಿಕೆ ಎಂಬುದು ಆತನಿಗೆ ಅರ್ಥವಾಗುತ್ತದೆ. ಇದು ತಾಯಿಯೊಬ್ಬಳ ಪ್ರೀತಿಯನ್ನು ತೆರೆದಿಡುವ ಕಥೆಯಾಗಿದೆ.

'ಪರಿಹಾರ' ಕಥೆಯಲ್ಲಿ ಮಧುರ ಮದುವೆಯಾಗಿ ಹತ್ತು ವರ್ಷಗಳಾದರೂ ಮಕ್ಕಳಾಗಿರುವುದಿಲ್ಲ. ಆ ಚಿಂತೆಯಿಂದ ಪಾರಾಗಲು ಸಭೆ, ಸಮಾರಂಭಗಳಿಗೆ ಹೋಗುವುದನ್ನು ಶುರು ಮಾಡಿಕೊಂಡಿದ್ದಳು. ಒಮ್ಮೆ ಕಲ್ಯಾಣ ಮಂಟಪದಲ್ಲಿ ಈಕೆಯ ಬಗೆಗೆ ಆಡಿದ ವ್ಯಂಗ್ಯ ಮಾತು ಕೇಳಿಸಿತು. "ಹುಂ, ಅವರೇ ಅಲ್ಲ,

ಇಂಥ ಸಮಾರಂಭಕ್ಕೆಲ್ಲಾ ಬರಲು ಮನಸ್ಸಾದರೂ ಹೇಗಾಗುತ್ತದೋ? ನಿಜಾನ್ನಿ, ಆಕೆಗೆ ಲಗ್ನವಾಗಿ ಹತ್ತು ವರ್ಷಗಳು ದಾಟಿದುವಂತೆ ಅಲ್ಲವಾ? ಹೂಂ, ಈವರೆಗೂ ಆಗಿಲ್ಲ, ಇನ್ನು ಆಗಲಿಕ್ಕೂ ಇಲ್ಲ, ಜೊತೆಗೆ ಕಿಸಕ್ಕನೆ ನಗುವೂ"[೬] ಕೇಳಿಸಿದಾಗ ಮಧುರಳ ಮೈ ಎಲ್ಲಾ ಉರಿಯಿತು. ಈ ಮಾತು ತಾಯ್ತನವನ್ನು ಉತ್ಪ್ರೇಕ್ಷಿಸುವಂತಹ ಸವಾಲಿಗೆ ಮೌನ ಪ್ರತಿರೋಧವಾಗಿದೆ. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗು ಮಾತ್ರ ತನ್ನ ಮಗು ಎಂದು ಭಾವಿಸದೇ ಅನಾಥಾಲಯಲ್ಲಿರುವ ಮಕ್ಕಳನ್ನು ಪ್ರೀತಿಯಿಂದ ನೋಡಿಕೊಂಡು ಮನಸ್ಸಿನ ದುಃಖವನ್ನು ಕಳೆಯಬಹುದಲ್ಲವೇ? ಎಂಬ ಅಲೋಚನೆ ಮಧುರಳಲ್ಲಿ ಮೂಡುವುದು ನಿಜವಾದ ತಾಯ್ತನವೇ ಆಗಿದೆ.

"ಕಣ್ಣಾ ನೀರೆದ್ದು ಹೊಳೆಯದೋ" ಕಥೆಯಲ್ಲಿ ಗಿರಿಜೆ ವೃತ್ತಿಯಲ್ಲಿ ನರ್ಸ್ ಮದುವೆಯಾಗದಿದ್ದರೂ ಎಲ್ಲರ ದೃಷ್ಟಿಯಲ್ಲಿ ಬಂಜೆ ಎಂಬ ಪಟ್ಟ ಗಳಿಸಿಕೊಂಡವಳು. ಆದರೆ ಅವಳ ಮನಸ್ಸಿನಲ್ಲಿ ಬಂಜೆತನವಿರಲಿಲ್ಲ. ತನ್ನ ಒಡಹುಟ್ಟಿದವರನ್ನು ಚೆನ್ನಾಗಿ ಸಾಕಿದರೂ ಕೊನೆಗೆ ಆಕೆಯ ಬಗ್ಗೆ ಅವರಿಂದ ಒಳ್ಳೆಯ ಮಾತು ಬರದೇ ಹೋದಾಗ ಆಕೆ ಒಬ್ಬಂಟಿಯಾಗುತ್ತಾಳೆ.

ಕೆಲಸದ ಆಯಾ ಚೆನ್ನಿ ರೋಗಿ ಜೊತೆ ಈಯಮ್ಮ ಇಂಗೆ, ಸುಸ್ತುಗಿಸ್ತು ಆಗುತ್ತಾಳಾ? ಈ ರೀತಿ ಪ್ರಶ್ನಿಸುತ್ತಾಳೆ. "ಅದೇನು ಇವಳು ಮಾತ್ರ ಹೀಗೆ"? ಅದಕ್ಕೆ ಚೆನ್ನಿ 'ಗಂಡ ಇಲ್ಲ, ಮಕ್ಳಿಲ್ಲ, ಒಂದು ಸಂಸಾರಾಂಗ ಇದ್ದರಲ್ಲವಾ ಕಷ್ಟ-ಸುಖ ತಿಳಿಯಾದು? ಒಂಟಿ ಪಿಚಾಚಿಯಂಗೆ ಒಬ್ಳೇ ಇದ್ರೆ ಇಂಗೇ ಅಲ್ಲ ಆಗಾದು?"[೭] ಎನ್ನುತ್ತಾಳೆ.

ಆಸ್ಪತ್ರೆಯಲ್ಲಿ ಅನಾಥ ಮಗುವನ್ನು ಪ್ರೀತಿಯಿಂದ ನೋಡುತ್ತಿರುವುದನ್ನು ಕಂಡು ಡಾ. ರಾಮಕೃಷ್ಣ 'ಏನಮ್ಮ ಆ ಮಗೂನ ನೀನೇ ಸಾಕಿಕೊಂಡು ಬಿಡು ಆಗದೇ?"[೮] ಎಂದಾಗ ಗಿರಿಜೆ ಬೆಚ್ಚಿದಳು. ನಂತರ "ತನ್ನ ಒಂಟಿತನಕ್ಕೆ ಏಕಾಂಗಿ ಬಾಳಿಗೆ ಹೀಗೊಂದು ಪರಿಹಾರ ಇದ್ದೀತೇ?"[೯] ತಳಮಳಕ್ಕೆ ಒಳಗಾಗುತ್ತಾಳೆ. ಮಗುವಿನ ಬಾಲಲೀಲೆಯನ್ನು ಕಂಡು ಹಿಗ್ಗಿ ಸುಖ ಸಂವೇದನೆಯಲ್ಲಿ ಮುಳುಗುತ್ತಾಳೆ. ಆದರೆ ಆಕೆಗೆ ಸಿಸಿಲಿ ಹೇಳುತ್ತಾಳೆ ಯಾರೋ ದಂಪತಿಗಳು ರಂಜನಿಯನ್ನು ದತ್ತು ತೆಗೆದುಕೊಳ್ಳಲು ಬಂದಿದ್ದಾರೆ ಎಂದು ಸೂಚನೆಯನ್ನು ಕೊಡುತ್ತಾಳೆ. ಆಗ ಡಾ॥ ರಾಮಕೃಷ್ಣರವರ ಹತ್ತಿರ "ಸರ್, ನೀವ್ಯಾಕೆ ನನ್ನಲ್ಲಿ ಮಾತೃತ್ವದ ಆಸೆಯನ್ನು ಚಿಗುರಿಸಿದಿರಿ? ನನ್ನ ಬರಡು ಬಾಳು ಕೂಡಾ ಹಸಿರಾದೀತೆಂಬ ಆಸೆ ಹುಟ್ಟಿಸಿದಿರಲ್ಲಾ? ಏಕೆ? ನನ್ನ ಈ ರೀತಿ ಕೊಲ್ಲಲೆಂದೇ"[೧೦] ದುಃಖತಪ್ತವಾದ ಅವಳ ದನಿ ಹೊರಡುತ್ತದೆ. 'ಸರ್... ನೀವು ಮೊನ್ನೆ

... ನಾನು... ಮಗೂನ'[೧೧] ಎಂದಾಗ ಪರಿಸ್ಥಿತಿಯನ್ನು ಅರ್ಥೈಸಿಕೊಂಡ ಡಾ। ರಾಮಕೃಷ್ಣರು ಅವಳ ಸ್ಥಿತಿಗೆ ಮರುಗಿ, ಅಸಹಾಯಕರಾಗಿ ಈ ರೀತಿ ನುಡಿದರು. "ನೋಡಮ್ಮ ನಿನ್ನ ಇಚ್ಛೆಗೆ ನಾನೊಪ್ಪಿದರೂ ಕಮಿಟಿ ಖಂಡಿತ ಒಪ್ಪಲಾರದು. ಯಾಕೆಂದರೆ ಈಗ ಬಂದಿರುವವರು ಅಗರ್ಭ ಶ್ರೀಮಂತರು. ಯಾವಾಗಲೂ ಬೆಸ್ಟ್ ಆಫರ್ ಅನ್ನೆ ಮನ್ನಿಸುವುದು ಲೋಕರೂಢಿ, ಅಲ್ವೇನಮ್ಮ?'[೧೨] ಗಿರಿಜೆಗೆ ಅನಾಥ ಮಗುವನ್ನು ಸಾಕುವುದರ ಮೂಲಕ ತಾಯ್ತನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂದು ಮನಸ್ಸು ಹಾತೊರೆದರೂ ಅದು ನೆರವೇರುವುದಿಲ್ಲ. ಆಸ್ಪತ್ರೆಯವರು ಆ ಮಗುವನ್ನು ಶ್ರೀಮಂತರ ಕೈಗೆ ಕೊಡುವುದರ ಮೂಲಕ ಅವಳಿಗೆ ವಂಚನೆಯನ್ನು ಮಾಡುತ್ತಾರೆ. ಆದರೆ ಮಗುವಿಗೆ ಬೇಕಾದುದು ಹಣವೇ, ಪ್ರೀತಿಯೇ ಎಂಬ ಪ್ರಶ್ನೆಗಳು ಅವಳನ್ನು ಕಾಡುತ್ತವೆ.

ಆದರೂ ತಾಯ್ತನದ ಸಿದ್ಧ ನಂಬಿಕೆಗಳು ಸಡಿಲವಾದಾಗಲೇ ಹೆಣ್ಣಿನ ಬದುಕಿನಲ್ಲಿ ಕ್ರಾಂತಿ ಆಗಲು ಸಾಧ್ಯ ಎಂಬ ನಿಲುವು ಸ್ತ್ರೀ ವಾದಿಗಳದ್ದು. ಇತ್ತೀಚಿನ ದಿನಗಳಲ್ಲಿ ಅವಿವಾಹಿತ ಪೋಷಕ ತಾಯಂದಿರು ಹೆಚ್ಚಾಗ ತೊಡಗಿದ್ದಾರೆ. ಅದರಲ್ಲಿ ಹೆಣ್ಣು ಮಕ್ಕಳನ್ನು ಪಡೆದು ಸಾಕುತ್ತಿರುವ ವರದಿಗಳನ್ನು ಓದುತ್ತಿರುವ ಸಂದರ್ಭದಲ್ಲಿಯೇ ಈ ಕತೆ ಸಕಾಲಿಕವೂ ಬದುಕಿಗೆ ಹತ್ತಿರವೂ ಆಗಿದೆ. ಪ್ರಸ್ತುತ ಕತೆ ಸ್ತ್ರೀವಾದಿ ಚಿಂತನೆಗೆ ನಿದರ್ಶನವಾಗಿದೆ. ಹೆಣ್ಣು ಮಗುವನ್ನು ದತ್ತು ತೆಗೆದುಕೊಳ್ಳುವ ನಿರ್ಧಾರ ಇತ್ತೀಚೆಗೆ ಹೆಚ್ಚಾಗಿರುವುದು ಉತ್ತಮ ಬೆಳವಣಿಗೆಯಾಗಿದೆ.

ಕುಂದಾಪುರದಲ್ಲಿ ಸುಶಿಕ್ಷಿತ ಸುಸಂಸ್ಕೃತ ಕುಟುಂಬದಲ್ಲಿ ಜನಿಸಿದ ಮಿತ್ರಾರವರು ಬಾಲ್ಯದಲ್ಲಿ ತಾವು ಹತ್ತಿರದಿಂದ ನೋಡಿದ ಗ್ರಾಮೀಣ ಹೆಣ್ಣುಮಕ್ಕಳ ಬದುಕಿನ ಒಳನೋಟಗಳನ್ನ ಅದ್ಭುತವಾಗಿ ತಮ್ಮ ಕಥೆಗಳಲ್ಲಿ ನಿರೂಪಿಸಿದ್ದಾರೆ.

'ಕೊನೆಯ ದಿನ' ಕಥೆಯಲ್ಲಿ ಹೊಟ್ಟೆ ಬಟ್ಟೆ ಕಟ್ಟಿ ಕಷ್ಟದಿಂದ ಬೆಳೆಸಿದ ಮಗನೇ ಕುಡಿತದ ಅಮಲಿನಲ್ಲಿ ರಾಕ್ಷಸನಾಗಿ ತನ್ನ ಕೈಯಾರೆ ತಾಯಿಗೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚುವ ಚಿತ್ರಣವಿದೆ. ಮೈಕೈ ಸುಟ್ಟುಕೊಂಡು ಸಾವು ಬದುಕಿನಲ್ಲಿ, ಒದ್ದಾಡುತ್ತಿರುವ ಮೋರಿಬಾಯಿಯ ಸೇವೆಗೆ ರಾಜಿ ನಿಲ್ಲುತ್ತಾಳೆ. ಮೋರಿಬಾಯಿಯು ನೋವನ್ನು ಅನುಭವಿಸುತ್ತಿರುವಾಗ ಆಕೆಯ ಬಾಯಿಂದ "ತಾಟಕಿ, ನಿನಗಿಂತ ಎಷ್ಟೋ ಸಣ್ಣವನವ. ನಿನಗೆ ಮಗನ ಸಮಾನ ಕಷ್ಟದಲ್ಲಿ ಇರುವವಳನ್ನು ತಂದು ಸಾಕಿದ್ದಕ್ಕೆ ಮಹದುಪಕಾರ ಮಾಡಿದೆಯಮ್ಮ ಸಾಕೋ ಸಾಕು ನಿನ್ನ ಸಹವಾಸ",[೧೩] ಎಂಬ ಮಾತು ರಾಜಿಗೆ ತಾಯಿ–ಮಗನ

ಸಂಬಂಧಕ್ಕೆ ತಾನು ಮುಳುವಾದೆನಲ್ಲಾ ಎಂಬ ನೋವು ಕಾಡುತ್ತದೆ. ಪೊಲೀಸಿನವರು ಬಂದು ಆಸ್ಪತ್ರೆಯಲ್ಲಿ ನಿನ್ನ ಮೈಗೆ ಬೆಂಕಿ ಕೊಟ್ಟದ್ದು ನಿನ್ನ ಮಗನೇ ಅಲ್ವಾ? ಎಂದು ಮೋರಿಬಾಯಿಯನ್ನು ವಿಚಾರಿಸಿದಾಗ ಆಕೆ ಅಲ್ಲ, ಅಲ್ಲ, ಇದು ಯಾರೂ ಕೊಟ್ಟದ್ದಲ್ಲ, ನಾನೇ ಮಾಡಿಕೊಂಡದ್ದು ಎಂದು ಹೇಳುತ್ತಾಳೆ. ಹೀಗಾಗಿ ಮಗ ಪಾರಾಗುತ್ತಾನೆ. ಮಗ ಕುಡಿದು ಅಮಲೇರಿ ಬೆಂಕಿ ಹಚ್ಚಿದಾಗಲೂ ತಾಯಿಗೆ ಅಪರಾಧಿ ಅನ್ನಿಸದಿರುವುದು. ಮೋರಿಬಾಯಿ ಸಾಯುವಾಗಲು ಮಗನ ಅಪರಾಧವನ್ನು ಮರೆಮಾಚುವ ಔದಾರ್ಯವನ್ನು ಗಮನಿಸಿದಾಗ ತಾಯಿಯ ಹೃದಯ ಎಂತಹದ್ದು ಎಂಬುದನ್ನು ಈ ಕತೆ ಧ್ವನಿಸುತ್ತದೆ.

'ಕೊಂಡಿ ಕಳಚಿದಾಗ' ಕಥೆಯಲ್ಲಿ ಹದಿನಾಲ್ಕು ಮಕ್ಕಳನ್ನು ಹೆತ್ತು ಸೋತು ಹೋಗಿದ್ದ ಮನೆಯೊಡತಿ ಹದಿನೈದನೆಯ ಬಸಿರನ್ನು ತೆಗೆಯ ಬಯಸಿದಾಗ ನಿಮಗೆ ಬೇಡದಿದ್ದರೆ ನಾನು ಸಾಕುತ್ತೇನೆ ಎಂದು ಸಮಾಧಾನ ಮಾಡಿ ಮಗುವಿನ ಜೀವ ಉಳಿಸಿದ ಗಂಗಮ್ಮ, ತಮ್ಮ ಮುದ್ದು ಮಗಳು ಪೆದ್ದಿಗಾಗಿ ಕಂಡ ಕನಸುಗಳೆಲ್ಲವೂ ಕರಗಿ ನೀರಾಗುವ ಅವಳ ಮಾತೃ ಹೃದಯದ ಮೂಕ ವೇದನೆಯನ್ನು ಈ ಕತೆಯಲ್ಲಿ ಕಾಣಬಹುದು.

'ಅಮ್ಮನ ಆಟ' ಕತೆಯಲ್ಲಿ ಗೊನ್ನಿ ಅನಾಥ ಮಗು. ಯಾರೋ ಬೀದಿಗೆ ಎಸೆದಿದ್ದ ಹರಕು ವಸ್ತ್ರದ ಚೂರಿನಲ್ಲಿ ಸುತ್ತಿಟ್ಟ ಮುದ್ದೆಯನ್ನು ಮಕ್ಕಳಿಲ್ಲದ ರುಕ್ಮಿಣಿಯು ಎರಡೂ ಕೈಯ್ಯಲ್ಲಿ ಎತ್ತಿ ಹಿಡಿದಿದ್ದಳು. ಬೇರೆಯವರು ಗೊಣಗಿಕೊಂಡರು. ರುಕ್ಮಿಣಿ 'ದೇವರು ನಂಗೆ ಮೊಗಿನ್ನ ಕೊಟ್ಟ' ಅಂತ ಖುಷಿಯಿಂದ ಅದರ ಲಾಲನೆ ಪಾಲನೆ ಮಾಡುತ್ತಾಳೆ. ಮನೆಗೆ ಗೊನ್ನಿಯ ಪ್ರವೇಶವಾಗಿ ವರ್ಷ ಕಳೆಯುವುದರೊಳಗೆ ರುಕ್ಮಿಣಿಯು ಬಸುರಿಯಾದದ್ದು, ಅತ್ತಿಗೆಯಂದಿರಿಗೂ ಮದುವೆಯಾದದ್ದು ಎಂದು ಎಲ್ಲರೂ ಅಂದರು. ಆದರೆ ಮನೆಯವರ ಒತ್ತಾಯದಿಂದ ಗೊನ್ನಿಯನ್ನು ಆಶ್ರಮಕ್ಕೆ ಸೇರಿಸುವುದೆಂದು ನಿರ್ಧಾರವಾಗುತ್ತದೆ. ಆದರೆ ರುಕ್ಮಿಣಿಗೆ ಇಷ್ಟವಿರಲಿಲ್ಲ. ಗೊನ್ನಿ ಕಾಲಿಗೆ ವಸ್ತ್ರ ಎಡಕಿ ಬಿದ್ದು ಕೈಕಾಲುಗಳನ್ನು ನಡುಗಿಸುತ್ತ ಕಣ್ಣು ತಿರುಗಿಸಲು ಶುರು ಮಾಡುತ್ತಾಳೆ. ಕೂದಲು ಬಿಚ್ಚಿ ಹರಡಿಕೊಂಡು ನಾನೇ ಅಮ್ಮ ಎನ್ನುತ್ತಾಳೆ. ಎಲ್ಲರಿಗೂ ಗಾಬರಿಯಾಗುತ್ತದೆ. ಹೊನ್ನಿಯನ್ನು ಅಮ್ಮನ ಹಾಡಿಗೆ ಕರೆದುಕೊಂಡು ಹೋಗಿ ಪೂಜೆ ಮಾಡುತ್ತಾರೆ. ಧರ್ಮದರ್ಶಿಗಳನ್ನು ದೂರದಿಂದಲೇ ನೋಡಿದ ರುಕ್ಮಿಣಿಯು "ನನ್ನ ಮಗಳನ್ನು ಕಾಪಾಡಿಯಪ್ಪ"[೧೪] ಎಂದು ಮನದೊಳಗೇ ಬೇಡಿಕೊಂಡಳು.

ದರ್ಶನ ಪಾತ್ರಿಯ ಬಾಯಲ್ಲಿ ಬಂದ ಮಾತುಗಳನ್ನು ಧರ್ಮದರ್ಶಿಗಳು ಈ ರೀತಿ ಹೇಳುತ್ತಾರೆ "ಮಗುವನ್ನು ಮನೆಯಿಂದ ಕಳುಹಿಸುವುದು ಅಮ್ಮನ ಹಾಡಿಯ ದೇವಿಗೆ ಏನೇನೂ ಇಷ್ಟವಿಲ್ಲ. ಕೂಸು ಬಂದ ಮೇಲೆ ನಿಮಗೆ ಶುಭವಾಗಿದೆ. ಮನೆಯಲ್ಲಿ ಸುಖ ಸಮೃದ್ಧಿ ಹೆಚ್ಚಿದೆ. ಕಲ್ಯಾಣವಾಗಿದೆ. ಮಗುವನ್ನು ಹೊರಗಟ್ಟುವುದೆಂದರೆ ನಾಶದ ದಾರಿಗೆ ಕಾಲಿಟ್ಟಂತೆ. ಮನೆಗೆ ಬಂದ ಲಕ್ಷ್ಮಿ ಅವಳು. ಅಮ್ಮ ನಿಮಗೆ ಕೊಟ್ಟ ಈ ಮಗುವನ್ನು ಮನೆಮಗಳಂತೆ ಸಾಕಿರಿ. ಒಳ್ಳೆಯ ವಿದ್ಯಾಭ್ಯಾಸ ಕೊಡಿಸಿರಿ. ಇದೇ ಅಮ್ಮ ನಿಮಗೀಯುವ ಆದೇಶ"[೧೫] ಎನ್ನುತ್ತಾರೆ. ಸಾಕುಮಗು ಗೊನ್ನಿಯನ್ನು ದೂರ ಮಾಡಲಾಗದ ರುಕ್ಮಿಣಿಯ ಮಾತೃತ್ವದ ಸೂಕ್ಷ್ಮ ಚಿತ್ರಣವಿದೆ. ಹೀಗೆ ಮಿತ್ರಾರವರು ಹೆಣ್ಣು – ಗಂಡು ಬೇಧವಿಲ್ಲದ ಕರುಳಿನ ಸೆಳೆತದ, ವಾತ್ಸಲ್ಯದ, ತಾಯ್ತನದ ವ್ಯಕ್ತಿ ಚಿತ್ರಣಗಳನ್ನು ಕಟ್ಟಿಕೊಡುತ್ತಾರೆ.

ಹೆಣ್ಣು ಕೌಟುಂಬಿಕ ವಲಯದಿಂದ ಮುಕ್ತಿ ಪಡೆಯಲು ಸಾಧ್ಯವಿಲ್ಲ. ಯಾಕೆಂದರೆ ಆಕೆ ತಾಯ್ತನದ ನೈಸರ್ಗಿಕ ಬಯಕೆಯಿಂದ ಹೊರತಾಗಲು ಸಾಧ್ಯವಿಲ್ಲ. ಮಗುವಿಗಾಗಿ ಹಂಬಲಿಸುವ ಸೂಕ್ಷ್ಮಸಂವೇದನೆಗಳನ್ನು ಹಿಡಿದಿಟ್ಟ ಕಥೆ ವೈದೇಹಿಯವರ "ಗುಲಾಬಿ ಮೃದು ಪಾದಗಳು" ಕಥೆಯ ನಾಯಕಿ ತನ್ನ ಬದುಕು ಪರಿಪೂರ್ಣವಾಗ ಬಯಸುವ ಒಂದು ಮಗುವಿನ ಮೃದು ಪಾದಗಳನ್ನು ನೋಡುವ ಮೂಲಕ ಕಥೆ ಪ್ರಾರಂಭವಾಗುತ್ತದೆ. ಪಕ್ಕದ ರಸ್ತೆಯಲ್ಲಿರುವ ಒಂದು ಮನೆಗೆ ಯಾರೋ ಬಂದಾಗ ಅವರ ಜೊತೆಯಲ್ಲಿಯೇ ಇದ್ದ ಒಂದು ಮಗುವಿನ ಗುಲಾಬಿ ಮೃದು ಪಾದಗಳು ಆಕೆಯನ್ನು ಸೆಳೆಯುತ್ತವೆ.

ಮಗು ಹೆಣ್ಣೋ ಗಂಡೋ ತಿಳಿಯುವ ಕುತೂಹಲ ಸರಿತಾಳಿಗೆ ಉಂಟಾಗುತ್ತದೆ. ತನಗೂ ಆ ಒಂದು ಗುಲಾಬಿ ಮೃದು ಪಾದದ ಮಗುವನ್ನು ಪಡೆಯುವ ಹಂಬಲಿಕೆಯಿದ್ದರೂ ಅದು ಕನಸಿನಲ್ಲಿ ಈಡೇರುತ್ತದೆ. ಆದರೆ ಅದನ್ನು ಎತ್ತಿಕೊಳ್ಳಲು ಹೋದಾಗ ಮಾಯವಾಗುತ್ತದೆ. ಸರಿತಾಳಿಗೆ ತನ್ನದೇ ಗುಲಾಬಿ ಮೃದು ಪಾದಗಳ ಮಗುವಿಗಾಗಿ ಹಂಬಲಿಸುತ್ತಾ ಅಸ್ತಿತ್ವಕ್ಕಾಗಿ ಮನಸ್ಸು ಹಾತೊರೆಯುತ್ತದೆ. ಮಗುವಿನ ಅವ್ಯಕ್ತ ಆಕರ್ಷಣೆ ಮತ್ತು ಸಂಭ್ರಮದಿಂದ ವಂಚಿತಳಾದ ನಾಯಕಿಯ ತಾಯ್ತನದ ಬಯಕೆ, ತೊಳಲಾಟಗಳನ್ನು ಕಥೆ ಚಿತ್ರಿಸುತ್ತದೆ.

ಬದುಕು ಹೆಣ್ಣಿಗೆ ಬೇರೆ ಬೇರೆ ರೀತಿಯಲ್ಲಿ ಶಿಕ್ಷಣವನ್ನು ಕಲಿಸುತ್ತದೆ. ಆದರೆ ನೋವುಗಳನ್ನು ನುಂಗಿ ಬದುಕುವ ಅಪರಿಮಿತ ಶಕ್ತಿ ಹೆಣ್ಣಿನದು. ಪ್ರಾಚೀನ ಕಾಲದಿಂದಲೂ ಹೆಣ್ಣಿನ ಈ ಬಗೆಯ

ಶೋಷಣೆಗಳಿಗೆ ಮುಕ್ತಿ ದೊರೆತಿಲ್ಲ. ಹೆಣ್ಣು ಗಂಡು ಇಬ್ಬರೂ ಬದುಕಿನ ಚಕ್ರ ಉರುಳಲು ಮುಖ್ಯರಾಗುತ್ತಾರೆ ಎಂಬ ತಿಳುವಳಿಕೆ ಇರದ ಈ ಸಮಾಜದಲ್ಲಿ ತಾಯಿಯಾದವಳು ಮಗುವನ್ನು ಒಂಭತ್ತು ತಿಂಗಳು ಗರ್ಭದಲ್ಲಿರಿಸಿಕೊಂಡು ಆ ಮಗುವಿಗೆ ಜನ್ಮ ಕೊಟ್ಟು ಲಾಲಿಸಿ ಪಾಲಿಸಿ ಬೆಳೆಸುವ ಸಂಪೂರ್ಣ ಜವಾಬ್ದಾರಿಯನ್ನು ಎಷ್ಟೇ ಸಮರ್ಥವಾಗಿ ನಿರ್ವಹಿಸಿದರೂ, ಆ ಮಗುವಿಗೆ ಒಂದು ಅಸ್ತಿತ್ವವನ್ನು ಸಮಾಜ ನೀಡುವುದು ತಂದೆಯ ಮೂಲಕವೇ ಆಗಿದೆ.

ತಾಯ್ತನ ಎಂಬುದು ಹೆಣ್ಣಿನ ಬದುಕಿನ ಅವಿಭಾಜ್ಯ ಅಂಗ ಎನ್ನಬಹುದು. ತಾಯ್ತನದ ಬಗ್ಗೆ ಹೆಣ್ಣು ಹೆಚ್ಚು ಆಸೆ ಆಕಾಂಕ್ಷೆಗಳನ್ನು ಇಟ್ಟುಕೊಂಡಿರುತ್ತಾಳೆ. ಆದರೆ ಅದನ್ನು ಪುರುಷ, ಅಧಿಕಾರದ, ಮೂಲಕ ನುಚ್ಚುನೂರು ಮಾಡುತ್ತಾನೆ. ಆತ ತನ್ನ ಹೆಂಡತಿ ತಾಯ್ತನದಿಂದಾಗಿ ತನ್ನನ್ನು ನಿರ್ಲಕ್ಷಿಸುತ್ತಾಳೆ ಎಂಬ ಭಾವನೆ ಮತ್ತು ಹೆಣ್ಣನ್ನು ಭೋಗ ವಸ್ತುವಾಗಿಯೇ ನೋಡುವ ಆಲೋಚನೆಯಿಂದಾಗಿ ಹೆಣ್ಣನ್ನು ತಾಯ್ತನದಿಂದ ಅವಕಾಶ ವಂಚಿತವನ್ನಾಗಿಸಿದೆ.

ಗಂಗಾ ಪಾದೇಕಲ್‌ರವರ 'ಬೆಲೆ' ಕತೆಯಲ್ಲಿ ಗೌಡರ ಮಗ ಬಡ ಹುಡುಗಿಯೊಬ್ಬಳ ಜೊತೆ ವಿವಾಹ ಪೂರ್ವದ ಸಂಬಂಧ ಬೆಳೆಸಿದ್ದು ಆತನ ಮದುವೆಯ ಮಾತುಕತೆ ಆರಂಭವಾದಾಗ ತಂದೆಯಾದ ಗೌಡರಿಗೆ ಮಾನ ಪ್ರತಿಷ್ಠೆಗಳು ಮುಖ್ಯವಾಗುತ್ತವೆ. ಹುಡುಗನ ತಾಯಿಯ ಅಭಿಪ್ರಾಯವನ್ನು ಲೆಕ್ಕಿಸದೆ ಶ್ರೀಮಂತ ಕುಳದ ಹುಡುಗಿಯ ಜೊತೆ ಮಗನಿಗೆ ಗೌಡರು ನಿಶ್ಚಯ ಮಾಡಿ ತಾಂಬೂಲವಿರಿಸಿಕೊಂಡಾಗ ತಾಯಿ ನಂಜಮ್ಮ ಅದನ್ನು ವಿರೋಧಿಸಿ ಬಡಹುಡುಗಿಗೆ ಅನ್ಯಾಯವಾಗುವುದನ್ನು ತಪ್ಪಿಸುತ್ತಾಳೆ. ಗೌಡರ ಮಗ ತಾಯಿಯ ನಿಲುವನ್ನು ಬೆಂಬಲಿಸಿದಾಗ ಗೌಡರು ಅಸಹಾಯಕರಾಗುತ್ತಾರೆ.

ದುಡ್ಡುಕೊಟ್ಟು ವಿಷಯವನ್ನು ಮರೆಸುವ ಜಾಣತನವನ್ನು ಮಾಡಲು ಗೌಡರು ಮುಂದಾದಾಗ ಜಿಗುಪ್ಸೆಯಿಂದ "ನಿಮ್ಮ ಮಗನ ಬೀಜದ ಬೆಲೆ ಎಷ್ಟು"[೧೬] ಎಂದು ಕೇಳುವ ನಂಜಮ್ಮನ ಮಾತಿನೇಟು ಅಷ್ಟು ತೀಕ್ಷ್ಣವಾಗಿರುತ್ತದೆ. ಹೆಣ್ಣಾಗಿ ಇಂತಹ ಅಶ್ಲೀಲ ಪ್ರಶ್ನೆಯನ್ನೆತ್ತಬಾರದೆಂದು ನಂಜಮ್ಮನನ್ನು ಶಿಕ್ಷಿಸ ಬಂದ ತಂದೆಯನ್ನು ಮಗ ಎದುರಿಸುವ ಧೈರ್ಯವನ್ನು ಮೆರೆಯುತ್ತಾನೆ.

ಕುಟುಂಬ ವ್ಯವಸ್ಥೆಯಲ್ಲಿ ಪುರುಷನ ಯಜಮಾನ್ಯಕ್ಕೆ ಶರಣಾಗದೆ ಸತ್ಯ, ನ್ಯಾಯ ಮಾನವೀಯತೆಯ ಪರವಾಗಿ ದಿಟ್ಟತನದ ಪ್ರತಿರೋಧವನ್ನು ಒಡ್ಡುವ ತಾಯಿ ತನ್ನ ಘನತೆಯನ್ನು

ಮೆರೆಯುತ್ತಾಳೆ. ತಾನು ಒಬ್ಬಾಕೆ ಹೆಣ್ಣಾಗಿ, ತಾಯಿಯಾಗಿ, ಮಗ ರಾಜನಿಂದ ಬಸಿರಾದ ಹೆಣ್ಣುಮಗಳ ಭವಿಷ್ಯವನ್ನು ಮಣ್ಣುಮಾಡದೆ ಹಸನಾಗುವತ್ತ ತನ್ನಿಂದಾದ ಪ್ರಯತ್ನವನ್ನು ಮಾಡುತ್ತಾಳೆ.

ಅನುಪಮಾ ಪ್ರಸಾದ್‌ರವರ ಕಥೆಗಳು ಶೋಷಣೆಯ ನಾನಾ ಮುಖಗಳನ್ನು ಅನಾವರಣಗೊಳಿಸುತ್ತವೆ. ಕಥೆಗಾರ್ತಿ ಹೆಚ್ಚಿನ ಕಥೆಗಳಲ್ಲಿ ಹೆಣ್ಣಿನ ಶೋಷಣೆಯ ವಿವಿಧ ಮುಖಗಳನ್ನು ಕಥೆಗಳಲ್ಲಿ ತೆರೆದಿಟ್ಟರೂ ಸ್ತ್ರೀವಾದ ತತ್ವವೊಂದಕ್ಕೆ ಬದ್ಧರಾಗಿ ಕಥೆಗಳನ್ನು ಬರೆದವರು ಎನ್ನುವುದಕ್ಕೆ ಆಗುವುದಿಲ್ಲ. ಆದರೆ ಅವರ ಕೈಯಲ್ಲಿ ರೂಪುಗೊಂಡ ಕಥೆಗಳಲ್ಲಿ ಶೋಷಣೆಗೆ ಒಳಗಾದ ಸ್ತ್ರೀಯರು ಇರಿಸಿಕೊಂಡಿರುವ ಕೆಲವೊಂದು ತತ್ವಗಳು ಸ್ತ್ರೀವಾದವನ್ನು ಸಮರ್ಥಿಸುವಂತಿದೆ.

ಅನುಪಮಾ ಪ್ರಸಾದ್‌ರವರ 'ಹಸಿವು' ಕಥೆ ತಾಯ್ತನದ ಸ್ಥಿತಿಯನ್ನು ಅನಾವರಣ ಮಾಡುತ್ತದೆ. ಅತೀ ಬಡತನದ ಸಂಸಾರದಲ್ಲಿ ಹೆಣ್ಣೊಬ್ಬಳು ತನ್ನ ಮಕ್ಕಳು ಮತ್ತು ಸಂಸಾರಕ್ಕಾಗಿ ಜೀವವನ್ನೇ ತೇದು ತೇದು ಕೊನೆಗೂ ಯಶಸ್ವಿಯಾಗದೆ ಹೋಗುವ ದುರಂತ ಕಥೆ ಶಾಂತಮ್ಮ ತನ್ನ ಮೂರು ಮಕ್ಕಳ ಹೊಟ್ಟೆಯನ್ನೇ ತುಂಬಿಸಲಾರದೆ ಹೆಣಗಾಡುವ ತಾಯಿ ಕೊನೆಗೆ ತನ್ನ ಹಸಿವೆಯನ್ನು ಎಷ್ಟೋ ದಿನಗಳವರೆಗೆ ಅದುಮಿಟ್ಟು ತಾರಕಕ್ಕೆ ಏರಿದಾಗ ತಾನು ಪ್ರೀತಿಸುತ್ತಿದ್ದ, ಮನೆಗೆ ಆಧಾರವಾಗಿದ್ದ ತನ್ನ ಜೀವದ ಸೆಲೆ ಒಂದೇ ಒಂದು ಆಕಳು ಅದು ಸತ್ತಾಗ ಮೈಮೇಲೆ ದೆವ್ವ ಬಂದವಳಂತೆ ಆ ದನದ ಮಾಂಸವನ್ನೇ ಕಚ್ಚಿ ತಿಂದು ಬಿಡುತ್ತಾಳೆ ಮತ್ತು ರಕ್ತವನ್ನು ಹೀರುತ್ತಾಳೆ.

ಲೇಖಕಿ 'ಹಸಿವೆ'ಯ ತೀವ್ರತೆ ಹಾಗೂ ಬಡತನದ ಪರಮಾವಧಿಯನ್ನು ಇಲ್ಲಿ ಕರುಳು ಕಿವುಚಿದಂತೆ ಚಿತ್ರಿಸಿದ್ದಾರೆ. ಈ ಕಥೆಯ ನಾಯಕಿಯ ಬದುಕೇ ದುರಂತ. ತನ್ನ ಗಂಡ ಆತ್ಮಹತ್ಯೆಗೆ ಶರಣಾದ. ಅತ್ತೆ ತನ್ನ ಮನೆ ಬಿಟ್ಟು ಮಗಳ ಮನೆಗೆ ಹೊರಟು ಹೋದಳು. ಈಗಾಗಲೇ ಮಾವನ ಮನೆ ಸಾಲ, ನಾದಿನಿಯ ದುರಂತ ಬದುಕು ಮತ್ತು ಗಂಡನ ಸಾವಿನಿಂದ ತತ್ತರಿಸಿ ಹೋಗಿದೆ. ಈಗ ಶಾಂತಮ್ಮ ಏಕಾಂಗಿ. ಕೈಯಲ್ಲಿ ಇನ್ನು ಪುಟ್ಟದಾದ ಮೂರು ಮಕ್ಕಳು. ಬೇರೆಯವರ ಮನೆಯಲ್ಲಿ ಒಂದಿಷ್ಟು ಚಾಕರಿ ಮತ್ತು ಬದುಕು, ಒಂದೇ ಒಂದು ಆಧಾರವಾಗಿರುವ ಹಸು. ಆಕೆಯ ದುಡಿತ ಮತ್ತು ಆ ದನದ ಹಾಲಿನ ಮಾರಾಟದಿಂದ ತುಂಬಾ ಕಷ್ಟದಲ್ಲಿ ಮಕ್ಕಳ ಹೊಟ್ಟೆ ತುಂಬಿಸುತ್ತಿದ್ದಳು.

ಆದರೆ ಆಕೆಯ ಬದುಕಿನಲ್ಲಿ ಬಹಳ ದೊಡ್ಡ ದುರಾದೃಷ್ಟವೊಂದು ಸಾಗರದ ಅಲೆಯಂತೆ ಬಂದು ಅಪ್ಪಳಿಸುತ್ತದೆ. ಅವಳ ಬದುಕಿಗೆ ಆಧಾರವಾಗಿದ್ದ ಆ ಹಸು ಯಾವುದೋ ಅನಾರೋಗ್ಯಕ್ಕೆ ಸಿಲುಕಿ

ಸಾವನಪ್ಪುತ್ತದೆ. ವಿಧವೆಯಾದ ಬದುಕಿಗೆ ಆಸರೆ ಇಲ್ಲದೆ ಹೆಣ್ಣುಮಗಳು ಗೃಹಿಣಿಯಾಗಿ ತನ್ನ ಸಂಸಾರದ ನೌಕರಿಯನ್ನು ಮುಂದೊಯ್ಯಲಾಗದೆ ಅತಂತ್ರಳಾಗುತ್ತಾಳೆ. ಮೂರು ಮಕ್ಕಳನ್ನು ಸಾಕಲು ಮುಂದೆ ದಾರಿ ಕಾಣದಾಗುತ್ತದೆ. ಆಗ ಶ್ರೀನಿವಾಸ ಶಾಸ್ತ್ರಿಯ ಪತ್ನಿ ಹೇಳಿದ ಮಾತು ಅನಾಥಾಶ್ರಮಕ್ಕಾದರೂ ಸೇರಿಸು ಎಂದದ್ದು ನೆನಪಾಗಿ ಕೊನೆಗೆ ಆಕೆಗೆ ಕಾಣುವ ದಾರಿ ಒಂದೇ. ಆಕೆ ತನ್ನ ಮೂವರು ಮಕ್ಕಳನ್ನು ಅನಾಥಾಶ್ರಮಕ್ಕೆ ಸೇರಿಸಿ ಬಿಡುತ್ತಾಳೆ. ತಾಯಿಯಾಗಿ ತಾನು ಬದುಕಿರುವಾಗಲೇ ತನ್ನ ಮಕ್ಕಳನ್ನು ಅನಾಥಾಶ್ರಮಕ್ಕೆ ಸೇರಿಸುವ ಅವಳ ಮನಸ್ಥಿತಿಯನ್ನು ಕಂಡಾಗ ತಾಯ್ತನವೇ ಇಲ್ಲಿ ಎಲ್ಲಕ್ಕಿಂತಲೂ ಮಿಗಿಲಾದುದು ಎಂಬುದನ್ನು ಈ ಕತೆ ಧ್ವನಿಸುತ್ತದೆ.

ಅನುಪಮಾ ಪ್ರಸಾದ್‌ರವರ "ಡೇಗೆ" ಬಾಡಿಗೆ ತಾಯಿಯಾಗುವ ಹೆಣ್ಣಿನ ನೋವು, ನಲಿವು, ಕಷ್ಟ ಸುಖಗಳನ್ನು ಅನಾವರಣಗೊಳಿಸುವ ಒಂದು ವಿಶಿಷ್ಟ ಕತೆ. ಕಥಾನಾಯಕಿ ನೀಲು ತನ್ನ ಸಂಸಾರದ ಬಡತನದ ಬೇಗೆಯಿಂದ ಪಾರಾಗಲು ಬೇರೆ ದಾರಿಯಿಲ್ಲದೆ ಬಾಡಿಗೆ ತಾಯಿಯಾಗುತ್ತಲೇ ತನ್ನ ಹೊಟ್ಟೆಯೊಳಗಿನ ಮಗುವಿನ ಮೇಲೆ ಯಾವುದೇ ಭಾವನಾತ್ಮಕ ಸಂಬಂಧ ಬೆಳೆಸಿಕೊಳ್ಳದೆ ಬರೇ ದುಡ್ಡಿನ ಯೋಚನೆಯೊಂದನ್ನೇ ತಲೆಯಲ್ಲಿ ತುಂಬಿಸಿಕೊಂಡು ಬಾಡಿಗೆ ತಾಯಿಯಾಗುತ್ತಾಳೆ. ಮಗುವನ್ನು ಹೆತ್ತು ಕೊಟ್ಟು ದುಡ್ಡನ್ನು ಹಿಡಿದು ಮನೆಗೆ ಹೊರಟ ಆಕೆ ಆ ಹೆರಿಗೆ, ಬಾಣಂತನದ ನೋವು, ಮಗು ಚೀಪದೆ ಮೊಲೆಯಲ್ಲಿ ಚುಚ್ಚುತ್ತಿರುವ ಹಾಲು ಅದರ ನೋವು, ಸಂಕಟವನ್ನು ಪಡೆಯಲಾರದೆ ಮತ್ತೆಂದೂ ಈ ಕೆಲಸಕ್ಕೆ ಕೈಹಾಕಬಾರದೆಂದು ಯೋಚಿಸುತ್ತಾಳೆ. ಆದರೆ ಇದ್ಯಾವುದರ ಅರಿವು ಇಲ್ಲದ ಅವಳ ಗಂಡ, ಬೇರೆ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ ಆಕೆ ಮತ್ತೊಂದು ಮಗುವಿಗೆ ತಾಯಿ ಆಗಬೇಕೆಂದು ಮನದಲ್ಲಿ ಬಯಸುವವನು.

ಬಡತನ ಅವರನ್ನು ಈ ಸಂದಿಗ್ಧತೆಗೆ ಈಡು ಮಾಡಿರುವುದಂತೂ ನಿಜವಾದರು ಹೆಣ್ಣಿನ ನೋವು ಹೆಣ್ಣಿಗಷ್ಟೇ ಅನ್ನುವುದು ಇಲ್ಲಿ ಸತ್ಯ. ಡಾಕ್ಟ್ರ ಮೊಲೆ ಹಾಲು ಬತ್ತಲು ಮದ್ದು ನೀಡಿದ್ದರಾದರೂ ಇನ್ನೂ ಮೊಲೆ ಹಾಲು ಕುಡಿಯುವ ವಯಸ್ಸಿನ ಶೆಡ್ಡಿನ ಪಾರೀ ಚೀರಿ ಚೀರಿ ಅಳುತ್ತಿದ್ದ ತನ್ನ ಎಳೆಗೂಸನ್ನು ಹಿಡಿದುಕೊಂಡು ಬಂದಾಗ ಮಗುವನ್ನು ನೋಡಿದ್ದೇ ಗಬಕ್ಕನೆ ಅವಳ ಕೈಯಿಂದ ಮಗುವನ್ನು ಕಸಿದುಕೊಂಡ ನೀಲೂ ಮಗುವಿಗೆ ಹಾಲನ್ನು ಕುಡಿಸಿ ತನ್ನ ನೋವಿನಿಂದ ಸಾವರಿಸಿಕೊಂಡು ಸುಖ ಅನುಭವಿಸುತ್ತಾಳೆ ತಾಯ್ತನದ ಭಾವನಾತ್ಮಕ ಸಂಬಂಧವನ್ನು ಈ ಕತೆ ಧ್ವನಿಸುತ್ತದೆ.

## ೩.೨ ಗೃಹಿಣಿತ್ವ

ಹೆಣ್ಣಾಗಿ ಹುಟ್ಟಿದ್ದೇ ಸಮಸ್ಯೆಯಾಗಿರುವ ಇಂದಿನ ಸಮಾಜದಲ್ಲಿ ಅವಳು ಬೆಳೆದು ದೊಡ್ಡವಳಾಗಿ, ಮುದುಕಿಯಾಗುವವರೆಗೆ ಪುರುಷ ತನ್ನ ಬದುಕಿನಲ್ಲಿ ಎಂದೂ ಅನುಭವಿಸದ ಕೆಲವು ವಿಶಿಷ್ಟ ಅನುಭವಗಳನ್ನು ಅನುಭವಿಸುತ್ತಾಳೆ. ಇವುಗಳಲ್ಲಿ ಹೆಚ್ಚಿನವು ಪ್ರಕೃತಿ ಸಹಜ. ತನ್ನ ಸ್ವಂತ ಅನಿಸಿಕೆ, ಬಳಲಿಕೆ, ಸಹಜ ಕಾಮನೆ, ಕನಸು, ಆಕಾಂಕ್ಷೆ, ಬಯಕೆ, ಸ್ವಾತಂತ್ರ್ಯಗಳನ್ನು ಬದಿಗೊತ್ತಿ ಸದಾ ಕುಟುಂಬದ ಹಿತಕ್ಕಾಗಿ ಒದ್ದಾಡುವ ಹೆಣ್ಣಿನ ಮಾನಸಿಕ ತಾಕಲಾಟ ಸಮಸ್ಯೆಗಳಾಗಿ ಆಕೆಯನ್ನು ಕಾಡಬಹುದು. ಸಮಾಜದ ದ್ವಿಮುಖ ನೀತಿ, ಗಂಡಿನ ದಬ್ಬಾಳಿಕೆ, ದೈಹಿಕ ದೌರ್ಬಲ್ಯ ಮತ್ತು ಕೆಲವು ಸ್ವಯಂ ನಿರ್ಮಿತ ಕಟ್ಟಳೆಗಳ ನಡುವೆ ಮಹಿಳೆ ವಿವಿಧ ರೀತಿಯ ಸಂಕಷ್ಟಕ್ಕೆ ಒಳಗಾಗುತ್ತಾಳೆ. ಹುಟ್ಟಿನಿಂದ ಹೆಣ್ಣಿನ ಬದುಕಿನುದ್ದಕ್ಕೂ ಆಕೆಯನ್ನು ಅನೇಕ ಶಕ್ತಿಗಳೂ ನಿಯಂತ್ರಿಸುತ್ತಿರುತ್ತವೆ.

ಈ ಸಮಯ ಸಂದರ್ಭದಲ್ಲಿ ಆಕೆಗಾಗುತ್ತಿರುವ ಸ್ವಾತಂತ್ರ್ಯಹರಣದ ಪರಿವೆಯೇ ಇಲ್ಲದ ಹೆಣ್ಣಿಗೆ ತಾನು ಬಂಧನಕ್ಕೊಳಗಾಗಿರುವ ಅನುಭವವಾದರೂ ಎಲ್ಲಿದೆ? ಬಂಧನದಲ್ಲಿಯೇ ಕರ್ತವ್ಯ ಸೌಂದರ್ಯ ಜೀವನ ಕಾಣಬಯಸುವವರ ಮುಂದೆ ಸ್ವಾತಂತ್ರ್ಯದ ಮಾತು ಮೂಕ ರೋದನವಾಗಬಹುದು ಅಷ್ಟೇ. ಹೆಣ್ಣಿನ ಮೂಕ ವೇದನೆಯನ್ನು ಆದರ್ಶೀಕರಿಸುವ ಈ ಸಮಾಜದಲ್ಲಿ ಆಕೆಯ ಬಾಳಿನ ಸಂಕಟವನ್ನು ಗುರುತಿಸುವುದಾದರೂ ಹೇಗೆ? ಮದುವೆಯ ಚೌಕಟ್ಟಿನೊಳಗೆ ಕ್ರೌರ್ಯ, ವಂಚನೆ, ನಿರ್ಲಕ್ಷ್ಯಕ್ಕೆ ಒಳಗಾಗುವ ಹೆಣ್ಣುಗಳು ದಿನದಿನಕ್ಕೂ ಕುಬ್ಜರಾಗಿ ಧ್ವನಿ ಇಲ್ಲದವರಾಗುತ್ತಾರೆ.

ಇಂತಹ ಅನೇಕ ಸಂದರ್ಭಗಳಲ್ಲಿ ಹೆಣ್ಣಿನ ಮಾನಸಿಕ ಅಭದ್ರತೆ ಅತ್ಯಂತ ಕ್ರೂರವಾಗಿರುತ್ತದೆ. ಗಂಡನ ನಿರ್ಲಕ್ಷ್ಯ, ದೌರ್ಜನ್ಯ, ಬೇಜವಾಬ್ದಾರಿತನದಿಂದ ರೋಸಿ ಹೋದ ಹೆಂಡತಿ ಕೆಲವೊಮ್ಮೆ ಸಿಡಿದೇಳುವ, ಪ್ರತಿರೋಧ ವ್ಯಕ್ತಪಡಿಸುವ ಸಂದರ್ಭಗಳು ಕರಾವಳಿ ಲೇಖಕಿಯರ ಕಥೆಗಳಲ್ಲಿ ಅಲ್ಲಲ್ಲಿ ಅನಾವರಣಗೊಳ್ಳುವುದನ್ನು ಕಾಣಬಹುದು.

ಸಾರಾ ಅಬೂಬಕ್ಕರ್‌ರವರ "ನಿಯಮ ನಿಯಮಗಳ ನಡುವೆ" ಕಥೆಯಲ್ಲಿ ಜೊಹರಾ ತನ್ನ ಗಂಡ ಖಾದರ್ ಕಾರಣವಿಲ್ಲದೆ ತನ್ನ ಆಭರಣಗಳನ್ನು ಕೇಳಿದಾಗ ಕೊಡುವುದಿಲ್ಲ. ಖರ್ಚಿನ ದಿನಗಳು ಮುಂದಿವೆ ಎನ್ನುವ ದೂರದೃಷ್ಟಿ ಮತ್ತು ತನ್ನ ಕುಟುಂಬದ ಹಿತದೃಷ್ಟಿಯನ್ನು ಮನದಲ್ಲಿಟ್ಟುಕೊಂಡು ಆಕೆ ತಕ್ಷಣವೇ

ತನ್ನ ಒಡವೆಗಳನ್ನು ಗಂಡನಿಗೆ ಅಡವಿಡುವುದಕ್ಕೆ ನೀಡಲು ನಿರಾಕರಿಸುತ್ತಾಳೆ. ಇದೇ ಕ್ಷುಲ್ಲಕ ಕಾರಣವನ್ನು ಮುಂದಿಟ್ಟುಕೊಂಡು ಆಕೆಯ ಗಂಡ ಖಾದರ್ ಅವಳಿಗೆ ತಲಾಖ್ ನೀಡಿ ತವರು ಮನೆಗೆ ಕಳುಹಿಸುತ್ತಾನೆ.

ಜೋಹಾರಳಿಗೆ ಐದು ವರ್ಷದ ಹೆಣ್ಣು ಮಗು ಮತ್ತು ಮೂರು ವರ್ಷದ ಗಂಡು ಮಗು ಇರುತ್ತದೆ. ಅಲ್ಲದೆ ಆಕೆ ತುಂಬು ಗರ್ಭಿಣಿ. ಈ ಸ್ಥಿತಿಯಲ್ಲಿ ಗಂಡನಿಂದ ತಲಾಖ್ ಪಡೆದು ತವರಿನಲ್ಲೇ ಇರಬೇಕಾದ ಪರಿಸ್ಥಿತಿ. ಜೋಹಾರ್‌ಳದು ತವರು ಮನೆಯಲ್ಲೂ ಬಡತನ. ಆಕೆ ಅನಕ್ಷರಸ್ಥೆ. ಮೈ ನೆರೆಯುವ ವರೆಗೆ ಬೇರೆಯವರ ಮನೆಯಲ್ಲಿ ಚಾಕರಿ ಮಾಡಿ ಅವರಿಂದ ನಿಂದನೆಗೆ ಗುರಿಯಾಗಿ ಅವರು ಕೊಟ್ಟ ಎರಡು ಪಾವನಿನಿಂದ ಕಿವಿಗೆ ಆಭರಣ ಮಾಡಿಸಿ ಆಕೆಯ ತಾಯಿ ಆಕೆಯನ್ನು ಖಾದರ್‌ನಿಗೆ ಮದುವೆ ಮಾಡಿಕೊಟ್ಟಿದ್ದಳು. ತಾಯಿ ಮನೆಯಲ್ಲಿ ತನ್ನ ಮಗಳ ಮುಂದಿನ ಭವಿಷ್ಯವನ್ನು ನೆನೆದು ಗಾಬರಿಯಾಗಿ ಮಗಳಲ್ಲಿ ಅಳಿಯನಿಗೆ ಬಂಗಾರ ಕೊಡುತ್ತಿದ್ದರೆ ಏನಾಗುತ್ತಿತ್ತು ಎಂದು ಕೇಳುತ್ತಾಳೆ. ಹೆಂಡತಿಯಾಗಿ ಆಕೆ ಮುಂದಿನ ದಿನಗಳ ಖರ್ಚಿಗಾಗಿ ಆಭರಣ ಉಳಿಸಿಕೊಂಡಿದ್ದಾಳೆ ಹೊರತು ಗಂಡನ ಮೇಲಿನ ಸೇಡಿನಿಂದಲ್ಲ. ಅಷ್ಟಕ್ಕೂ ಗಂಡನಿಗೆ ಹಣದ ಅಗತ್ಯತೆ ಯಾಕೆ ಇತ್ತೆಂದು ಆತ ಹೆಂಡತಿಯಲ್ಲಿ ಹೇಳುವುದೇ ಇಲ್ಲ. ಕೊನೆಗೊಮ್ಮೆ ಗಂಡನಿಗೆ ಮತ್ತೆ ತನ್ನ ಮಡದಿ ಮಕ್ಕಳು ಬೇಕೆನಿಸುತ್ತದೆ. ಆಗ ತಾನೇ ಮಗುವಿಗೆ ಜನ್ಮ ನೀಡಿದ ಜೊಹರಾಳಿಗೆ ಮತ್ತೆ ಮರುಮದುವೆಯಾಗಬೇಕಾದರೆ ಮುಸ್ಲಿಂ ಧರ್ಮದಲ್ಲಿನ ಸಂಪ್ರದಾಯದಂತೆ "ಒಜ್ಜತ್" ಮಾಡಿಕೊಳ್ಳಬೇಕು. ತಾಯಿ ಅಮೀನಾ ಒಜ್ಜತ್‌ಗಾಗಿ ಮಗಳನ್ನು ಒಪ್ಪಿಸಲು ಹೊರಟಾಗ ಜೋಹರಾ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಇಲ್ಲಿ ಜೋಹರಾಳ ಒಪ್ಪಿಗೆಯನ್ನು ಯಾರೂ ಕೇಳುವುದೇ ಇಲ್ಲ. ತಾಯಿಯ ಕಳಕಳಿಯಿಂದಾಗಿ ಮನಸ್ಸು ಬದಲಾಯಿಸಿ ಮತ್ತೆ ಒಜ್ಜತ್‌ಗೆ ಒಪ್ಪಿಕೊಳ್ಳುತ್ತಾಳೆ.

ಮಗು ಹೆತ್ತು ದುರ್ಬಲಳಾಗಿದ್ದ ಜೋಹರಾಳನ್ನು ಮತ್ತೆ ಮದುವೆಯಾಗಬಯಸಿದ ಖಾದರ್‌ನ ಸಂದೇಶ ಹೊತ್ತು ತಂದ ಫಾತಿಮಾಳು ಬೇಗ ಋತುಸ್ರಾವ ಪ್ರಾರಂಭವಾಗಲೆಂದು ನಾಟಿ ಮದ್ದು ತಂದು ಕೊಡುತ್ತಾಳೆ. ಪ್ರಾರಂಭವಾದ ಸ್ರಾವ ನಿಲ್ಲುವುದೇ ಇಲ್ಲ. ಆದರೆ ಪ್ರಕೃತಿ ವಿರುದ್ಧ ಹೋಗಿ ನಿರಪರಾಧಿಯಾದ ಜೋಹಾರ್‌ಳ ಬದುಕು ಸಾವಿನಲ್ಲಿ ಕೊನೆಗೊಳ್ಳುವಂತಾಗುತ್ತದೆ. ಜೋಹಾರಳಿಗೆ ಜೀವನದಲ್ಲಿ ಕೊನೆಗೂ ಗಂಡ ಎಂದರೇನು? ತಾನು ಕಷ್ಟಪಟ್ಟು ದುಡಿದ ಒಡವೆ ಕೊಡುವುದಿಲ್ಲವೆಂದಿದ್ದು ಮಹಾಪರಾಧವಾಯಿತೇ? ಅದಕ್ಕಾಗಿ ತನ್ನನ್ನು, ತನ್ನ ಸ್ವಂತ ಮಕ್ಕಳನ್ನು ನಿರ್ಗತಿಕರನ್ನಾಗಿ ಮಾಡಬೇಕೇ?

ಗಂಡ ಹೆಂಡತಿಯ ಸಂಬಂಧ ಮೂರು ಬಾರಿ ತಲಾಖ್ ಎಂದೊಡನೆ ಮುಗಿದು ಹೋಯಿತೇ? ತಾನು ಕೂಡ ಹೀಗೆಯೇ ಮೂರು ಬಾರಿ ತಲಾಖ್ ಶಬ್ದವನ್ನು ಉಚ್ಚರಿಸಿ ಆತನನ್ನು ಬಿಡುಗಡೆಗೊಳಿಸಬಹುದೆ? ಎಂಬ ಪ್ರಶ್ನೆಗಳು ಪ್ರಶ್ನೆಗಳಾಗಿ ಆಕೆಯ ಬಾಳ ಕೊನೆಯ ತನಕ ಹಾಗೇ ಉಳಿಯುತ್ತದೆ ಹೊರತು ಉತ್ತರ ಸಿಗುವುದಿಲ್ಲ. ಇದು ಮುಸ್ಲಿಂ ಮಹಿಳೆಯರ ಜೀವನದ ದುಸ್ಥಿತಿಯ ಚಿತ್ರಣವಾಗಿದೆ.

'ಸಾರಾಂಶ' ಕಥೆಯಲ್ಲಿ ಯಮುನ ಗಂಡನಿಂದ ಮೋಸಕ್ಕೊಳಗಾದ ಹೆಣ್ಣು. ಆಕೆಯ ಗಂಡ ಇಬ್ಬರು ಹೆಂಗಸರನ್ನು ಮದುವೆಯಾದವನು. ಒಬ್ಬ ಗಂಡ ಇಬ್ಬರು ಮಡದಿಯರನ್ನು ಕಟ್ಟಿಕೊಂಡಾಗ ಹೆಂಡತಿ ಎನ್ನುವ ಜೀವ ಆ ಸಂಸಾರದೊಳಗೆ ಅನುಭವಿಸುವ ಮಾನಸಿಕ ತೊಳಲಾಟ ಮನೋವ್ಯಾಕುಲತೆಯನ್ನು ಸೃಷ್ಟಿಸುವುದನ್ನು ಸಾರಾ ಅವರ ಕಥೆಗಳಲ್ಲಿ ಕಾಣಬಹುದು. ಕಥೆಯಲ್ಲಿ ಯಮುನಾ ಏನೇನೋ ಸಂಕಷ್ಟಗಳನ್ನು ಅನುಭವಿಸಿ ಕೊನೆಗೆ ಬೀದಿಗೆ ಬೀಳುತ್ತಾಳೆ.

ಕೊನೆಗೆ ಶಬನಾ ಎನ್ನುವ ಕರುಣಾಳು ಹೆಣ್ಣೊಬ್ಬಳ ಮನೆಯಲ್ಲಿ ಮನೆಗೆಲಸಕ್ಕೆ ಸೇರಿಕೊಳ್ಳುತ್ತಾಳೆ. ಶಬನಾ ಹೆಣ್ಣಾಗಿ ಹೆಣ್ಣಿನ ನೋವನ್ನು ಅರ್ಥ ಮಾಡಿಕೊಂಡು ಆಕೆ ಬದುಕನ್ನು ನೆಟ್ಟಗೆ ಮಾಡಿಕೊಳ್ಳಲು ಪ್ರಯತ್ನಿಸುವ ಸಾಹಸಕ್ಕೆ ಕೈ ಹಾಕಿದರೂ ಆಕೆಯ ಗಂಡನಿಂದ ಆಕೆಗೆ ಯಾವುದೇ ಸಹಕಾರ ದೊರೆಯುವುದಿಲ್ಲ. ಎಷ್ಟಾದರೂ ಆಕೆ ಗಂಡ ಸಮಿಯುಲ್ಲಾ ಗಂಡು ತಾನೆ...? ಆತನಿಗೆ ಹೆಣ್ಣಿನ ಬದುಕು, ಅದರ ಪ್ರಾಮುಖ್ಯ ಸ್ವಲ್ಪವೂ ಅಗತ್ಯವೆನಿಸುವುದಿಲ್ಲ.

ಯಮುನಾಳನ್ನು ಮನೆಯಲ್ಲಿರಿಸಿಕೊಂಡರೆ ತನಗೆ ತೊಂದರೆಯಾಗುವುದರ ಬಗ್ಗೆ ಯೋಚಿಸುತ್ತಾನೆಯೇ ಹೊರತು ಆಕೆಯ ಬದುಕಿಗೆ ಆಸರೆಯಾಗ ಹೊರಟ ತನ್ನ ಹೆಂಡತಿ ಶಬಾನಳಿಗೆ ಧೈರ್ಯ ತುಂಬಲಾರದ ಅಂಜು ಬುರುಕ. ಯಮುನಾಳ ಬಾಯಿಯಿಂದ ಆಕೆಯ ಗಂಡ ಇಬ್ಬರು ಹೆಂಡಿರನ್ನು ಕಟ್ಟಿಕೊಂಡು ಸಂಸಾರ ನಡೆಸಿದ ಕಥೆ ಕೇಳುವಾಗ ಶಬಾನಳ ಬಾಯಿಯಿಂದ ಮಾತೊಂದು ಹೀಗೆ ಹೊರಹೊಮ್ಮುತ್ತದೆ. ಬಿತ್ತಿ ಬೆಳೆಯುವುದಕ್ಕೆ ಒಂದು ಹೊಲ. ಇನ್ನೊಂದು ಆಟದ ಮೈದಾನ. ಸಾರಾ ಅಬೂಬಕ್ಕರ್‌ರವರು ಹೆಣ್ಣೊಬ್ಬಳು ಸಂಸಾರದಲ್ಲಿ ಗಂಡನ ಚಾಲಾಕಿತನವನ್ನು ಅರ್ಥೈಸಿಕೊಂಡ ಬಗೆಯನ್ನು ಇಲ್ಲಿ ವಿಶ್ಲೇಷಿಸಿದ್ದಾರೆ.

'ಬಂದಣಿಗೆ' ಕಥೆಯಲ್ಲಿ ಅಬ್ದುಲ್ ಖಾದರ್ ತನ್ನ ಹೆಂಡತಿ ಅಸ್ಮಾಳ ಮೇಲೆ ಸಂಪೂರ್ಣ ಅಧಿಕಾರ ನಡೆಸುವ ಕ್ರೂರ ಗಂಡ. ಗೃಹಿಣಿಯಾಗಿ ಮನೆಯೊಳಗೆ ಯಾವ ಸ್ವಾತಂತ್ರ್ಯವೂ ಇಲ್ಲದೆ ಆತನ ಆಜ್ಞೆಯನ್ನು

ಶಿರಸಾ ಪಾಲಿಸುವ ಮುಗ್ಧ ಹೆಂಡತಿ. ಆದರೂ ಆತನಿಗೆ ತನ್ನಾಕೆಯ ಮೇಲೆ ಕೊಂಚವೂ ಪ್ರೀತಿ, ಅನುಕಂಪ, ಅನುರಾಗವಿಲ್ಲ. ತನ್ನ ಗೆಳೆಯನೆದುರು ಆಕೆಯನ್ನು ಕೆಟ್ಟ ಬೈಗುಳ ಉಪಯೋಗಿಸಿ ಅಧಿಕಾರ ಚಲಾಯಿಸುವುದಕ್ಕೆ ಹಿಂದೆ ಮುಂದೆ ನೋಡುವುದಿಲ್ಲ. ಆದರೆ ಬಾಲ್ಯದ ಗೆಳೆಯ ಎಸ್.ಪಿ. ಖಾದರ್ ದುರ್ನಡತೆಗೆ ಹೇಸಿಕೊಳ್ಳುತ್ತಾನೆ.

ಗಂಡನಿಂದ ಹೆಂಡತಿಗಾಗುವ ದೌರ್ಜನ್ಯಕ್ಕೆ ಮನ ಮಿಡಿಯುತ್ತದೆ. ಖಾದರ್‌ನ ದೌರ್ಜನ್ಯ ಆ ಎಸ್. ಪಿ. ಯ ಎದುರು ನಿರಾತಂಕವಾಗಿ ನಡೆದಾಗ ದೌರ್ಜನ್ಯ ಪರಮಾವಧಿಗೇರಿದಾಗ ಆ ಎಸ್. ಪಿ. ಗೆ ಭವ್ಯ ಬಂಗಲೆಯೊಳಗಿದ್ದರೂ ಕೊಳಚೆ ಗುಂಡಿಗೆ ಕಾಲಿಟ್ಟ ಅನುಭವವಾಗುತ್ತದೆ. ಖಾದರ್ ತನ್ನ ಹೆಂಡತಿಯನ್ನು ವರದಕ್ಷಿಣೆಗಾಗಿ ಪೀಡಿಸಿದ ಕಥೆಯನ್ನು ನಿರ್ಭಯವಾಗಿ ಎಸ್.ಪಿ. (ಗೆಳೆಯ)ಯ ಎದುರು ಬಿಚ್ಚಿಡುವ ಮೂರ್ಖ ಗಂಡ. ರಂಡೆ, ಬೇವಾರ್ಸಿ ಮುಂತಾದ ಅಸಹ್ಯ ಹುಟ್ಟಿಸುವ ಬೈಗುಳಗಳನ್ನು ತನ್ನ ಹೆಂಡತಿಗೆ ಇನ್ನೊಬ್ಬನ ಎದುರು ಯಾವುದೇ ಮುಜುಗರ ಇಲ್ಲದೇ ಉಪಯೋಗಿಸುವ ಈತ ತನ್ನಾಕೆಗೆ ತೋರುವ ಅಗೌರವದ ಪರಮಾವಧಿ ಇದು ಎಂದ್ರೆ ತಪ್ಪಾಗಲಾರದು. ತನ್ನ ಹೆಂಡತಿ ಇದ್ದರೂ ಇನ್ನೊಂದು ಹೆಣ್ಣಿನ ಮೇಲೆ ಕಣ್ಣು ಹಾಯಿಸಿ ಈಗ ಸೊಂಟ ಮುರಿದುಕೊಂಡು ಶಿಕ್ಷೆ ಅನುಭವಿಸುತ್ತಿದ್ದರೂ ಹೆಂಡತಿ ಎಂದೂ ಅವನಿಗೆ ಮನೆ-ಮನ ಬೆಳಗಿಸುವ ಗೃಹಿಣಿಯಾಗಿ ಗೋಚರಿಸುವುದೇ ಇಲ್ಲ. ಆಕೆಯ ಪ್ರಾಮಾಣಿಕ ಗೃಹಿಣಿತ್ವಕ್ಕೆ ಕಿಂಚಿತ್ತೂ ಬೆಲೆಯಿಲ್ಲ.

ಕಥೆಗಾರ್ತಿ ಸಾರಾ ಅಬೂಬಕ್ಕರ್ ಇಲ್ಲಿ ಅಸ್ಮಾಳನ್ನು ನೋವು ನುಂಗಿ ದೌರ್ಜನ್ಯ ಸಹಿಸಿ ಮೌನ ಧರಿಸಿ ಮೂಕ ವೇದನೆ ಅನುಭವಿಸುವ ಗೃಹಿಣಿಯಾಗಿ ಚಿತ್ರಿಸಿದ್ದರೂ ಒಂದೆಡೆ ಎಸ್. ಪಿ. ಯ ಮೂಲಕ ಕಣ್ಣೆದುರೇ ಆ ಹೆಣ್ಣಿಗೆ ಆಗುತ್ತಿರುವ ಅವಮಾನಕ್ಕೆ ನೀರಿನಿಂದ ತೆಗೆದ ಮೀನಿನಂತೆ ಚಡಪಡಿಸುವ ದೃಶ್ಯವನ್ನು ಓದುಗರ ಮುಂದಿಡುತ್ತಾರೆ. ಆತನ ಮನಸ್ಸು ಆಕೆಯ ನೋವಿಗೆ ಸ್ಪಂದಿಸುತ್ತದೆ, ಕರುಣೆ ತೋರುತ್ತದೆ, ಮಿಡಿಯುತ್ತದೆ. ಖಾದರ್‌ನ ಬುದ್ಧಿಗೆ ಸಿಡಿದೇಳುತ್ತದೆ.

ಕೆಟ್ಟ ಕೆಲಸ ಮಾಡುವುದಕ್ಕೆ ಸಾಹಸ ಮಾಡಿ ಸೊಂಟ ಮುರಿದು ಬಿದ್ದಿದ್ದರೂ ಸೋಲೊಪ್ಪದೆ ತನ್ನ ಸೇವೆ ಆಕೆಯಲ್ಲದೆ ಬೇರೆ ಯಾರು ಮಾಡಬೇಕು? ತಾನು ಆಕೆಯ ಗಂಡನಲ್ಲವೇ? ಎನ್ನುತ್ತಾನೆ. ತಕ್ಷಣವೇ ಎಸ್. ಪಿ. ಆಮಾಲುದ್ದೀನ್‌ಗೆ ಖಾದರ್‌ನ ಕೆನ್ನೆಗೆ ರಪ್ಪನೆ ಬಾರಿಸಬೇಕೆನಿಸುತ್ತದೆ. ಇದು ಕಥೆಗಾರ್ತಿ ಆತನ ಮೂಲಕ ವ್ಯಕ್ತಪಡಿಸುತ್ತಿರುವ ಪ್ರತಿರೋಧ ಎಂದರೆ ತಪ್ಪಾಗಲಾರದು.

'ಜನನ' ಕಥೆ ಆರಂಭಗೊಳ್ಳುವುದು ಹೀಗೆ. ನೋವಿಲ್ಲದೆ, ನೋವು ತಿನ್ನದೆ ಎಂದಾದರೂ ಹುಟ್ಟಲು ಸಾಧ್ಯವೇ? ಬಹಳಷ್ಟು ನೋವು ಅನುಭವಿಸಿದ ಬಳಿಕ ಮಾತ್ರ ಏನಾದರೂ ಹುಟ್ಟಲು ಸಾಧ್ಯ... ಎಲ್ಲಾ ನೋವಿಗೂ ಕೊನೆ ಒಂದು ಹುಟ್ಟಾಗಬೇಕು. ಇದು ಹೆಣ್ಣಿನ ಬದುಕಿನ ನೋವನ್ನು ಪರೋಕ್ಷವಾಗಿ ಬಿಂಬಿಸಿದಂತಿದೆ. ಕದೀಜ ಹೆರಿಗೆ ನೋವು ಅನುಭವಿಸುತ್ತಲೇ ತನ್ನ ಬದುಕಿನ ಒಂದೊಂದೇ ಹಂತಗಳನ್ನು ಅವಲೋಕಿಸುತ್ತಾಳೆ.

ವಿಶಿಷ್ಟ ರೀತಿಯಲ್ಲಿ ರಚನೆಗೊಂಡ ಈ ಕಥೆಯಲ್ಲಿ ಕದೀಜಳ ಗಂಡ ಆವಳಿಗಿಂತ ಪ್ರಾಯದಲ್ಲಿ ತುಂಬಾ ಹಿರಿಯವ. ಹೂವಿನ ಮಧು ಹೀರ ಬಂದ ದುಂಬಿ ಮಾತ್ರವಾಗಿದ್ದ ಆತ, ಹೂವಿನ ಮೃದುತ್ವ ಆತನಿಗರಿವಾಗಲೇ ಇಲ್ಲ. ಅದರ ಸೌರಭ ಅತನಿಗೆ ತಟ್ಟಲೇ ಇಲ್ಲ. ಆತನಿಗರಿವಾದದ್ದು ಇಷ್ಟೇ. ಈ ಹೂವು ತನಗೆ ಮಧು ಸ್ಫುರಿಸುವುದಕ್ಕಾಗಿ ಮಾತ್ರ ಅರಳಿದೆ. ಅದಕ್ಕೆ ಅದರದ್ದೇ ಆದ ಪ್ರಪಂಚವಿದ್ದು ಅದರಲ್ಲಿ ತಾನೋರ್ವ ಅತಿಥಿ ಮಾತ್ರ ಎಂಬುದು ಆತನ ಗಮನಕ್ಕೆ ಬರಲೇ ಇಲ್ಲ, ಆತ ಸರ್ವಾಧಿಕಾರಿಯಾದ.

ಸಾರಾ ಅಬೂಬಕ್ಕರ್‌ರವರು ಗಂಡನಾದವನ ಮನಸ್ಸಿನ ಚಿಂತನೆಯನ್ನು ಸ್ಪಷ್ಟವಾಗಿ ಇಲ್ಲಿ ಬಹಿರಂಗಗೊಳಿಸಿದ್ದಾರೆ. ಹೆಂಡತಿಯಾಗಿ, ಗೃಹಿಣಿಯಾಗಿ ಬಾಳಬೇಕಾಗಿದ್ದ ಕದೀಜಾಳ ಬದುಕಿಗೆ ಆತ ಆಸರೆಯಾಗಲೇ ಇಲ್ಲ. ಸವತಿಯೇ ಮಕ್ಕಳಾಗಲಿಲ್ಲ ಎಂಬ ನೆಪವೊಡ್ಡಿ (ಅದು ಅವನು ಬಯಸಿದಷ್ಟು ಬೇಗ) ಹಿಂದೆಮುಂದೆ ನೋಡದೇ ಇನ್ನೊಂದು ಮದುವೆಯಾದ.

ಮನೆಗೆ ಕರೆತಂದ ಹೆಂಡತಿ ಕದೀಜಾಳಿಗಿಂತ ಹೆಚ್ಚು ಆಕೆಯ ಗಂಡನಿಗೆ ಇಷ್ಟವಾಗತೊಡಗಿದಳು. ಗಂಡ ಸವತಿಯ ಮಧ್ಯೆ ತನ್ನ ತವರಿಗೂ ಹೋಗಲಾರದ ಅನಿವಾರ್ಯತೆಯಿಂದ ಆಕೆ ಹೇಗೋ ಸಂಭಾಳಿಸಿಕೊಂಡು ಗಂಡನ ಮನೆಯಲ್ಲಿಯೇ ಸಂಸಾರ ಸಾಗಿಸುವ ರೀತಿ ಅತ್ಯಂತ ಮನೋವೇದನೆ ಉಂಟು ಮಾಡುವಂತಹದ್ದು. ತವರಿಗೆ ಪಾಲು ತರಲು ಗಂಡ ಕಳಿಸಿದಾಗ ಅದಕ್ಕೂ ಒಪ್ಪಿಕೊಂಡು ಆಕೆ ತವರಲ್ಲಿ ಪಾಲು ಕೇಳುತ್ತಾಳೆ. ಗಂಡನ ಮನೆಯಲ್ಲಿ ಜೀವನ ಸಾಗಿಸಲು ಗೃಹಿಣಿ ಕಷ್ಟಪಡುತ್ತಾಳೆ.

ತವರು ಮನೆಯವರು ಪಾಲು ಕೊಡಲು ನಿರಾಕರಿಸಿದಾಗ ಕದೀಜಾಳ ಗಂಡ ಆಕೆ ತವರು ಮನೆಗೆ ಹೋಗದಂತೆ ತಡೆಯೊಡ್ಡುತ್ತಾನೆ. ತಾಯಿಯ ಅನಾರೋಗ್ಯ ಸ್ಥಿತಿಯಲ್ಲೂ ಆಕೆಯನ್ನು ನೋಡದಂತೆ ಕಟ್ಟಪ್ಪಣೆ ಮಾಡುತ್ತಾನೆ. ಆಕೆ ಮತ್ತೆ ಮೂರು ಮಕ್ಕಳ ತಾಯಿಯಾಗುತ್ತಾಳೆ. ನಾಲ್ಕನೇ ಮಗುವಿಗೆ ಮತ್ತೆ ಗರ್ಭಿಣಿಯಾಗುತ್ತಾಳೆ. ಆಕೆಯ ಬಾಣಂತನಕ್ಕೂ ತಾಯಿ-ತವರಿನವರ ಸುಳಿವು ತಾಗದಂತೆ ಕಟ್ಟಪ್ಪಣೆ

ವಿಧಿಸುತ್ತಾನೆ. ಆತನೂ ಆಕೆಯ ಹೆರಿಗೆಯ ಸಂದರ್ಭದಲ್ಲಿ ಹಜ್ ಯಾತ್ರೆಗೆ ಹೊರಡುತ್ತಾನೆ. ಈ ಬಾರಿ ಆಕೆಯದ್ದು ಅತ್ಯಂತ ಕಠಿಣ ಹೆರಿಗೆ. ಆಕೆ ಎಷ್ಟೇ ನೋವು ತಿಂದರೂ ಹೆರಿಗೆಯಾಗದೇ ಕೊನೆಗೆ ಸಾವೇ ಗತಿ ಎಂದು ಮನದಟ್ಟಾದಾಗ ತನ್ನ ಹಿರಿಯ ಮಗಳನ್ನು ಕರೆದು ಮಗೂ ನನಗಿನ್ನು ಮಗು ಹುಟ್ಟುವುದಿಲ್ಲ. ಅದನ್ನು ಹುಟ್ಟಿಸುವ ಶಕ್ತಿ ನನ್ನಲ್ಲಿಲ್ಲ ಎನ್ನುತ್ತಾಳೆ. ಹೆಣ್ಣು ಮಗುವನ್ನು ಹೆರುವ ಯಂತ್ರ ಎಂದಷ್ಟೇ ಪರಿಗಣಿಸಿರುವ ಪುರುಷ ಪ್ರಧಾನ ಸಮಾಜ ವ್ಯವಸ್ಥೆಗೆ ಆಕೆಯ ಪ್ರತಿರೋಧದ ಧ್ವನಿ ವ್ಯಕ್ತವಾಗುತ್ತದೆ.

'ವಿಜ್ಞಾನ ಭವಿಷ್ಯ ನುಡಿದಾಗ' ಕಥೆಯಲ್ಲಿ ಮಾಲಿನಿ ಇಬ್ಬರು ಹೆಣ್ಣು ಮಕ್ಕಳಿಗೆ ಜನ್ಮ ನೀಡಿದ ಗೃಹಿಣಿ. ಇಬ್ಬರು ಚಿಕ್ಕ ಮಕ್ಕಳ ಲಾಲನೆ ಪಾಲನೆಯಲ್ಲಿ ಮನೆಗೆಲಸದಲ್ಲಿ ಸದಾ ಚಟುವಟಿಕೆಯಿಂದ ಇದ್ದವಳು ಆಕೆಯ ಮನೆಗೆಲಸದಲ್ಲಿ ಸ್ವಲ್ಪವೂ ಸಹಾಯ ಮಾಡದೆ ದೂರವಿದ್ದು ಬಿಡುವ ಗಂಡ. ತನ್ನ ಹೆಂಡತಿಗೆ ಗಂಡು ಮಗುವಾಗದೇ ಇರುವುದೇ ಅವನ ಸಂಸಾರಕ್ಕೊಂದು ದೊಡ್ಡ ಸಮಸ್ಯೆ. ಮಕ್ಕಳನ್ನು ಸಾಕುವ ಜವಾಬ್ದಾರಿ ಮನೆಯ ಗೃಹಿಣಿಗೆ ಮಾತ್ರ ಎಂದಷ್ಟೇ ಭಾವನೆ. ಎರಡು ಮಕ್ಕಳು ಸಾಕಾಗಿರುವ ಮಾಲಿನಿ ಮೂರನೇ ಸಲ ಗರ್ಭಿಣಿಯಾದಾಗ ಆತ ಅದು ಗಂಡಾಗಲಿ ಎಂದು ಆಶಿಸುತ್ತಾನೆ. ಭ್ರೂಣ ಲಿಂಗ ಪರೀಕ್ಷೆಗೂ ಸಿದ್ಧನಾಗುತ್ತಾನೆ. ಗಂಡಾದರೆ ಇರಲಿ ಹೆಣ್ಣಾದರೆ ತೆಗೆಸಿಬಿಡೋಣವೆನ್ನುವ ನಿರ್ಧಾರವನ್ನು ಹೇಳುತ್ತಾನೆ.

ಮಾಲಿನಿಯ ಗರ್ಭದಲ್ಲಿರುವ ಶಿಶು ತಪ್ಪು ಪರೀಕ್ಷೆಯಿಂದ (ಗರ್ಭ ಪರೀಕ್ಷೆಯಲ್ಲಿ ವಿಫಲಗೊಂಡು) ಹೆಣ್ಣು ಎಂದು ತಿಳಿದು ಆಕೆಯ ಇಚ್ಛೆಗೆ ವಿರುದ್ಧವಾಗಿ ಅದನ್ನು ಗರ್ಭಪಾತ ಮಾಡಿಸುತ್ತಾನೆ. ವಾರಸುದಾರನಾಗಿ ಗಂಡು ಮಗು ಬೇಕೆಂಬ ಮಹದಾಸೆಯಿಂದ ಹುಚ್ಚು ಸಾಹಸಕ್ಕೆ ಕೈ ಹಾಕಿ ತನ್ನ ಕೈಯಾರೆ ತನ್ನ ಗಂಡು ಮಗುವನ್ನೇ ಕಳೆದುಕೊಳ್ಳುತ್ತಾನೆ. ಇದರಿಂದ ಮನೋವೈಕಲ್ಯಕ್ಕೆ ಒಳಗಾದ ಪತ್ನಿಯನ್ನು ನೋಡಿ ಆತ ಕೊಂಚ ಮಟ್ಟಿಗೆ ಹೆಂಡತಿಯ ವಿಷಯದಲ್ಲಿ ಮೃದುವಾಗುತ್ತಾನೆ. ಆಕೆಯನ್ನು ಮನೋವೈದ್ಯರಲ್ಲಿ ಕರೆದುಕೊಂಡು ಹೋಗಿ ಆಕೆಗೆ ಮಾನಸಿಕ ಸಮಾಧಾನ ಮರಳಿ ಬರುವಂತೆ, ನಡೆದ ಘಟನೆಗಳು ಮರೆಯುವಂತೆ ಮಾಡುತ್ತಾನೆ. ಆಕೆ ಯಥಾಸ್ಥಿತಿಗೆ ಬಂದ ಮೇಲೆ ಮೊದಲಿನ ಎಲ್ಲಾ ಘಟನೆಗಳನ್ನು ಮರೆತ ಅವಳ ಗಂಡ ಮಧುಕರನ ವರಸೆಯೇ ಬೇರೆ.

ಮಾಲಿನಿ ಒಂದು ದಿನ ರಾತ್ರಿ ಗಂಡನಿಗೆ ನಮ್ಮ ಇಬ್ಬರು ಮಕ್ಕಳು ನಮಗೆ ಸಾಕು, ಅವರನ್ನು ಚೆನ್ನಾಗಿ ಓದಿಸಿ ಭವಿಷ್ಯ ಕಲ್ಪಿಸೋಣ ಎಂದಾಗ ಅವನ ಉತ್ತರ, ಅದು ಹೇಗಾಗುತ್ತದೆ? ಒಂದು ಗಂಡು

ಮಗು ಬೇಕೇ ಬೇಕು. ಅದು ಒಂದು ವೇಳೆ ಹೆಣ್ಣಾದರೆ ಬೇರೊಬ್ಬ ಒಳ್ಳೆಯ ತಜ್ಞರಿಂದ ಪರೀಕ್ಷಿಸೋಣ ಎಂದಾಗಿತ್ತು. ಆಕೆ ಹೆಂಡತಿಯಾಗಿ ಏನು ಯೋಚಿಸುತ್ತಾಳೆ? ಆಕೆ ಪ್ರಶ್ನೆಯೊಳಗೊಂದು ಪ್ರತಿರೋಧದ ಧ್ವನಿ ಇದ್ದಂತೆ ತೋರುವುದಲ್ಲದೆ ಹೆಂಡತಿ ಅಂದರೇನು? ಎನ್ನುವ ಪ್ರಶ್ನೆಯೇ ಮನಸ್ಸು ಕಳೆದುಕೊಂಡ ಒಂದು ಜೀವವಷ್ಟೇ? ಎನ್ನುವ ಪ್ರಶ್ನೆ ಅದರೊಳಗೆ ಅಡಗಿರುತ್ತದೆ.

ಪುರುಷನ ದೃಷ್ಟಿಯಲ್ಲಿ ಸ್ತ್ರೀ ಜೀವನದ ಉದ್ದೇಶ ಇಷ್ಟೆ.. ಸಂತಾನ-ಪ್ರಸವದ ಹೊರತು ಬೇರೆ ಯಾವ ಆಸೆಯೂ ಇರತಕ್ಕದ್ದಲ್ಲ. ಸ್ತ್ರೀಯು ಕೇವಲ ಗಂಡನ ಕಾಮ ತೃಪ್ತಿಯನ್ನು ತಣಿಸಿ ಮಕ್ಕಳನ್ನು ಪೋಷಿಸಿ ಮನೆವಾರ್ತೆಯನ್ನಷ್ಟೇ ನೋಡಿಕೊಂಡು ಇರಬೇಕೆಂಬ ತರ್ಕ ಎಷ್ಟರ ಮಟ್ಟಿಗೆ ನ್ಯಾಯಯುತವಾಗಿದೆ? ಈ ನಿಟ್ಟಿನಲ್ಲಿ ಸಾರಾ ಅಬೂಬಕ್ಕರ್‌ರವರ ಕಥೆಗಳಲ್ಲಿ ಕೆಲವೊಂದು ಕಡೆ ಹೆಂಡತಿಯಾಗಿ-ಗೃಹಿಣಿಯಾಗಿ-ಗಂಡನ ಮೇಲೆ ಪ್ರತಿರೋಧ ಅಬ್ಬರದಲ್ಲಿ ಇಲ್ಲದಿದ್ದರೂ ಕ್ಷೀಣವಾಗಿ ಕಾಣಸಿಗುತ್ತದೆ.

ಸಾರಾ ಅಬೂಬಕ್ಕರ್‌ರವರ 'ನಿಯಮ ನಿಯಮಗಳ ನಡುವೆ' ಕತೆಯಲ್ಲಿ ಜೊಹರಾ ಮತ್ತು ಕಾದರ್‌ಗೆ ಇಬ್ಬರ ಮಕ್ಕಳಾದ ನಂತರ ಹಣಕಾಸಿನ ಸಮಸ್ಯೆ ಉಂಟಾಗುತ್ತದೆ. ಆಗ ಕಾದರ್ ಜೊಹರಾಳ ಕಿವಿಯ ಆಭರಣ ಕೇಳುತ್ತಾನೆ. ಆಕೆ ಕೊಡದೇ ಇದ್ದಾಗ ಜಗಳವಾಗಿ ತವರಿಗೆ ಕಳುಹಿಸುತ್ತಾನೆ. ಅಷ್ಟರಲ್ಲಿ ಆಕೆ ಮತ್ತೆ ಗರ್ಭಿಣಿಯಾಗಿರುತ್ತಾಳೆ. ನಂತರ ಹೆಂಡತಿ ತನಗೆ ಒಡವೆ ಕೊಡಲಿಲ್ಲವೆಂಬ ಕಾರಣಕ್ಕೆ ತಲಾಖ್ ಕೊಡುತ್ತಾನೆ. ತವರಿನಲ್ಲೂ ತಾಯಿಯ, ತಮ್ಮನ ಬೈಗುಳ, ಅಸಡ್ಡೆ, ತಿರಸ್ಕಾರಗಳಿಂದ ನೊಂದುಕೊಳ್ಳುತ್ತಾಳೆ. ಗಂಡುಮಗುವಿಗೆ ಜನ್ಮ ನೀಡಿದ್ದು ಗೊತ್ತಾಗಿ ಕಾದರ್ ದೂರದ ಸಂಬಂಧಿ ಫಾತಿಮಾಳ ಮೂಲಕ ಮತ್ತೆ ಮದುವೆಯಾಗುವ ವಿಷಯವನ್ನು ತಿಳಿಸುತ್ತಾನೆ.

ಜೊಹರಾ ಪ್ರತಿರೋಧ ವ್ಯಕ್ತಪಡಿಸಿದಾಗ ಅದಕ್ಕೆ ಬೆಲೆ ಇರುವುದಿಲ್ಲ. ಹೆರಿಗೆಯಾದ ನಂತರ ಒಮ್ಮೆಯೂ ಋತುಸ್ರಾವವಾಗದ ಜೊಹರಾಳಿಗೆ ಫಾತಿಮಾಳ ಮಾತುಗಳನ್ನು ಕೇಳಿ ತಾಯಿ ಅಮೀನ ಮಗಳ ಬದುಕು ಹಸನಾಗಲಿ ಎಂದು ಒಜ್ಜತ್ ಮಾಡಲು ಪ್ರಯತ್ನಿಸುತ್ತಾಳೆ. ಹೆರಿಗೆಯಾದ ಹೆಂಗಸರ ಮುಟ್ಟು ಸುದೀರ್ಘಗಳ ನಂತರ ಆಗುವುದರಿಂದ ಎಲ್ಲಿ ಖಾದರ್ ಮನಸ್ಸು ಬದಲಾಯಿಸಿ ಬಿಡುತ್ತಾನೆಂದು ಅನೇಕ ಕಷಾಯ ಮಾತ್ರೆಗಳನ್ನು ನುಂಗಿಸಿ ಹೊರಗಾಗಿಸಲು ಪ್ರಯತ್ನಿಸುತ್ತಾರೆ.

ಮೊದಲೇ ಹೆರಿಗೆಯಾಗಿ ನಿತ್ರಾಣದಲ್ಲಿದ್ದ ಜೊಹರಾಳಿಗೆ ಜ್ವರ ಮತ್ತು ಹೊಟ್ಟೆನೋವಿನಿಂದ ಪ್ರಾಣಬಿಡುತ್ತಾಳೆ. ಸಾಯುವಾಗ ತನ್ನ ತಾಯಿಗೆ ಕೇಳುವ ಪ್ರಶ್ನೆ "ಉಮ್ಮಾ ನನ್ನನ್ನು... ಇಷ್ಟೆಲ್ಲಾ... ಯಾತನೆಗೆ ಗುರಿಮಾಡಿದ... ನಿನ್ನಳಿಯ, ನನಗೆ ತಲಾಖ್... ಕೊಟ್ಟು ಮತ್ತೊಮ್ಮೆ ನನ್ನನ್ನು ಮದುವೆಯಾಗ ಬಯಸಿದ ನಿನ್ನಳಿಯ... ಎಲ್ಲಿದ್ದಾನೆ? ದುಃಖದಿಂದ ಮಾತುಗಳು ಹೊರಡುತ್ತವೆ. ಇಲ್ಲಿ ಕಾದರ್ ತಲಾಖ್ ನೀಡಿ ಒಮ್ಮೆ ಕೊಂದವನು, ಮತ್ತೆ ಜೊಹರಾಳ ತಲಾಖ್ ಕುರಿತಾ ಪ್ರಶ್ನೆ ಅದೆಷ್ಟು ಹೆಣ್ಣುಮಕ್ಕಳ ಕಣ್ಣೀರಿನ ಕತೆಯಾಗಿ ಇಲ್ಲಿ ವ್ಯಕ್ತವಾಗಿದೆ. ಇಲ್ಲಿ ಜೊಹರಾಳ ಪ್ರತಿರೋಧ ವ್ಯಕ್ತವಾದರೂ, ಇಸ್ಲಾಂ ಧರ್ಮ ಮಹಿಳೆಯರನ್ನು ಶೋಷಣೆ ಮಾಡಿರುವುದನ್ನು ಕತೆಗಾರ್ತಿ ಜೊಹರಾಳ ಮೂಲಕ ನ್ಯಾಯ ಕೇಳಿಸುತ್ತಾರೆ.

ಸಾರಾ ಅಬೂಬಕ್ಕರ್‌ರವರ 'ಅಪಹರಣ ಕತೆ'ಯಲ್ಲಿ ಪಂಡಿತನೊಬ್ಬ ಭಗವದ್ಗೀತೆ, ಖುರಾನ್, ಬೈಬಲ್ ಮೂರು ಧರ್ಮಗ್ರಂಥಗಳಲ್ಲಿರುವ ಸಮಾನ ಅಂಶಗಳ ಬಗ್ಗೆ ಸಂಶೋಧನೆಯನ್ನು ಮಾಡಿ ಅನಂತರ ಆ ಗ್ರಂಥವನ್ನು ಪ್ರಕಟಿಸಿ ಮಾರಾಟ ಮಾಡಲು ಒದ್ದಾಡುವ ಪರಿಯನ್ನು ಕಥೆಯಲ್ಲಿ ಚಿತ್ರಿಸಲಾಗಿದೆ. ಆದರೆ ಈ ಪಂಡಿತ ಹೆಂಡತಿ ಮಕ್ಕಳು ಮತ್ತು ಸಂಸಾರದ ಜವಾಬ್ದಾರಿಯನ್ನು ಸಂಪೂರ್ಣವಾಗಿ ಕಡೆಗಣಿಸಿದ್ದು, ಈತನ ಬೇಜವಾಬ್ದಾರಿಯಿಂದ ಮಗುವನ್ನು ಕಳೆದುಕೊಳ್ಳಬೇಕಾಗುತ್ತದೆ. ಪಂಡಿತ ಬರೆದ ಪುಸ್ತಕವನ್ನು ಓದಿಕೊಂಡು ಭಾಷಣ ಮಾಡಿದ ವ್ಯಕ್ತಿಗೆ ಹೆಚ್ಚು ಬೆಲೆ ಸಿಗುತ್ತದೆ. ಹೆಂಡತಿ ತನ್ನ ಮಗುವನ್ನು ಕಳೆದುಕೊಂಡಾಗ ಗಂಡನ ಸಂಶೋಧನೆ ಬಗ್ಗೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

'ಬಿತ್ತಿ ಬೆಳೆದವರು' ಕಥೆಯಲ್ಲಿ ಮರಿಯಮ್ಮ ಮತ್ತು ಅವಳ ಮಗಳು ಜುಲೇಕಳ ಹೃದಯ ವಿದ್ರಾವಕ ಬದುಕಿನ ಘಟನೆಯನ್ನು ಚಿತ್ರಿಸುತ್ತದೆ. ದಳ್ಳಾಳಿಯೊಬ್ಬನ ಮೂಲಕ ಪರಿಚಯವಿಲ್ಲದ ಹುಡುಗನಿಗೆ ತನ್ನ ಮಗಳನ್ನು ಮದುವೆ ಮಾಡಿ ಕೊಟ್ಟು ಕನಸನ್ನು ಕಾಣುತ್ತಿದ್ದಾಳೆ. ಆಕೆ ಕೆಲಸಕ್ಕೆ ಹೋಗುವ ದನಿಯ ಹೆಂಡತಿಯ ಹತ್ತು ಪವನಿನ ಚಿನ್ನದ ಸರವನ್ನು ಕದ್ದೊಯ್ದು ಮರಿಯಮ್ಮನ ಅಳಿಯ ತಾಯಿ ಮಗಳನ್ನು ಇಕ್ಕಟ್ಟಿಗೆ ಸಿಲುಕಿಸುತ್ತಾನೆ. ಈಗಾಗಲೇ ಮಗಳ ಮದುವೆಗೆಂದು ಮಾಡಿದ ಸಾಲ ಈಗ ಚಿನ್ನದ ಸರದ ಸಾಲ, ಈ ಸಾಲಗಳ ನಡುವೆ ತತ್ತರಿಸಿ ಹೋಗುತ್ತಾಳೆ ಅಲ್ಲದೆ ಜುಲೈಕಳ ಹೊಟ್ಟೆಯಲ್ಲಿ ಅವನ ವಂಶದ ಕುಡಿ ಬೆಳೆಯುತ್ತಿದ್ದು, ಚಿನ್ನದ ಸರ ಹಿಡಿದುಕೊಂಡು ಹೋದವನು ಮತ್ತೆ ಹಿಂತಿರುಗಿ ಬಂದಿರುವುದಿಲ್ಲ. ಪುರುಷನಿಂದ ಹೆಣ್ಣಿಗೆ ಒದಗುವ ಶೋಷಣೆಯನ್ನು ಈ ಕಥೆ ಅನಾವರಣಗೊಳಿಸುತ್ತದೆ.

'ದೋಣಿ ಸಾಗಲಿ' ಕಥೆಯು ಸಮಾಜದ ಪುರುಷರ ಸ್ವೇಚ್ಛಾಚಾರದ ಜೀವನಕ್ಕೆ ಆತಂಕ ಪಡುವ ಹೆಣ್ಮಕ್ಕಳ ಕಥೆಯನ್ನು ಚಿತ್ರಿಸುತ್ತದೆ. ಮಗಳ ಬಾಣಂತನಕ್ಕಾಗಿ ಊರಿನಿಂದ ಬಂದ ಗಿರಿಜಮ್ಮ ತನ್ನ ಗಂಡನ ಕಾಳಜಿಗಾಗಿ ಬೇರೆ ಹೆಣ್ಣನ್ನು ನೇಮಿಸಿ ಬಂದಿರುತ್ತಾಳೆ. ಆದರೆ ಮಗಳ ಮನೆಯ ಎದುರಿನ ಮನೆಯವನ ವ್ಯಭಿಚಾರವನ್ನು ನೋಡಿ ಗಂಡಸರೆಲ್ಲರು ಹೀಗೆ ಎಂದು ಸಂಶಯ ವ್ಯಕ್ತಪಡಿಸುತ್ತಾ ಊರಿಗೆ ಮರುಳುತ್ತಾಳೆ. ಗಂಡನೊಂದಿಗಿನ ಸೌಹಾರ್ದ ಬದುಕಿಗಾಗಿ ತುಡಿಯುವಂತಹ ಚಿತ್ರಣ ಈ ಕಥೆಯಲ್ಲಿದೆ.

ವೈದೇಹಿಯವರ "ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು" ಕತೆಯಲ್ಲಿ ಪುಟ್ಟಮ್ಮತ್ತೆಯ ಅಬ್ಬೆ ಮೂರು ಮಾವಿನ ಮಿಡಿಯಷ್ಟಿದ್ದವಳು. ಹಿತ್ತಲಲ್ಲಿ ತರಕಾರಿ ಬೆಳೆಸಿ ಅವರಿವರ ಗದ್ದೆಗಳಲ್ಲಿ ದುಡಿದು ಜೀವನ ಸಾಗಿಸಿದವಳು. ಅವರಿವರ ಬಟ್ಟೆ ಹಾಕಿ ಸೆರಗನ್ನು ಮೈ ತುಂಬಾ ಹೊದ್ದು ಮರ್ಯಾದೆಯಿಂದ ಬಾಳಿದವಳು. ವಿದ್ಯೆಯಿಲ್ಲದೆ ಹೆಣ್ಣಿನ ಬದುಕು ಕಷ್ಟ. ಗಂಡನ ಎದುರು ನಿಲ್ಲಲು ಹೆದರುತ್ತಿದ್ದಳು. ಈಕೆಯೊಂದಿಗೆ ವಿನಾ ಕಾರಣ ಮುಂಗೋಪಿ ಗಂಡ ಜಗಳ ತೆಗೆದು ಕೊಲ್ಲುತ್ತಾನೆ ಎಂಬುದು ಕತೆಯಲ್ಲಿ ಚಿತ್ರಿತವಾಗಿದೆ.

ಗಂಡ ಸ್ನಾನಕ್ಕೆ ನೀರು ಕಾದಿಲ್ಲವೆಂದು ಜಗಳ ಕರೆದ. ಆಕೆ ಕಣ್ಣಿನ ರೆಪ್ಪೆಗಳನ್ನು ಗಟ್ಟಿಯಾಗೊಮ್ಮೆ ತೆರೆದಳು. ಭಾರಕ್ಕೆ ಜಗ್ಗಿದ ಗೋಣನ್ನು ಒಮ್ಮೆ ಉದ್ದಕ್ಕೆ ನೇರ್ಮಿಸಿಕೊಂಡು ಒಳಗೆ ಹೋದಳು. ಹೆಂಡತಿಯಾದವಳು ಮಾತಾಡದೆ ಅಲಕ್ಷ್ಯದಿಂದೆಂಬಂತೆ ಒಳಹೋದದ್ದು ಡಬ್ಬಿ ಬಡಿದಂತೆ ವರಲುತ್ತಿದ್ದ ಗಂಡನೆಂಬುವವನಿಗೆ ಕೆಪ್ಪೆಯ ಮೇಲೆ ಬಾರಿಸಿದಂತಾಯಿತು. "ಚೋಟುದ್ದದ ಹೆಣ್ಣಿಗೆ ಈ ಪಾಟಿಯ ಸೊಕ್ಕೇ? ಇದು ಉಂಡದ್ದು ಹೆಚ್ಚಾದ್ದಲ್ಲವೇ"[೧೭] ಎಂದಾತ ಎನ್ನಲು ಹೆಂಡತಿಗೆ ಈ ಬಾರಿ ತಡೆಯಲಿಲ್ಲ. ಉರಿಬಿಸಿಲೋ, ಒಣಗಿದ ಗಂಟಲೋ ಉತ್ತರ ಕಕ್ಕಿಸಿತು. 'ನಾ ರಟ್ಟೆ ಜಪ್ಪಿಯೋ, ನಾ ಉಂಡೆ ನೀವೊಂದು ವಡೇನಾದರೂ ನನ್ನ ಕೈಮೇಲ್ ಹಾಕಿದ್ದಂತೇಳಿ ಇತ್ತಾ"[೧೮]. ಅಷ್ಟು ಹೇಳಿದವಳು ಒಂದು ಮುದ್ದೆ ಬೆಲ್ಲ ಬಾಯಿಗೆಸೆದುಕೊಂಡು ಗಂಟಲಿಗೆ ನೀರನ್ನು ಸುರಿದುಕೊಳ್ಳುತ್ತಿದ್ದಂತೆ ಗಂಡ ದರ್ಶನ ಬಂದವರಂತೆ ನಡುಗುತ್ತ ಒಳಗೆ ಬಂದ"[೧೯] ಎಂಬ ಮಾತುಗಳಲ್ಲಿ ಅಸಹಾಯಕತೆ, ಹಸಿವು, ದುಡಿತದ ಆಯಾಸ ಹಾಗೂ ಬಡತನಕ್ಕೆ ಕಾರಣವಾದ ಸೋಮಾರಿ ಗಂಡನ ಬಗೆಗಿನ ಸಿಟ್ಟು ಆಕೆಯಲ್ಲಿ ಮಡುಗಟ್ಟಿ ಪ್ರತಿರೋಧಕ್ಕೆ ಕಾರಣವಾಗಿದೆ.

ವೈದೇಹಿಯವರ "ಆರತಿ ತಟ್ಟೆ" ಕತೆಯಲ್ಲಿ ಸರಸ ಚಿಕ್ಕಿ ಮತ್ತು ನಿರೂಪಕಿಯ ಮೂಲಕ ಕಥೆಯ ಕೇಂದ್ರ ಪಾತ್ರವಾದ ಮೀನಾಕ್ಷತ್ತೆಯ ವಿಚಾರಗಳು ಅನಾವರಣಗೊಳ್ಳುತ್ತವೆ. ತನ್ನ ಮನೆಯಲ್ಲಿ ಗಂಡ ಅಪ್ಪಣ್ಣಯ್ಯನೊಟ್ಟಿಗೆ ಮಲಗಲು ಗುಲಾಬಿ ಬಂದಾಗ ಹಾಲನ್ನು ಕಳುಹಿಸಿಕೊಡುತ್ತಿದ್ದಳು. ಆದರೆ ಮಲಗುವ ಕೋಣೆಯಲ್ಲಿ ಇರುವೆಗಳ ಹಾವಳಿ ಜಾಸ್ತಿಯಾಗಿ ನಿದ್ದೆಗೆ ಸಂಚಕಾರವಾಗುತ್ತದೆಂದು ತಿಳಿದು ಗುಲಾಬಿ ಮನೆಗೆ ಬರುವುದನ್ನು ನಿಲ್ಲಿಸುವಂತೆ ಮಾಡುವಲ್ಲಿ ಮೀನಾಕ್ಷತ್ತೆ ಯಶಸ್ವಿಯಾಗುತ್ತಾಳೆ. ಗಂಡನ ದಾಂಪತ್ಯ ಸುಖದಿಂದ ವಂಚಿತಳಾಗಿದ್ದು ಮತ್ರವಲ್ಲದೇ ತನ್ನ ಎದುರಿಗೆ ಮತ್ತೊಬ್ಬ ಹೆಣ್ಣು ತನ್ನ ಗಂಡನಿಂದ ಆ ಸುಖವನ್ನು ಪಡೆಯುವುದನ್ನು ಭಾರತೀಯ ಸಮಾಜಲ್ಲಿ ಯಾವ ಹೆಣ್ಣು ಸಹಿಸಲಾರಳು. ಮೀನಾಕ್ಷತ್ತೆಯು ಇರುವೆಗಳನ್ನು ಬಿಡುವುದರ ಮೂಲಕ ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

'ಪದವೀಧರ' ಕಥೆಯಲ್ಲಿ ಸೋಮು ತನ್ನ ವಿದ್ಯಾರ್ಥಿ ಜೀವನವನ್ನು ಬೇಕಾ ಬಿಟ್ಟಿ ಕಳೆದು ಪದವಿ ಪಡೆಯುತ್ತಾನೆ. ಆತನ ಹೆಂಡತಿ ಆತನ ಪದವಿಯನ್ನು ಅಂಕ ಪಟ್ಟಿಯಲ್ಲಿ ನೋಡಿ ಸಂತೋಷ ಪಡುತ್ತಾಳೆ. ಇಂತಹ ವಿದ್ಯಾವಂತನನ್ನು ಪಡೆದ ನಾನು ಅದೃಷ್ಟವಂತೆ ಎಂದು ಭಾವಿಸುತ್ತಾಳೆ. ಇಷ್ಟರವರೆಗೆ ಯಾರಿಂದಲೂ ಹೊಗಳಿಸಿಕೊಳ್ಳದ ಸೋಮುವಿಗೆ ಹೆಂಡತಿ ಹೊಗಳಿದಾಗ ತಾನು ಮಾಡಿದ ತಪ್ಪಿನ ಅರಿವಾದರೂ ಹೆಂಡತಿಯ ನಂಬಿಕೆಗೆ ತುಂಬಾ ಸಂತೋಷ ಪಡುತ್ತಾನೆ.

ಹೆರಿಗೆಗಾಗಿ ತವರು ಮನೆ ಸೇರಿದ ಹೆಂಡತಿಗೆ ಸೋಮು ಪತ್ರ ಬರೆಯುತ್ತಾನೆ. ಪತ್ರದಲ್ಲಿದ್ದ ತಪ್ಪುಗಳನ್ನು ನೋಡಿದ ಆಕೆ ತಮಾಷೆಗಾಗಿ ಬರೆದ ತಪ್ಪು ಎಂದು ಭಾವಿಸುತ್ತಾಳೆ. 'ಏನು ತಮಾಷೆ! ಎಷ್ಟು ಚೆನ್ನಾಗಿ ಬರೆದಿದ್ದೀರಿ ! ನನಗೆ ಪ್ರಯತ್ನಿಸಿದರು ಅಷ್ಟು ತಪ್ಪು ತಪ್ಪಾಗಿ ಅಸಂಬದ್ಧವಾಗಿ ಬರೆಯಲು ಅಸಾಧ್ಯ ಇದೆಲ್ಲ ನನ್ನ ಅಗಲಿಕೆಯ ನೋವು ಮಾಡಿದ ಕೆಲಸವೆಂತ ನಂಬಲೇ ? ಇಲ್ಲವಾದರೆ ಅಷ್ಟು ತಪ್ಪುಗಳನ್ನು ನಿಮ್ಮಂಥವರು ಮಾಡುವುದಾದರೂ ಹೇಗೆ ? . . .[೨೦] ಎಂಬ ಮಾತುಗಳು ಆಕೆಗೆ ಗಂಡನಿಗೆ ಇರುವ ವಿಶ್ವಾಸವನ್ನು ತೋರಿಸುತ್ತದೆ.

'ಕಾಣೆಯಾದವರ ಕಥೆ'ಯಲ್ಲಿ ಗಂಡನ ಬಗೆಗೆ ಕುಸುಮಾಳಿಗಿರುವ ಅತೃಪ್ತಿ ಭಾವನೆಯೇ ಅವಳನ್ನು ಉನ್ಮಾದದ ಕಡೆಗೆ ಕೊಂಡೊಯ್ಯುತ್ತದೆ. ತನ್ನ ಜತೆಗಿದ್ದ ಗಂಡನನ್ನು ತನ್ನ ಗಂಡನೆಂದು ಒಪ್ಪಿಕೊಳ್ಳದ ಕುಸುಮ ಅವನನ್ನು ಪರ ಪುರುಷನೆಂದು ಭ್ರಮಿಸಿಕೊಳ್ಳುತ್ತಾಳೆ. ಕಾಣೆಯಾಗಿರುವ ಪತಿ ಮನೆಗೆ ಬಂದಾಗ ಅವಳು ಲತಾಳಿಗೆ ಹೇಳುವ ಮಾತು "ನಾನು ಕೇಳಲೇ ಇಲ್ಲ, ಮತ್ತೆ ಅಷ್ಟಕ್ಕೆ ಸಿಟ್ಟು

ಬಂದು ಎದ್ದು ಹೊರಟರೂ ಹೊರಟರೇ"[೨೧] ಎಂಬ ಮಾತಿನಲ್ಲಿ ಪ್ರತಿರೋಧದ ಅಂಶ ಕಾಣುತ್ತದೆ. 'ಕ್ರೌಂಚ ಪಕ್ಷಿಗಳು ಕಥೆಯ ದೇಶದ ತುರ್ತು ಪರಿಸ್ಥಿತಿಯ ಕರಾಳ ಮುಖವನ್ನು ಚಿತ್ರಿಸುತ್ತದೆ. ಇಲ್ಲಿ ಗಂಡ ಹೆಂಡತಿಯರ ನಡುವಿನ ಅಗಲುವಿಕೆ ಮುಖ್ಯ ಅಂಶವಾಗಿದೆ.

ಅಶ್ವಾರ್ಣ ಭಟ್ಟ ಹಾಗೂ ಲಕ್ಷ್ಮಮ್ಮನ ಅಗಲುವಿಕೆ ಕ್ರೌಂಚ ಪಕ್ಷಿಗಳ ಅಗಲುವಿಕೆಯ ಹಾಗೆ ಕಾಣಿಸುತ್ತದೆ. ಪುರಾಣದೊಂದಿಗೆ ತಳುಕು ಹಾಕಿಕೊಂಡ ಈ ಕ್ರೌಂಚ ಪಕ್ಷಿಗಳ ಘಟನೆ ಜನಸಾಮಾನ್ಯ ಜೀವನದಲ್ಲಿ ಎಷ್ಟರ ಮಟ್ಟಿಗೆ ನಡೆಯುತ್ತದೆ ಎಂಬುದು ವ್ಯಕ್ತವಾಗಿದೆ. ನಿತ್ಯ ಕಾಡುವ ಹೊಟ್ಟೆ ನೋವಿನಿಂದ ಬಳಲುತ್ತಿದ್ದ ಅಡುಗೆ ವೃತ್ತಿಯ ಆಸ್ಥಾನ ಭಟ್ಟರು ಕೊನೆಗೆ ಆತ್ಮಹತ್ಯೆಗೆ ಒಳಗಾಗುತ್ತಾರೆ. ದೇಶ ವಿಭಜನೆಯ ಸಂದರ್ಭದಲ್ಲಿ ಗಲಭೆ ಕೋರರಿಂದ ಕದ್ದೊಯ್ಯಲ್ಪಟ್ಟ ಮಡದಿ ಲಕ್ಷ್ಮಮ್ಮನವರನ್ನು ಗುರುತಿಸಿಯೂ ಮರಳಿ ಸ್ವೀಕರಿಸದ ಅಪರಾಧಿತನ ಕಾಣಿಸಿಕೊಳ್ಳುತ್ತದೆ.

'ಎಲ್ಲೋ ಇದ್ದ ಹೆಂಡತಿಯನ್ನು ಮತ್ತೆ ಕರೆಸಿಕೊಳ್ಳುವುದು, ಅಲ್ಲ ಕಷ್ಟವೇ, ಭಟ್ಟರ ಅವಸ್ಥೇ ಬಾಯಿಯಲ್ಲಿ ಹೇಳಿದ್ದು ಸರಳವಲ್ಲ.[೨೨] ಎಂಬ ಹೇಳಿಕೆ ಹಾಗೂ ಅದೇನು ಆಯುಷ್ಯವೆಲ್ಲ ಎಲ್ಲೊಲ್ಲೋ ಬಳಿದು ಕಾಯಿಲೆ ಹತ್ತಿಸಿಕೊಂಡು ಬರುವ ಯಜಮಾನರ ಜೊತೆ ಸಂಸಾರ ಮಾಡುವ ಹೆಂಗಸರು ಎಷ್ಟು ಬೇಕು[೨೩] ಎಂಬ ಹೇಳಿಕೆಗಳ ಮುಖಾಮುಖಿ ಕಾಣಿಸುತ್ತದೆ.

'ಅಕ್ಕು' ಕಥೆಯಲ್ಲಿ ಪಿತೃ ಪ್ರಧಾನ ವ್ಯವಸ್ಥೆಯ ದಬ್ಬಾಳಿಕೆಯ ಅಡಿ ಸಿಲುಕಿ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಹೆಣ್ಣಿನ ಚಿತ್ರಣವಿದೆ. ಅಕ್ಕು ಗಂಡನಿಂದ ಯಾವ ಸುಖ ಕಾಣದೆ ಇರುವ ಸ್ವಾಭಿಮಾನಿ ಹೆಣ್ಣು. "ನಿನ್ಹಾಂಗೆ ನಾನೇನ್ ಗಂಡ ಸತ್ತ ಮುಂಡೆ ಅಲ್ಲ, ನಾನ್ ಗಂಡ ಬಾಸಾಯಿ ತಿಂಬುಕೆ ದೇಶಾಂತರ ಹೋದ ಅಂತೇಳಿ ನಆ ಪಾಪ್ವ! ಮೈಮೇಲೆ ಬಂದ್ ಅಡ್ಡದ್ಮನೆ ತಿಮ್ಮಪ್ಪಯ್ಯನ್ ಹೊಂಡಕ್ಕ್ ದೂಡಿ ಹಾಕ್ದವ್ಳ್ ನಾನ್"[೨೪] ಎಂಬ ಅಕ್ಕುವಿನ ಮಾತಿನಲ್ಲಿ ಪ್ರತಿರೋಧವನ್ನು ಕಾಣಬಹುದು.

'ಅಮ್ಮಚ್ಚಿಯೆಂಬ ನೆನಪು ಕಥೆಯಲ್ಲಿ ಅಮ್ಮಚ್ಚಿ ಪುರುಷ ದಬ್ಬಾಳಿಕೆಯ ಬಗ್ಗೆ ಪ್ರತಿರೋಧವನ್ನು ವ್ಯಕ್ತಪಡಿಸಿದ ಹೆಣ್ಣು. ತನಗೆ ಸರಿ ಎನಿಸಿದ ರೀತಿಯಲ್ಲಿ ಬದುಕುವ ಸ್ವಾತಂತ್ರ್ಯಕ್ಕಾಗಿ ಹಾತೊರೆದವಳು. ಆಕೆ ವೆಂಕಪ್ಪಯ್ಯನ ನಿಲುವಿನ ಬಗ್ಗೆ ಕಿಡಿ ಕಾರುತ್ತಾ ಆಧುನಿಕತೆ ಕಡೆಗೆ ತುಡಿಯುವವಳು. ಆಕೆಯ ಉಡುಗೆಯನ್ನು ನಿರ್ಧರಿಸುವ ವೆಂಕಪ್ಪಯ್ಯನಿಂದ ಬಿಡುಗಡೆ ಪಡೆಯುತ್ತಾಳೆ. ಆಕೆ ಗೆಳತಿಯೊಂದಿಗೆ ಹೇಳುವ 'ಬಾ ನಾವು ಮಡಲು ಹೆಣೆವ'[೨೫] ಎಂಬ ಮಾತಿನಲ್ಲಿ ಪ್ರತಿರೋಧ ಕಾಣಿಸುತ್ತದೆ. 'ಅಮ್ಮಚ್ಚಿ

ಅವುಡುಗಚ್ಚಿ ಮಡಲಿನಂಚನ್ನು ತಿಪ್ಪುತ್ತಿದ್ದಳು'[೨೬] ಎನ್ನುವುದು ವೆಂಕಪ್ಪಯ್ಯನ ಬಗ್ಗೆ ಆಕೆ ವ್ಯಕ್ತಪಡಿಸುವ ಪ್ರತಿರೋಧವಾಗಿದೆ.

ಪ್ರತಿರೋಧ ಎನ್ನುವುದು ವಿವೇಕದ ತೀರ್ಮಾನವಾದಾಗ ಮಾತ್ರ ಅದಕ್ಕೊಂದು ಅರ್ಥ, ಘನತೆ ಎನ್ನುವ ನಿಲುವು ಲೇಖಕಿಯದಾಗಿದ್ದು ಅವರ ಬಹುಪಾಲು ಕತೆಗಳು ಅದಕ್ಕೆ ಸಾಕ್ಷಿ ನುಡಿಯುತ್ತವೆ. ಪ್ರತಿರೋಧ ತೋರುವಾಗಲೂ ಅದರ ದೂರಗಾಮಿ ಪರಿಣಾಮ ಯಾರ ಮೇಲೆ ಎಂಬ ಪರಿಜ್ಞಾನವಿದ್ದಲ್ಲಿ ಅದು ಹೇಗೆ ಹೊಂದಾಣಿಕೆಗೆ ಎಡೆಮಾಡಿ ಕೊಡುತ್ತದೆ ಎಂಬ ಸಂದೇಶವನ್ನು ಗಂಗಾಪಾದೇಕಲ್‌ರವರ 'ಒಂದೇ ಒಂದು ಅವಕಾಶ' ಕತೆಯಲ್ಲಿ ನೋಡಬಹುದು. ಮನೆಕೆಲಸದವಳೊಂದಿಗೆ ತನ್ನ ಪತಿಯನ್ನು ನೋಡಬಾರದ ಸ್ಥಿತಿಯಲ್ಲಿ ಆಕಸ್ಮಿಕವಾಗಿ ಕಂಡ ಹಿನ್ನೆಲೆಯಲ್ಲಿ ದಾಂಪತ್ಯ ಜೀವನದಲ್ಲಿ ನಿಷ್ಠೆ ತಪ್ಪಿದ ಪತಿಯಿಂದ ಬೇರ್ಪಡುವುದಲ್ಲದೆ ಅನ್ಯ ಪರಿಹಾರಗಳಿಲ್ಲ ಎನ್ನುವ ಕುದಿ ಇದ್ದಾಗಲೂ ಕರುಳಕುಡಿ ಅನಿಲನ ಉತ್ತರಿಸಲಾಗದ ಪ್ರಶ್ನೆಗಳು, ಅವನ ಬದುಕು, ಭವಿಷ್ಯದ ಕುರಿತಾದ ಕಾಳಜಿಗಳು ಕಥಾನಾಯಕಿಯನ್ನು ಪತಿಗೆ ಒಂದು ಅವಕಾಶವನ್ನು ಕೊಡುವ ಅನಿವಾರ್ಯತೆಗೆ ತಂದು ನಿಲ್ಲಿಸುತ್ತದೆ.

ಗಂಗಾಪಾದೇಕಲ್‌ರವರ "ಸ್ಫೋಟ" ಕತೆಯಲ್ಲಿ ಸೋಮಾರಿ, ಬೇಜವಾಬ್ದಾರ ಹಾಗೂ ಖದೀಮ ಗಂಡನ ವಿರುದ್ಧವಾಗಿ ಲಚ್ಚಿಯ ಪ್ರತಿಭಟನೆ ಸ್ಫೋಟಗೊಳ್ಳುವುದು ಕತೆಯ ಉತ್ತುಂಗ. ಲಚ್ಚಿಯ ದುಡಿಮೆ, ತನ್ನ ಕರುಳಕುಡಿಗಳ ಮೇಲಿನ ಆಕೆಯ ಪ್ರೀತಿ ಒಂಡೆದೆಯಾದರೆ ಕುಡಿತ ಹಾಗೂ ಸೋಮಾರಿತನಗಳ ದಾಸನಾಗಿದ್ದ ತುಕ್ರನ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯ ಇನ್ನೊಂದೆಡೆ.

ಬಸುರಿಯಾಗಿದ್ದ ಮಗಳ ಬಾಣಂತನಕ್ಕೆಂದು ತನ್ನ ಬಿಡುವಿಲ್ಲದ ದುಡಿಮೆಯಿಂದ ಆಕೆ ಕೂಡಿಟ್ಟ ಹಣವನ್ನು ಎಗರಿಸಿ ಬಿಡುವ ನೀಚ ತಂದೆ ಆತ. ಗಾಯದ ಮೇಲೆ ಬರೆ ಎಂಬಂತೆ ಮಗ ಸಿದ್ಧನಿಗೆ ಮರದಿಂದ ಬಿದ್ದು ಪೆಟ್ಟಾದರೂ ಅದರ ಬಗೆಗೆ ಕಾಳಜಿಯಿರದೆ ಎಗರಿಸಿದ ಹಣವನ್ನು ಹೆಂಡದಂಗಡಿಗೆ ಸುರಿಯುವ ಆತನ ಧೂರ್ತ ಬುದ್ಧಿಗೆ ಲಚ್ಚಿ ರೋಸಿಹೋಗಿ ಅಸಹನೆ ಒಮ್ಮೆಲೇ ಸ್ಫೋಟಗೊಳ್ಳುತ್ತದೆ. ಹಣವನ್ನು ಹಿಂದೆ ಕಸಿದುಕೊಂಡು ಹಿಡಿಸೂಡಿಯ ಏಟಿನೊಂದಿಗೆ ತನ್ನ ಬಾಳಿನಿಂದಲೇ ಆತನಿಗೆ ವಿದಾಯ ಹೇಳುವಲ್ಲಿ ಹಳೆಯ ಲಚ್ಚಿ ಸತ್ತು ಹೊಸ ಲಚ್ಚಿ ಹುಟ್ಟಿಯಾಗಿತ್ತು ಎಂದು ಕತೆ ವರ್ಣಿಸುತ್ತದೆ.

ಕತೆಯಲ್ಲಿ ನಡೆಯುವ ಘಟನೆಗಳ ಸರಣಿಯನ್ನು ಪರಿಶೀಲಿಸಿದರೆ ಗಂಡನೆನಿಸಿಕೊಂಡವನು ದಬ್ಬಾಳಿಕೆ ನಡೆಸುವ ಸಂದರ್ಭದಲ್ಲಿ ಲಚ್ಚಿಯ ಸಿಟ್ಟು ಅತ್ಯಂತ ಸಹಜವಾಗಿ ಪರಿಸರದಲ್ಲಿ

ಸ್ಫೋಟಗೊಳ್ಳುತ್ತದೆ. ಈ ಪ್ರತಿರೋಧ ಕೇವಲ ವೈಯುಕ್ತಿಕ ನೆಲೆಯಿಂದ ಮೂಡಿದ್ದಲ್ಲ. ಆಕೆಯ ತಾಯ್ತನದ ತುಡಿತ, ಮನೆ, ಕುಟುಂಬ ವ್ಯವಸ್ಥೆಯ ಕುರಿತು ಆಕೆಗಿದ್ದ ನಂಬಿಕೆಯ ಮೇಲೆ ನಡೆದ ದೌರ್ಜನ್ಯ ಇವುಗಳಿಂದ ಅತ್ಯಂತ ಸಹಜವಾಗಿ ಹೊಮ್ಮಿದ್ದು. ಪುರುಷ ಪ್ರಧಾನವಾದ ವ್ಯವಸ್ಥೆಯಲ್ಲಿ ಪುರುಷನಿಂದಲೇ ಅದರ ಪಾವಿತ್ರ್ಯಕ್ಕೆ, ಸ್ಥಿರತೆಗೆ ಒದಗುವ ಆತಂಕಗಳು, ಹೆಣ್ಣಿನ ದೃಢತೆ ಮತ್ತು ಶಕ್ತಿ ಅದನ್ನು ಎದುರಿಸುವ ಬಗೆ ಇವುಗಳನ್ನು ಲೇಖಕಿ ಚಿತ್ರಿಸಿದ ರೀತಿ ಮನೋಜ್ಞವಾಗಿದೆ.

'ಉತ್ತರ ಕಾಣದ ಪ್ರಶ್ನೆಗಳು' ಕಥೆಯಲ್ಲಿ ಸಮಾಜದಲ್ಲಿ ನಡೆಯುವ ಮುಷ್ಕರ, ಬಂದ್‌ಗಳು ಜನಸಾಮಾನ್ಯರ ಬದುಕಿಗೆ ಯಾವ ರೀತಿ ತೊಂದರೆಯನ್ನು ಉಂಟು ಮಾಡುತ್ತದೆ ಎಂಬುದರ ಚಿತ್ರಣವಿದೆ. ಏನೂ ತಪ್ಪು ಮಾಡದೇ ಇರುವ ಸುಮ ತನ್ನ ಗಂಡನನ್ನು ಕಳೆದುಕೊಳ್ಳುವುದು, ವಾಂತಿ ಬೇದಿಯಿಂದ ನರಳಿದ ಸುಜಾತ ಸರಿಯಾದ ಸಮಯಕ್ಕೆ ಚಿಕಿತ್ಸೆ ಸಿಗದೇ ಸಾವನಪ್ಪುವುದು ಎಲ್ಲವೂ ಮುಷ್ಕರದ ಕಾರಣದಿಂದ ಎಂಬುದು ಸ್ಪಷ್ಟವಾಗುತ್ತದೆ. ವಸುಧಾ ಹೇಳುವ 'ಆಳುವ ಪಕ್ಷಕ್ಕೂ ವಿರೋಧ ಪಕ್ಷಕ್ಕೂ ನಡೆವ ಈ ತಿಕ್ಕಾಟದ ಯಜ್ಞಕ್ಕೆ ಎಷ್ಟು ನಿರಾಪರಾಧಿಗಳು ಬಲಿಯಾಗಬೇಕೋ'[೨೭] ಎಂಬ ಮಾತು ಸಮಾಜದ ಅವ್ಯಸ್ಥೆಯ ಕುರಿತು ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ.

'ಅರಿವು' ಕಥೆಯಲ್ಲಿ ಶ್ರೀಧರ ಮತ್ತು ಸುಜಾತರ ದಾಂಪತ್ಯದ ಬಿಕ್ಕಟ್ಟನ್ನು ಎತ್ತಿ ಹಿಡಿಯುವ ಕಥೆಯಾಗಿದೆ. ವೈದ್ಯಕೀಯ ಶಿಕ್ಷಣ ಪಡೆದ ಸುಜಾತ ಕೇವಲ ಸಾಮಾನ್ಯ ಪದವಿ ಪಡೆದ ಶ್ರೀಧರ ಇವರ ನಡುವೆ ವೃತ್ತಿ ಹೊಂದಾಣಿಕೆ ಇದ್ದರೂ ದಾಂಪತ್ಯದ ಹೊಂದಾಣಿಕೆ ಇಲ್ಲದಿದ್ದಾಗ ಬದುಕು ತನ್ನ ಅರ್ಥವನ್ನು ಕಳೆದುಕೊಳ್ಳುತ್ತದೆ ಎಂಬ ಸತ್ಯವನ್ನು ತಿಳಿಸಿಕೊಡುತ್ತದೆ. ಪರಸ್ಪರ ಪ್ರೀತಿ, ತಿಳುವಳಿಕೆ, ವಿಶಾಲ ಮನಸ್ಸಿನ ಭಾವನೆಯ ಮೇಲೆ ದಾಂಪತ್ಯ ನಿಲ್ಲುತ್ತದೆ ಹೊರತು ಹಣ, ಉದ್ಯೋಗ ಮುಖ್ಯವಾಗುವುದಿಲ್ಲ ಎಂಬುದನ್ನು ಈ ಕಥೆ ಸ್ಪಷ್ಟಪಡಿಸುತ್ತದೆ.

'ಕೋಶದೊಳಗೊಂದು ಬದುಕು" ಕಥೆಯ ಮಂಗಳ ಪಾರ್ಶ್ವವಾಯು ಪೀಡಿತನಾದ ಗಂಡನ ಸೇವೆ ಮಾಡುತ್ತಾ ಜೀವನವನ್ನು ನಡೆಸುತ್ತಾಳೆ. ಸಂಶಯ ಪಿಶಾಚಿಯಾದ ತನ್ನ ಗಂಡನ ಮಾತುಗಳನ್ನು ಕೇಳುತ್ತಿರುವಾಗಲೆಲ್ಲಾ ತಾನು ಯಾಕಾಗಿಯಾದರೂ ಬದುಕಿದ್ದೇನು ಎಂಬ ಭಾವನೆ ಅವಳನ್ನು ಕಾಡುತ್ತದೆ. ಆಕೆಯ ಸಹಾಯಕ್ಕೆ ಬಂದ ಹದಿನಾಲ್ಕು ವರ್ಷದ ಹುಡುಗ ಕಿಟ್ಟುವಿನೊಂದಿಗೆ ಸಂಬಂಧವನ್ನು ಕಲ್ಪಿಸಿ ಗಂಡ ಹಿಂಸೆಯನ್ನು ನೀಡುತ್ತಿದ್ದ. ಆದರೆ ಆಕೆ ತನ್ನ ದೈಹಿಕ ಸುಖ ಆಸೆಗಳನ್ನೆಲ್ಲಾ ಅದುಮಿಟ್ಟು ಮನಸ್ಸಿನಲ್ಲಿ

ಗಂಡನ ಬಗ್ಗೆ ಅಸಮಾಧಾನ ಇದ್ದರೂ ಹೊರಗೆ ವ್ಯಕ್ತಪಡಿಸಲಾರದೇ ಚಡಪಡಿಸುತ್ತಾಳೆ. ಸಮಾಜದ ವ್ಯವಸ್ಥೆಯನ್ನು ಪ್ರತಿರೋಧಿಸುವ ಮನೋಭಾವವಿದ್ದರೂ ಸಹಿಸಿಕೊಂಡು ಹೋಗುತ್ತಾಳೆ. 'ಹೆಣ್ಣಿನ ಬದುಕು ಇಷ್ಟೇನಾ' ಎಂದು ಮನಸ್ಸಿನಲ್ಲಿಯೇ ಅಂದು ಕೊಳ್ಳುತ್ತಾ ಪರಿಸ್ಥಿತಿಯನ್ನು ಒಪ್ಪಿಕೊಂಡು ಬದುಕುತ್ತಾಳೆ.

'ಇರುಳ ಹಿಂದಿನ ಬೆಳಗು' ಕಥೆಯಲ್ಲಿ ಮನುಷ್ಯನ ಅತಿಯಾದ ಆಸೆ ಜೀವನದ ನೆಮ್ಮದಿಯನ್ನು ಹಾಳು ಮಾಡುತ್ತದೆ ಎಂಬುದರ ಚಿತ್ರಣವಿದೆ. ಸರಕಾರಿ ಉದ್ಯೋಗಿಯಾಗಿದ್ದ ಶ್ರೀಧರ್ ಹೆಂಡತಿಯ ಅಪೇಕ್ಷೆಯಿಂದ ಲಂಚ ಸ್ವೀಕರಿಸಿ ಕೆಲಸ ಕಳೆದುಕೊಳ್ಳುವ ಸ್ಥಿತಿಗೆ ಬರುತ್ತಾನೆ. ಕೊನೆಗೆ ದಾರಿ ಕಾಣದೆ ತಾನೇ ಸಮಾಧಾನ ತಂದುಕೊಳ್ಳುತ್ತಾನೆ. ತಮ್ಮ ಹಿರಿಯರು ಬಾಳಿ ಬದುಕಿದ ರೀತಿಯಲ್ಲಿ ತಾವು ಬದುಕಿಲ್ಲ ಎಂಬ ನೋವಿನೊಂದಿಗೆ ನಿರ್ಮಲಳಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಸಂಸಾರವನ್ನು ಸರಿದೂಗಿಸಿಕೊಂಡು ಹೋಗಬೇಕಾದಲ್ಲಿ ತಮ್ಮ ಆಸೆ ಆಕಾಂಕ್ಷೆಗಳಿಗೆ ಸ್ವಲ್ಪಮಟ್ಟಿಗೆ ಕಡಿವಾಣ ಹಾಕಿ ಬದುಕುವ ಅಗತ್ಯ ಇದೆ ಎಂಬುದನ್ನು ಈ ಕಥೆ ಧ್ವನಿಸುತ್ತದೆ.

'ಹೋಗೊಂದು ಲೋಕವುಂಟು' ಕಥೆಯ ಮಾಧವ ಹಾಗೂ ಪದ್ಮರ ನಡುವೆ ಹೊಂದಾಣಿಕೆಯ ಕೊರತೆ ಇದ್ದು ಅಭಿರುಚಿಯ ಅಂತರ ಕೂಡ ಇರುತ್ತದೆ. ಮಾಧವ ಯಾವಾಗಲು ತನ್ನ ತೋಟದಲ್ಲಿ ಕೃಷಿ ಮಾಡಿಕೊಂಡು ಸಮಯವನ್ನು ಕಳೆಯುತ್ತಾ ಇದ್ದರೆ ಪದ್ಮ ಅದನ್ನು ತಿರಸ್ಕರಿಸಿ ಪೇಟೆಯ ಬದುಕನ್ನು ಆರಾಮದ ಉದ್ಯೋಗವನ್ನು ಬಯಸುವವರು. ಭಾವನೆಗಳಲ್ಲಿ ಬದುಕುವ ಪದ್ಮ, ವಾಸ್ತವತೆಯ ಅರಿವಿಲ್ಲದ ಮಾಧವ ಇವರಿಬ್ಬರ ನಡುವೆ ಮಾತಿನ ಹೊಯ್ದಾಟಗಳು ನಡೆದು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳುವಲ್ಲಿ ಸೋಲುತ್ತಾರೆ ಎನ್ನುವುದನ್ನು ಈ ಕಥೆ ಅನಾವರಣ ಮಾಡುತ್ತದೆ.

ಅನುಪಮಾ ಪ್ರಸಾದ್‌ರವರ "ಕಾಳಿಂದಿಮಡು" ಕಥೆಯು ಘಟನಾವಳಿಯು ಕರಾವಳಿಯ ಒಂದು ಎಂಡೋಸಲ್ಫಾನ್ ಪೀಡಿತ ಹಳ್ಳಿ ಮತ್ತು ವಾರಣಾಸಿ ಕ್ಷೇತ್ರಗಳಲ್ಲಿ ಸಂಭವಿಸುತ್ತದೆ. ಜಯಂತ ಮತ್ತು ಹರಿಣಾಕ್ಷಿಯವರ ಚೊಕ್ಕ ಸಂಸಾರದಲ್ಲಿ ಮಗಳು ಹುಟ್ಟಿ ಅವಳ ಅಂಗವೈಕಲ್ಯ ಬೆಳಕಿಗೆ ಬಂದಾಗ ಸಂಸಾರಕ್ಕೆ ಮೊದಲ ಪೆಟ್ಟು ಬಿದ್ದಿತು. ಶಾಲೆಯಲ್ಲಿ ಪಿ.ಟಿ. ಮಾಸ್ಟರ್ ಆಗಿದ್ದ ಜಯಂತ ಒಂದು ದಿನ ಶಾಲೆಯಲ್ಲಿ ಕೊಕ್ಕೋ ಆಡಿಸುತ್ತಿದ್ದಾಗ ಊದುತ್ತಿದ್ದ ಬಿಗಿಲ್ ಕೆಳಗೆ ಬಿದ್ದಿದ್ದನ್ನು ಹೆಕ್ಕಲು ಬಗ್ಗಿದವನಿಗೆ ಮತ್ತೆ ಏಳಲಾಗದೆ ಕುಸಿದು ಬೀಳುತ್ತಾನೆ. ನಂತರ ಗಾಲಿ ಕುರ್ಚಿಯಲ್ಲಿ ಓಡಾಡುವಂತಾಗುತ್ತದೆ. ಜಯಂತನಿಗೆ ಪಕ್ಕೆಲುಬುಗಳಲ್ಲಿ ನೋವು ಕಾಣಿಸಿಕೊಂಡಾಗ, ಹರಿಣಾಕ್ಷಿ ಎಣ್ಣೆ ತಿಕ್ಕುತ್ತಿದ್ದಳು. ಯಾರದೋ ತಪ್ಪಿನಿಂದ

ಯಾರಿಗೋ ಶಿಕ್ಷೆ ವಿಧಿಸಿತಲ್ಲ ಈ ಬದುಕು! ಹುಚ್ಚು ಹೊಳೆ ಮೈಯಲ್ಲೆಲ್ಲ ಹರಿದು ಉದ್ರೇಕದ ಪ್ರವಾಹ. ಆದರೆ ಅಸಹಾಯಕ ಶರೀರ. ಜಯಂತನ ಉಕ್ಕಿದ ಕೋಪಕ್ಕೆ ಬಲಿಯಾದವಳು ಹರಿಣಾಕ್ಷಿ. "ನೋವು ಅಂತ ಸಾಯ್ತಾ ಇದ್ರೆ ಹರಕೆ ಸಂದಾಯಕ್ಕೆ ಎಣ್ಣೆ ಹಚ್ಚಿದ ನಾಟಕ ಮಾಡುವುದಾ? ಮನೆಯಲ್ಲೇ ಬಿದ್ದಿರುವವನು ಅಂತ ಸಸಾರ ಅಲ್ವಾ ನಿಂಗೆ? ದುಡಿದು ತರುವವಳು ಅಂತ ಅಹಂಕಾರವಾ ನಿಂಗೆ? ನೆಟ್ಟಗೆ ಸೆರಗು ಹೊದೆದು ಓಡಾಡುವುದನ್ನು ಕಲಿ ಮೊದಲು"[೨೮] ಎಂದು ಅಬ್ಬರಿಸುತ್ತಾನೆ. ತನ್ನ ನೋವನ್ನೆಲ್ಲಾ ನುಂಗಿಕೊಂಡು ದುಡಿದು ಮಕ್ಕಳು ಮತ್ತು ಗಂಡನ ಚಾಕರಿ ಮಾಡುತ್ತಿದ್ದರೂ, ಗಂಡನಿಗೆ ಆಕೆಯ ಮೇಲೆ ಮಮಕಾರ ಇಲ್ಲ. ಅವಳು ಮಾಡುವ ಆರೈಕೆಯನ್ನು ಕಾಮಾಪೇಕ್ಷೆ ಎಂದು ತಪ್ಪಾಗಿ ಅರ್ಥೈಸಿ ಕೂಗಾಡುತ್ತಾನೆ.

ಜಯಂತನಿಗೆ ಕಾಶಿಯಾತ್ರೆ ಸಂದರ್ಭ ಹೇಳಿದ ಮಾತು "ಮಗಾ, ನಮ್ಮ ಭೂಮಿ ನಮ್ಮ ನೀರು ಎಲ್ಲವನ್ನು ಕಾಳಿಂದಿ ಮಾಡುಮಾಡ್ತಾರೆ. ಹೆಲಿಕಾಪ್ಟರ್ ನೋಡಲು ಗೇರು ಗುರುಗುಡ್ಡೆಯ ಬುಡಕ್ಕೆ ಹೊರಟಾಗ ಅಜ್ಜ ಹೇಳುತ್ತಿದ್ದ ಮಾತು ನೆನಪಾಗುತ್ತದೆ".[೨೯] ಇಲ್ಲಿ ಜಯಂತನು ಲೈಂಗಿಕ ಅಸಮರ್ಥದಿಂದ ಹುಟ್ಟುವ ಈರ್ಷೆ ಗಂಡಿನ ಸ್ವಭಾವದಲ್ಲೆ ಅಂತರ್ಗತವಾಗಿರುವಂತಹದ್ದು. ಹಾಸಿಗೆ ಹಿಡಿದ ಸ್ಥಿತಿಯಲ್ಲಿ ಜಯಂತನ ಗಂಡಸುತನ, ತನ್ನ ವೈಕಲ್ಯವನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತದೆ. ಆದರೆ ಹರಿಣಾಕ್ಷಿ ಎಲ್ಲ ನೋವನ್ನು ಸಹಿಸಿಕೊಂಡು ತನ್ನ ಗೃಹಿಣೀತ್ವವನ್ನು ಕಾಪಾಡಿಕೊಂಡು ಬರುತ್ತಾಳೆ. ಯಾವುದೇ ರೀತಿಯ ಪ್ರತಿರೋಧವನ್ನು ತೋರುವುದಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಅಸಹಾಯಕ ಸ್ಥಿತಿಯನ್ನು ಕಾಣಬಹುದು.

ಅನುಪಮಾ ಪ್ರಸಾದ್‌ರವರ "ಇಸುಮುಳ್ಳು' ಕತೆಯ ಮುಖ್ಯಪಾತ್ರ ಶಂಕರಯ್ಯ ಪ್ರಕೃತಿಯನ್ನೇ ಗೆಲ್ಲಬಲ್ಲೇ ಎಂಬ ಅಹಂಕಾರ ಹೊತ್ತ ವ್ಯಕ್ತಿತ್ವ ಆದರೆ ಅವನ ಅಹಂಕಾರವನ್ನು ಲೆಕ್ಕಕ್ಕೆ ಹಾಕಿಕೊಳ್ಳದವಳು ಅವನ ಮಡದಿ ಸುಭದ್ರಮ್ಮ. ಗಂಡನ ಅಹಂಕಾರವನ್ನು ಸುಳ್ಳು ಎಂದು ಧಿಕ್ಕರಿಸುವ ದಿಟ್ಟ ಮಹಿಳೆ. ಅದಕ್ಕಾಗಿ ಗಂಡನಿಂದ ಪೆಟ್ಟು ತಿಂದವಳು. ಆದರೂ ಅವನಿಗೆ ಸವಾಲು ಹಾಕಿದ ಗಟ್ಟಿತನ ಅವಳಲ್ಲಿದೆ. ಇಲ್ಲೊಂದು ಬಹಳ ರಸವತ್ತಾದ ಅರ್ಥಪೂರ್ಣ ಘಟನೆ ನಡೆಯುತ್ತದೆ. ತಮ್ಮ ಮನೆಯ ಹಸು ಮತ್ತು ಶೆಟ್ಟರ ಮನೆಯ ಹೋರಿ ಪ್ರಕೃತಿ ಸಹಜವಾಗಿ ಸೇರುವುದನ್ನು ತಡೆಯಲು ಹೊರಡುವ ಗಂಡ ಶಂಕರಯ್ಯನ ಮೂರ್ಖತನವನ್ನು ಆಕೆ ವಿರೋಧಿಸುತ್ತಾಳೆ.

ಮನುಷ್ಯರ ಮೇಲೆ ನೀವು ತೋರಿಸುತ್ತಿರೀಂತ ಪ್ರಾಣಿಗಳೂ ಅದನ್ನು ಸಹಿಸಿಕೊಳ್ಳುತ್ತವೆಯೇ ಎಂದು ಸವಾಲು ಹಾಕುತ್ತಾಳೆ. ಆದರೆ ತನ್ನ ಹೆಂಡತಿ ಮಾತು ಬರೆ ಹೆಂಗಸಿನ ಮಾತೆಂದೇ ಹಗುರವಾಗಿ ಪರಿಗಣಿಸುವ ಗಂಡ ಶಂಕರಯ್ಯ ಯಾವತ್ತು ಅವಳ ಮಾತನ್ನು ಗಂಭೀರವಾಗಿ ಲೆಕ್ಕಕ್ಕೆ ಹಾಕಿಕೊಳ್ಳುವುದೇ ಇಲ್ಲ. ತನ್ನ ಇಂತಹ ಕೃತ್ಯಗಳಿಗೆ ತಾನೇ ಬಲಿಯಾಗಿ ಹೆಂಡತಿಯ ಚಾಕರಿಯ ಹಂಗಿಗೆ ಬಿದ್ದಾಗಲೂ ಹೆಂಡತಿ ಸುಭದ್ರಮ್ಮ ತನ್ನ ಗಂಡನನ್ನು ಎಂದು ಹಂಗಿಸುವುದಿಲ್ಲ. ಇದು ಲೇಖಕಿಯ ಪ್ರಕಾರ ಹೆಣ್ಣಿನ ಸಹಜ ಪ್ರಾಮಾಣಿಕ ಪ್ರವೃತ್ತಿ. ಹಾಗಂತ ಎಂದೂ ಸುಭದ್ರಮ್ಮ ತಮ್ಮ ನೇರ ನಿಲುವುಗಳನ್ನು ಬಿಟ್ಟುಕೊಡುವುದಿಲ್ಲ. ಸುಭದ್ರಮ್ಮನಿಗೆ ಒಂದು ಸಂಸಾರ, ಮನೆಯನ್ನು, ಸದಸ್ಯರನ್ನು ಮುಂದೆ ನಡೆಸಬಲ್ಲ ಎಲ್ಲಾ ಸಾಮರ್ಥ್ಯಗಳೂ ಇವೆ.

ಆದರೆ ಆಕೆ ಹೆಣ್ಣೆಂಬ ಕಾರಣಕ್ಕೆ ಆ ಅವಕಾಶ ದಕ್ಕುವುದೇ ಇಲ್ಲ. ಆದರೆ ಗಂಡ ಶಂಕರಯ್ಯ ಮೂರ್ಖನಾದರು ಪ್ರಾಮಾಣಿಕವಲ್ಲದ ಸಂಬಂಧಗಳೇ ಮನುಷ್ಯನ ಅವನತಿಗೆ ಕಾರಣ ಎಂದು ತಿಳಿದಿದೆ ಸುಭದ್ರಮ್ಮನಿಗೆ. ಈ ಕಥೆಯಲ್ಲಿ ಅಜ್ಜ ಹೇಳುವ ತಾಳೆಮದ್ದಲೆಯ ವಿವರಗಳನ್ನು ಅತ್ಯಂತ ಆಸಕ್ತಿಯಿಂದ ಕೇಳುವ ಹಾಗೂ ಅದರ ಕುರಿತು ಅಜ್ಜನ ಬಗೆಗೆ ಅಪಾರ ಅಭಿಮಾನ ಗೌರವ ಇರುವ ರಾಜೀವನಿಗೆ ಅಜ್ಜಿಯ ಪ್ರತಿಭೆ ವಿದ್ವತ್ತು ಮಾತ್ರ ಅರಿವಾಗುವುದೇ ಇಲ್ಲ.

ಕುಂತಿಯ ಕುರಿತು ಪಾಂಡು ಮಾದ್ರಿಯರ ಮೋಹದ ಕುರಿತು ಸುಭದ್ರಮ್ಮ ಕೇಳುವ ಪ್ರಶ್ನೆಗಳಿಗೆ ಗಂಡೆಂಬ ಅಹಂ ತಲೆಗೇರಿರುವ ಶಂಕ್ರಯ್ಯ ಬಳಿ ಹೆಂಡತಿಗೆ ಹೇಳಲು ಉತ್ತರವೇ ಇರುವುದಿಲ್ಲ. ರಾಜೀವನೋ ಅಜ್ಜಿಯ ಮಾತುಗಳು ಸುಮ್ಮನೆ ಅಜ್ಜನನ್ನು ಕೆರಳಿಸುತ್ತವೆ ಎನ್ನುವ ಆತಂಕ. ಆತನ ಮನಸ್ಸು ಅಜ್ಜನ ಕಡೆಗೆ. ಆದರೆ ಇವೆಲ್ಲದರ ನಿಜ ಅವನಿಗೆ ಅರ್ಥವಾಗುವುದು ಸ್ವತಃ ಅವನ ಬದುಕಿನಲ್ಲಿ ನಡೆಯುವ ದುರಂತಗಳ ಮೂಲಕವೇ.

ಅಜ್ಜಿ ಹೇಳುವ ಪಕ್ಷಿ ಜೋಡಿ ತತ್ವದ ಆವಾಹನೆ ಆತನಿಗೆ ಆದ ಮೇಲೆ ಅವನಿಗೆ ತನ್ನ ಹೆಂಡತಿ ಮತ್ತು ತನ್ನ ಅಣ್ಣನ ನಡುವಣ ಸಂಬಂಧ ಕೇವಲ ಅಕ್ರಮವಲ್ಲ ಎನ್ನುವ ಪ್ರಜ್ಞೆ ಹೊಳೆಯಲಾರಂಭಿಸುತ್ತವೆ. ಸುಭದ್ರಮ್ಮನಿಗೆ ಅರಿವಾಗಿರುವುದು ಇದು ಸೂಕ್ಷ್ಮವಾದ ಸತ್ಯ. ಆದರೆ ಲೋಕಕ್ಕೆ ಇನ್ನೂ ಅರಿವಾಗದ ದುರಂತ ಎಂಬುದು ಕಥೆಯನ್ನು ಇನ್ನೂ ಪರಿಣಾಮಕಾರಿಯಾಗಿಸುವಲ್ಲಿ ಯಶಸ್ವಿಯಾಗಿದೆ. ಇಲ್ಲಿ ಹೆಣ್ಣಿನ ಚಿಂತನೆ ಗಂಡಿಗಿಂತ ಮುಂಚೂಣಿಯಲ್ಲಿರುವುದು ಗೋಚರಿಸುತ್ತದೆ.

ಅನುಪಮಾ ಪ್ರಸಾದ್‌ರವರ 'ಸೈತಾನನ ಬಲೆ' ಈ ಕತೆಯ ವಸ್ತು ಸಮಕಾಲೀನ ಆದರೂ ಅದು ಹೆಣ್ಣಿನ ಆಯ್ಕೆಯ ಬದುಕಿನ ಪ್ರಶ್ನೆಯನ್ನು ಎತ್ತುತ್ತದೆ. ಗಂಡು ನಿಯಂತ್ರಣದ ಭದ್ರ ಮುಷ್ಟಿಯಲ್ಲಿ ಗಂಡಿನ ಚಿಂತನೆಗಳನ್ನೇ ತನ್ನ ಚಿಂತನೆಯನ್ನಾಗಿಸಿಕೊಳ್ಳುವ ಹೆಣ್ಣು ತಾನು ತಪ್ಪಿ ಬಿದ್ದಾಗ ಗಂಡಿನ ಯಾವ ಆಸರೆಯನ್ನು ಬಯಸಲಾರದೆ ಕೆಟ್ಟ ನ್ಯಾಯವನ್ನು ಈ ಕತೆ ಹೇಳುತ್ತದೆ. ಈ ರೀತಿಯ ಲೋಕದೊಳಗೆ ಫಕೀರಿಚ್ಚ ನಂತಹ ಹೆಣ್ಣುಗುಂಡಿಗೆಯವರಲ್ಲಿ ಇರುವುದನ್ನೂ ಈ ಬಗೆಗೆ ಒಂದು ಭರವಸೆಯನ್ನೂ ತಾಳುತ್ತದೆ.

ಇವರ ಈ ಕಥಾಸಂಕಲನದ ಎಂಟು ಕತೆಗಳಲ್ಲಿ ಸಮಕಾಲೀನ ವಿದ್ಯಮಾನಗಳ ಜೊತೆ ಮನುಷ್ಯನನ್ನು ಬಂಧಿಸಲ್ಪಟ್ಟಿರುವ ಹಲವು ಬಂಧಗಳ ಕುರಿತಾದ ಗಾಢ ಚಿಂತನೆಗಳು ಇವೆ. ಈ ಎಂಟು ಕಥೆಗಳಲ್ಲಿ ಸೂರು, ದಾರಿ ಡೇಗೆ, ಆನೆ ಬಂತೊಂದಾನೆ, ಆ ಜೀವದ ಅಪೂರ್ಣ ಸ್ವಗತಗಳು ಒಂದು ಮಾದರಿಯ ಕತೆಗಳಾದರೆ ಸೈತಾನನ ಬಲೆ, ಜೋಗತಿ ಜೋಳಿಗೆ ಮತ್ತು ಇಸುಮುಳ್ಳು ಮತ್ತೊಂದು ಮಾದರಿಯ ಕತೆಗಳಂತೆ ಭಾಸವಾಗುತ್ತದೆ. ಮೊದಲನೆಯ ಮಾದರಿ ಸಮಾಜ ವಾಸ್ತವಗಳನ್ನು ಬಿಚ್ಚಿಟ್ಟರೆ ಎರಡನೆಯ ಮಾದರಿ ಸಮಾಜದಲ್ಲಿ ಕಾಡುವ ನೈತಿಕತೆ ಅನೈತಿಕತೆಗಳ ಹುಡುಕಾಟದಲ್ಲಿ ತೊಡಗಿದಂತೆ ಭಾಸವಾಗುತ್ತದೆ.

'ದೂರತೀರ' ಕಥಾ ಸಂಕಲನದ ಆರಂಭದ ಕತೆ 'ಬಣ್ಣ' ಹೆಣ್ಣಿನ ಅಸಹಾಯಕತೆಯನ್ನು ಕತೆಯ ಮುಖ್ಯ ವಸ್ತುವನ್ನಾಗಿಸಿಕೊಂಡು ರಚನೆಯಾದದ್ದು. ಕತೆಯ ಮುಖ್ಯ ಪಾತ್ರಧಾರಿಣಿ ಶಾರ್ವರಿ. ಇವಳಿಗೆ ತನ್ನ ಹಳ್ಳಿಯ ವಾತಾವರಣ ಮನೆಯ ಸುತ್ತಲಿನ ತೋಟ ಮತ್ತು ವರ್ಣಚಿತ್ರಗಳೆಂದರೆ ಆಪ್ತವಾದುವು. ತನ್ನ ತಂದೆಯೂ ವರ್ಣಚಿತ್ರ ಕಲಾವಿದ. ಆದರೆ ಅವಳ ತಂದೆ ತನ್ನ ಮಗಳ ಅಭಿರುಚಿಯನ್ನು ಪ್ರೋತ್ಸಾಹಿಸಲಿಲ್ಲ.

ಅವಳನ್ನು ಮಗಳಾಗಿಯೆ ಪ್ರೀತಿಸಿದ ಹೆಣ್ಣಿನಂತೆಯೇ ಕಂಡ. ಅವಳಲ್ಲಿ ಕಲಾವಿದೆತನವನ್ನು ಗುರುತಿಸಿದವನು ಸೂಕ್ಷ್ಮಜ್ಞನಾದ ಸ್ಟೀಫನ್. ಎಲ್ಲ ಗಂಡಂದಿರು ಗಂಡುತನದ ಯಜಮಾನಿಕೆಯಲ್ಲಿ ಹೆಂಡತಿಯನ್ನು ಬರೇಹೆಣ್ಣಾಗಿ ಕಾಣುವಂತೆ ಅವಳ ತಂದೆ ಅವಳನ್ನು ಗಂಡುತನದ ಯಜಮಾನಿಕೆಯಲ್ಲೇ ಮಗಳಾಗಿ ಕಂಡ. ಸ್ವತಃ ಕಲಾವಿದನಾದರೂ ಶಾರ್ವರಿಯ ಕಲೆಯ ಬಗೆಗೆ ಅವನದು ಜಡಭಾವ. ಅವಳ

ಗಂಡನೋ ಅವನ ಕೆರಿಯರ್, ಸಂಬಳ, ಪ್ರಮೋಷನ್ ಇತ್ಯಾದಿಗಳನ್ನು ಬಿಟ್ಟು ಬೇರೆ ಯಾವುದನ್ನು ಯೋಚಿಸದವನು.

ಅವನ ಪ್ರಕಾರ ಶಾರ್ವರಿಗೆ ಕಲೆ ಎಂದರೆ ಧರ್ಮಕ್ಕೆ ಸಿಗುವ ಅಮೇರಿಕೆಯ ಪ್ರವಾಸ ಅಷ್ಟೇ. ಅಂತಹ ರಸಿಕತನವಿಲ್ಲದ ತನ್ನ ಗಂಡನ ಜೊತೆಯಲ್ಲೂ ಕಲಾವಿದೆ ಶಾರ್ವರಿ ಬಾಳಬಲ್ಲಳು. ಪುರುಷ ಪ್ರಧಾನ್ಯ ಮೌಲ್ಯಗಳ ಅಡಿಯಲ್ಲಿ ಹೆಣ್ಣು ತನ್ನ ಸ್ವಾಯತ್ತತೆಯನ್ನು ಕಾಪಾಡಿಕೊಂಡು ಬಾಳಲಾರದ ಅನಿವಾರ್ಯತೆ ಬಗೆಗೆ ಅವಳಿಗೆ ಅರಿವಿದೆ. ಹಾಗಂತ ಶಾರ್ವರಿ ಹಠದಿಂದ ಅದನ್ನು ಎದುರಿಸಲು ಹೊರಟವಳೇ ಅಲ್ಲ. ಪ್ರಕೃತಿಯನ್ನು ತುಂಬಾ ಇಷ್ಟ ಪಡುತ್ತಿದ್ದಳು.

ಶಾರ್ವರಿಯ ಸುತ್ತಮುತ್ತಲ ಹಸಿರು ಈಗ ನಾಶವಾಗಿದೆ. ಅವಳ ಅಪ್ಪ ಸುತ್ತಮುತ್ತಲ ಬೇಡದ ಮರಗಳನ್ನು ಅಂದರೆ ಲಾಭವಿಲ್ಲದ ಮರಗಳನ್ನು ಕಡಿದು ಅಲ್ಲಿ ರಬ್ಬರ್ ತೋಟವನ್ನು ಎಬ್ಬಿಸಿದ್ದಾನೆ. ತೋಟದ ಹಸಿರು ಈಗ ಬಡವಾಗಿದೆ. ಪ್ರಕೃತಿಯ ಬರಡುತನ ಅವನ ಮನಸ್ಸಿನ ಬರಡುತನವನ್ನೇ ಬಿಂಬಿಸುವಂತಿದೆ. ಕತೆಯಲ್ಲಿ ಬರುವ ಮರಗಿಡ ಕಾಡುನಾಶದ ವಿವರಗಳು ಪ್ರಕೃತಿ ಮತ್ತು ಮನುಷ್ಯನ ಸಹಬಾಳ್ವೆಯ ಸಂಸ್ಕೃತಿಯೊಂದರ ನಾಶವನ್ನು ಸೂಚಿಸುತ್ತದೆ. ಕರಾವಳಿಯ ಅನೇಕ ಭಾಗಗಳಲ್ಲಿ ಇತ್ತೀಚೆಗೆ ಕಾಡುಗಳ ಜಾಗದಲ್ಲಿ ವಾಣಿಜ್ಯ ಬೆಳೆಗಳು ಆವರಿಸಿಕೊಂಡಿವೆ. ಹಿಂದೆ ನಮ್ಮ ಮನೆಯ ಅಂಗಳದಲ್ಲಿ ರಾರಾಜಿಸುತ್ತಿದ್ದ ಗೋರಂಟೆ ಶಂಖಪುಷ್ಪ, ಸದಾಪುಷ್ಪ, ದಾಸವಾಳದಂತಹ ಹೂಗಳು ಈಗ ಕಣ್ಮರೆಯಾಗುತ್ತಿವೆ.

ಈ ಕತೆಯಲ್ಲಿ ಶಾರ್ವರಿಗೆ ತನ್ನಲ್ಲಿರುವ ಕಲೆಯನ್ನು ಗುರುತಿಸುವವರಿಲ್ಲ ಎನ್ನುವ ಕೊರಗಿನ ಜೊತೆ ಪರಿಸರ ನಾಶದ ಕೊರಗು ಕೂಡ ಜೊತೆಯಾಗುತ್ತದೆ. ಇದು ಶಾರ್ವರಿಯೊಬ್ಬಳ ಬದುಕಿನ ಕತೆಯಲ್ಲಿ ನಡೆಯುತ್ತಿರುವ ದುರಂತ ಎಂಬ ನಿಜವನ್ನು ಕಥೆ ಸಾರುವಂತೆ ತೋರುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಅಸಹಾಯಕ ಹೆಣ್ಣೊಬ್ಬಳ ಬದುಕಿನ ಕಥೆಯೂ ಇದಾಗಿದೆ.

ಮಿತ್ರ ವೆಂಕಟ್ರಾಜ್‌ರವರ 'ಬೊಳ್ಳದ ಸಂಕ' ಕಥೆಯಲ್ಲಿ ವೇದಾವತಿ ಪಾಲಿಗೆ ಬಂದದ್ದೆ ಪಂಚಾಮೃತ ಎಂಬುದನ್ನು ಒಪ್ಪಿಕೊಂಡು ಬದುಕಿದವಳು. ಮುದುಕ ರಾಮಕೃಷ್ಣಯ್ಯನವರನ್ನು ಮದುವೆಯಾಗಿ ಅವರ ಮೊದಲ ಹೆಂಡತಿಯ ಮಕ್ಕಳನ್ನು ತನ್ನ ಮಕ್ಕಳಂತೆ ನೋಡಿಕೊಂಡವಳು. ಈಕೆ ತನಗೆ ಬೇಕಾದಂತೆ ಅಲಂಕಾರ ಮಾಡಿಕೊಂಡಾಗ ಪತಿ ರಾಮಕೃಷ್ಣಯ್ಯನ ವ್ಯಂಗ್ಯದ ಮಾತಿಗೆ ತುತ್ತಾಗಬೇಕಾಗುತ್ತದೆ.

ಮುದುಕನನ್ನು ಕೈ ಹಿಡಿದ ಮಾತ್ರಕ್ಕೆ ತನ್ನ ಯೌವನವನ್ನು ಮುದಿಯಾಗಿಸಿಕೊಳ್ಳಬೇಕಾದ ಅನಿವಾರ್ಯತೆ ಈಕೆಯ ಪಾಲಿಗೆ ಒದಗಿ ಬರುತ್ತದೆ. ರಶ್ಮಿಯೊಡನೆ ವೇದಾವತಿ ಹೇಳುವ 'ಅದೇ ನೋಡು ನಿಮ್ಮ ಊರಲ್ಲಿ ಕೂದಲು ಬಿಳಿ ಮಾಡಲು ಏನಾದರು ಸಿಗುತ್ತದ ಹೇಳು ಎಲ್ಲರಿಗೆ ಕೂದಲು ಬಿಳಿಯಾಗುವ ಚಿಂತೆಯಾದರೆ ನನ್ನ ಸುರ್ಪಕ್ಕೆ ಕೂದಲು ಬಿಳಿಯಾಗಲಿಲ್ಲ ಎಂಬ ಚಿಂತೆ'[೩೦] ಈ ಮಾತುಗಳು, ಆಕೆಗೆ ವೃದ್ಧಾಪ್ಯದ ಅನಿವಾರ್ಯವನ್ನು ತಂದುಕೊಡುತ್ತದೆ. 'ಆ ಗಾಂಧಾರಿ ಯಾಕೆ ಕಣ್ಣಿಗೆ ಕಟ್ಟಿಕೊಂಡಿದ್ದಳಂತ ನಂಗೆ ಈಗ ಸರೀ ಅರ್ಥ ಆಗ್ತದೆ ಜಾನ್ಕಿ ಯಾರಿಗೊತ್ತು ದೃತರಾಷ್ಟ್ರ ಇಡೀ ದಿನ ಇವರ ಹಾಂಗೆ ಹಂಗಿಸಿಂಡಿಪ್ಪ – ತನಗೆ ಕಣ್ಣಿಲ್ಲ ಅಂತ ಹೋಗಲಿ ಆ ರಗಳೆ ಬೇಡ ಅಂತ ತಾನೂ ಕುರುಡರ ಹಂಗೆ ಜೀವನ ತೆಗೆದಳಲ್ಲ. ಪುಣ್ಯಾತ್ಮಳು'[೩೧] ಎಂದು ವೇದಾವತಿ ನಗುತ್ತಾಳೆ. ಈ ಕಥೆಯಲ್ಲಿ ವೇದಾವತಿಗೆ ವೃದ್ಧನೊಂದಿಗೆ ಅನಿವಾರ್ಯವಾಯಿ ಬದುಕು ನಡೆಸುವಂತಹ ಸಂದರ್ಭ ಒದಗಿ ಬರುತ್ತದೆ. ಗಂಡನನ್ನು ಧಿಕ್ಕರಿಸುವ ಧೈರ್ಯವನ್ನು ಮಾಡದೆ ತನ್ನ ಅವಸ್ಥೆಯ ಬಗೆಗೆ ಪ್ರಶ್ನೆಗಳು ಹುಟ್ಟಿಕೊಳ್ಳುತ್ತದೆ. ಆ ಪ್ರಶ್ನೆಯನ್ನು ಪುರಾಣದ ಪ್ರತಿಮೆಯಾದ ಗಾಂಧಾರಿಯೊಂದಿಗೆ ಸಮೀಕರಿಸುತ್ತ ತನ್ನ ಪ್ರತಿರೋಧವನ್ನು ಮೌನವಾಗಿ ವ್ಯಕ್ತಪಡಿಸುತ್ತಾಳೆ.

### ೩.೩. ಮಗಳು–ಸೊಸೆ

ಮಗಳು–ಸೊಸೆ ಈ ಎರಡು ಪಾತ್ರಗಳು ಸಾರಾ ಅಬೂಬಕ್ಕರ್‌ರವರ ಕಥೆಗಳಲ್ಲಿ ಒಂದೇ ಥರದ ಅನುಭವ ಪಡೆಯುವ, ಒಂದು ವಿಧದಲ್ಲಿ ಹೇಳುವುದಾದರೆ ಸಮಾನ ದುಃಖಿಗಳು ಎನ್ನಬಹುದಾದ ಪಾತ್ರಗಳು. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಗೆ ಆಗುವ, ಹೆಂಡತಿಗೆ ಆಗುವ ಅಥವಾ ಒಬ್ಬಾಕೆ ಗೃಹಿಣಿಗೆ ಆಗುವ ಅಥವಾ ತಾಯಿಗೆ ಆಗುವ ಎಲ್ಲ ಅನುಭವಗಳೂ ಒಬ್ಬ ಸೊಸೆಗೂ ಮಗಳಿಗೂ ಆಗಿಯೇ ಆಗುತ್ತದೆ. ಹೆಚ್ಚುಕಡಿಮೆ ಮಗಳಿಗೆ ಅಣ್ಣಂದಿರಿಂದ ಅಪ್ಪನಿಂದ, ಒಟ್ಟಾರೆ ಹೇಳುವುದಾದರೆ ತಾನು ಬೆಳೆಯುತ್ತಿರುವ ಮನೆಯಿಂದ ಕಟ್ಟುಪಾಡುಗಳು, ನಿರ್ಬಂಧಗಳು ಸ್ವಾತಂತ್ರ್ಯಹರಣದ ಪರಿಸ್ಥಿತಿಗಳು ಹೇಗೆ ಒದಗುತ್ತವೆಯೋ ಸೊಸೆಗೂ ಅಂತಹುದೇ ಗಂಡನ ಮನೆಯಿಂದ, ಅತ್ತೆ–ಮಾವ, ಗಂಡ–ಭಾವ ಮೈದುನರಿಂದ ಈ ರೀತಿಯ ಪರಿಸ್ಥಿತಿಗಳು ಎದುರಾಗಿಯೇ ಇರುತ್ತವೆ.

'ಚಪ್ಪಲಿಗಳು' ಕಥೆಯಲ್ಲಿ ಸಮೀರಳ ಅಪ್ಪ ಆಕೆಯ ಎಲ್ಲಾ ಸಂತೋಷಗಳನ್ನು ಕಸಿದುಕೊಂಡ ಸರ್ವಾಧಿಕಾರಿ. ಮುಸ್ಲಿಂ ಧರ್ಮದ ಕಟ್ಟುಪಾಡುಗಳನ್ನು ಸಂಪೂರ್ಣ ಒಪ್ಪಿಕೊಂಡು ಅವನ್ನೆಲ್ಲಾ ಮನೆಯ ಹೆಣ್ಣು ಮಕ್ಕಳಿಗೆ ಹೇರುತ್ತಿರುವ ಕಟ್ಟಾ ಸಂಪ್ರದಾಯವಾದಿ. ಬುರ್ಖಾ ಧರಿಸುವುದರಿಂದ ಹಿಡಿದು ಮಗಳನ್ನು ಅಳಿಯ ಪಟ್ಟಣಕ್ಕೆ ಸಿನಿಮಾ ನೋಡಲು ಕರೆದುಕೊಂಡು ಹೋದ ವಿಷಯ ಎಲ್ಲವೂ ಆತನಿಗೆ ಧರ್ಮವಿರೋಧಿ ಮತ್ತು ಸ್ತ್ರೀ ಮೇರೆ ಮೀರಿದ ಕಾರ್ಯಕ್ಕೆ ಇಳಿದಂತೆ ಗೋಚರ ಆಗುತ್ತದೆ. ಈ ಎಲ್ಲ ವಿಷಯಕ್ಕೆ ಆತ ಮನೆಯವರ ಮೇಲೆ ಕಿಡಿ ಕಾರುತ್ತಾನೆ.

ಒಂದು ದಿನ ಮಗಳನ್ನು ಅಳಿಯ ಶಬೀರ್ ಪಟ್ಟಣಕ್ಕೆ ಕರೆದೊಯ್ದ ವಿಷಯ ಕೇಳಿ "ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕೆಂದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ? ಚಪ್ಪಲಿ ಎಲ್ಲಿ ಬೇಕೋ ಇಲ್ಲೇ ಇರಬೇಕು.[೨೨] ತಂದೆ ಮಗಳಿಗೆ, ಅಳಿಯನ ಮುಂದೆ ಹೇಳಿದ ಮಾತಿದು!

ವಿಪರ್ಯಾಸವೆಂದರೆ ಅದೇ ತನ್ನ ತವರಿಗೆ ತಾಯಿ ಮತ್ತೊಮ್ಮೆ (ತನಗೆ ಮದುವೆಯಾದ ಮೇಲೂ!) ಗರ್ಭಿಣಿಯಾದಾಗ ತಂದೆ ಹೇಳಿದ ಮಾತುಗಳನ್ನು ಮರೆತು ತಾಯಿಯ ಚಾಕರಿಗಾಗಿ ಮುಂದು ನಿಲ್ಲುತ್ತಾಳೆ. ಮಗಳಾಗಿ ತನ್ನ ಕರ್ತವ್ಯದ ಹೊಣೆ ಹೊರುತ್ತಾಳೆ. ಆಕೆಯ ತಂದೆ ತನ್ನ ಗಂಡನಲ್ಲಿ ಸಮೀರಳ ತಾಯಿಗೆ ಹೆರಿಗೆಯಾಗಿದೆ, ಮಗು ಸತ್ತು ಹುಟ್ಟಿದೆ, ಮನೆಯಲ್ಲಿ ಚಿಕ್ಕ ಮಕ್ಕಳನ್ನು ನೋಡಿಕೊಳ್ಳಲು ಯಾರೂ ಇಲ್ಲ, ಸಮೀರಳನ್ನು ಕಳುಹಿಸಿ ಕೊಡು ಎಂದಾಗ ಸಮೀರಳಿಗೆ ಆಘಾತವಾದರೂ ತಾಯಿಯ ಕಷ್ಟದಲ್ಲಿ ದುಃಖದಲ್ಲಿ ತಾನು ಪಾಲುದಾರಳಾಗದೆ ಇನ್ನಾರಾಗಬೇಕು ಎನ್ನುವ ಯೋಚನೆ. ಇದು ಮಗಳಿಂದ ಮೂಡಿ ಬಂದ ಸಹಜ ಯೋಚನೆ. ತನ್ನ ತವರಿಗೆ ಭಾವನಾತ್ಮಕ ಸಂಬಂಧ ಹೆಣೆಯ ಬಲ್ಲ ಮಗಳು ಮಾತ್ರ ಎನ್ನುವುದನ್ನು ಕಥೆ ಸ್ಪಷ್ಟವಾಗಿ ತಿಳಿಸಿ ಕೊಡುತ್ತದೆ.

ಸಮೀರಳ ತಂದೆ ಹಸನ್ ಬ್ಯಾರಿಗೆ ಆತನ ಹೆಂಡತಿ ಒಂದು ಹೆರುವ ಯಂತ್ರದಂತೆ ವರ್ಷ ವರ್ಷವೂ ಆಕೆಯ ಕೈಗೊಂದು ಮಗು ಕೊಡುತ್ತಲೇ ಇರುವವನು. ತಾಯಿ ಪ್ರಸವಕ್ಕೆ ಹತ್ತಿರವಾದಾಗಲೆಲ್ಲಾ ಸಮೀರ ತವರಿಗೆ ಹೋಗಿ ತಾಯಿಯ ಚಾಕರಿ ಮಾಡಲೇಬೇಕಾದ ಅನಿವಾರ್ಯತೆ. ತಂದೆಯ ಕಟ್ಟುಪಾಡು ಸರ್ವಾಧಿಕಾರಿ ಧೋರಣೆ ತವರಲ್ಲಿ ಗುಲಾಮಗಿರಿತನ ಇದ್ದರೂ ಮಗಳಾಗಿ ತನ್ನ ಕರ್ತವ್ಯವನ್ನು ಚಾಚೂ

ತಪ್ಪದೆ ಮಾಡಿದ ಹೆಣ್ಣಾಕೆ. ಆದರೂ ತಂದೆ ಮನೆಯ ಕಷ್ಟಕ್ಕೆ ಸಹಾಯ ಮಾಡಬೇಕೆಂಬ ಮನೋಭಾವ ಇದೆ.

'ಮಗಳು ಬಂದಳು' ಕತೆಯಲ್ಲಿ ಎಂಟು ಮಕ್ಕಳು ಸತ್ತು ಹುಟ್ಟಿದ ಒಂಭತ್ತನೆಯ ಮಗಳು ಏಳನೇ ವಯಸ್ಸಿನಲ್ಲಿಯೇ ಮದುವೆಯಾಗಿ ಸ್ಥಿತಿವಂತರ ಮನೆ ಸೇರಿದ್ದು, ಆಕೆಯ ಮುಖದರ್ಶನಕ್ಕಾಗಿ ಕಾತರಿಸುವ ಕೇಶವ ಭಟ್ಟರು ಮಗಳನ್ನು ತಮ್ಮಲ್ಲಿಗೆ ಬರಮಾಡಲು ಹೂಡುವ ತಂತ್ರದ ಮೂಲಕ ಅವರ ಕರುಳಿನ ಆರ್ತತೆಯನ್ನು ಒಳಗೊಂಡಿರುವುದನ್ನು ಕಾಣಬಹುದು. 'ಕರೆ' ಕತೆಯಲ್ಲಿ ಮನೆ – ಮನಗಳ ನಡುವೆ ಎದ್ದು ನಿಂತಿರುವ ಕೌಟುಂಬಿಕ ಕಲಹದ ಕಹಿಯ ಅಡ್ಡಗೋಡೆಯನ್ನು ಕಳಚುವ ಮಾತೃತ್ವದ ಕರೆಯನ್ನು ಚಿತ್ರಿಸಿರುವುದನ್ನು ಗಮನಿಸಬಹುದು.

'ಅಂಕುರ' ಕಥೆಯಲ್ಲಿ ಶಕೀಲಾ ಗಂಡನ ಮನೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯ ಕಳೆದುಕೊಂಡು ನರಕ ಯಾತನೆ ಅನುಭವಿಸಿದ ಅಮಾಯಕ ಸೊಸೆ. ವರದಕ್ಷಿಣೆಯ ಹೆಸರಿನಲ್ಲಿ ಗಂಡ–ಅತ್ತೆ ಭಾವಂದಿರಿಂದ ಕಿರುಕುಳ ಅನುಭವಿಸುತ್ತಾ ಗಂಡನ ಮನೆಯವರ ಪಿತೂರಿಗೆ ಮೊದಲು ತವರು ಮನೆಯವರ ಸಂಬಂಧ ಕಳೆದುಕೊಂಡರೂ ಗಂಡನೇ ನನ್ನ ಬಾಳಿಗೆ ಆಧಾರ ಎಂದು ನರಕಸದೃಶವಾದರೂ ಗಂಡನನ್ನು ಹಿಂಬಾಲಿಸಿ ಗಂಡನ ಮನೆಯಲ್ಲಿಯೇ ಕಾಲ ಕಳೆಯುತ್ತಾಳೆ.

ಆದರೆ ಹೆಣ್ಣಿನ ಕಣ್ಣೀರಿಗೆ ಆತಂಕಕ್ಕೆ ಬೆಲೆ ಎಲ್ಲಿದೆ? ವರದಕ್ಷಿಣೆಯನ್ನೇ ನೆಪವಾಗಿರಿಸಿಕೊಂಡು ಗಂಡನ ಮನೆಯಲ್ಲಿ ಗಂಡನಿಗಿಂತಲೂ ಹೆಚ್ಚು ಅತ್ತೆ ಮತ್ತು ಉಳಿದವರು ನೀಡುವ ಶಿಕ್ಷೆಗಳನ್ನೆಲ್ಲ ಸಹಿಸಿಕೊಂಡೇ ತನ್ನೆರಡು ಮಕ್ಕಳಿಗಾಗಿ ಆಕೆ ಕಾಲ ಕಳೆಯುತ್ತಾಳೆ. ತನ್ನ ಮೈದುನನ ಅಟ್ಟಹಾಸಕ್ಕೆ ಆಕೆ ಪ್ರತಿರೋಧ ವ್ಯಕ್ತಪಡಿಸಿದರೂ ಆತನಿಗೆ ಜಯ. ಆತನ ಕೈಯೇ ಮೇಲಾಗುತ್ತದೆ.

ತಲಾಖ್‌ವರೆಗೂ ಸಾಗಿ ತನ್ನ ಮಕ್ಕಳನ್ನು ಕಳೆದುಕೊಂಡು ತವರಿಗೆ ಬರಿಗೈಯಲ್ಲಿ ಮಗಳಾಗಿ ವಾಪಾಸಾಗುತ್ತಾಳೆ. ಗಂಡನ ಮನೆಯಲ್ಲಿ ದರಿದ್ರ ಸೊಸೆ, ತವರಲ್ಲಿ ನತದೃಷ್ಟ ಮಗಳು, ತಾನು ಒಂಬತ್ತು ತಿಂಗಳು ಗರ್ಭದಲ್ಲಿ ಹೊತ್ತು ಹೆತ್ತರೂ ತನ್ನ ಮಕ್ಕಳ ಮೇಲೆ ಅಧಿಕಾರವಿರುವುದು ಗಂಡನಿಗೆ ಮಾತ್ರ. ಇಂತಹ ಸಂದರ್ಭದಲ್ಲಿ[೩೪] ಮೊತ್ತಮೊದಲ ಬಾರಿಗೆ ಅವಳ ಮನದಾಳದಿಂದ ಪ್ರಶ್ನೆಯೊಂದು ಉದ್ಭವಿಸಿದ್ದು ಧರ್ಮ ಎಂದರೇನು? ಎಂಬುದಾಗಿದೆ.

ತಪ್ಪದೆ ಮಾಡಿದ ಹೆಣ್ಣಾಕೆ. ಆದರೂ ತಂದೆ ಮನೆಯ ಕಷ್ಟಕ್ಕೆ ಸಹಾಯ ಮಾಡಬೇಕೆಂಬ ಮನೋಭಾವ ಇದೆ.

'ಮಗಳು ಬಂದಳು' ಕತೆಯಲ್ಲಿ ಎಂಟು ಮಕ್ಕಳು ಸತ್ತು ಹುಟ್ಟಿದ ಒಂಭತ್ತನೆಯ ಮಗಳು ಏಳನೇ ವಯಸ್ಸಿನಲ್ಲಿಯೇ ಮದುವೆಯಾಗಿ ಸ್ಥಿತಿವಂತರ ಮನೆ ಸೇರಿದ್ದು, ಆಕೆಯ ಮುಖದರ್ಶನಕ್ಕಾಗಿ ಕಾತರಿಸುವ ಕೇಶವ ಭಟ್ಟರು ಮಗಳನ್ನು ತಮ್ಮಲ್ಲಿಗೆ ಬರಮಾಡಲು ಹೂಡುವ ತಂತ್ರದ ಮೂಲಕ ಅವರ ಕರುಳಿನ ಆರ್ತತೆಯನ್ನು ಒಳಗೊಂಡಿರುವುದನ್ನು ಕಾಣಬಹುದು. 'ಕರೆ' ಕತೆಯಲ್ಲಿ ಮನೆ – ಮನಗಳ ನಡುವೆ ಎದ್ದು ನಿಂತಿರುವ ಕೌಟುಂಬಿಕ ಕಲಹದ ಕಹಿಯ ಅಡ್ಡಗೋಡೆಯನ್ನು ಕಳಚುವ ಮಾತೃತ್ವದ ಕರೆಯನ್ನು ಚಿತ್ರಿಸಿರುವುದನ್ನು ಗಮನಿಸಬಹುದು.

'ಅಂಕುರ' ಕಥೆಯಲ್ಲಿ ಶಕೀಲಾ ಗಂಡನ ಮನೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯ ಕಳೆದುಕೊಂಡು ನರಕ ಯಾತನೆ ಅನುಭವಿಸಿದ ಅಮಾಯಕ ಸೊಸೆ. ವರದಕ್ಷಿಣೆಯ ಹೆಸರಿನಲ್ಲಿ ಗಂಡ–ಅತ್ತೆ ಭಾವಂದಿರಿಂದ ಕಿರುಕುಳ ಅನುಭವಿಸುತ್ತಾ ಗಂಡನ ಮನೆಯವರ ಪಿತೂರಿಗೆ ಮೊದಲು ತವರು ಮನೆಯವರ ಸಂಬಂಧ ಕಳೆದುಕೊಂಡರೂ ಗಂಡನೇ ನನ್ನ ಬಾಳಿಗೆ ಆಧಾರ ಎಂದು ನರಕಸದೃಶವಾದರೂ ಗಂಡನನ್ನು ಹಿಂಬಾಲಿಸಿ ಗಂಡನ ಮನೆಯಲ್ಲಿಯೇ ಕಾಲ ಕಳೆಯುತ್ತಾಳೆ.

ಆದರೆ ಹೆಣ್ಣಿನ ಕಣ್ಣೀರಿಗೆ ಆತಂಕಕ್ಕೆ ಬೆಲೆ ಎಲ್ಲಿದೆ? ವರದಕ್ಷಿಣೆಯನ್ನೇ ನೆಪವಾಗಿರಿಸಿಕೊಂಡು ಗಂಡನ ಮನೆಯಲ್ಲಿ ಗಂಡನಿಗಿಂತಲೂ ಹೆಚ್ಚು ಅತ್ತೆ ಮತ್ತು ಉಳಿದವರು ನೀಡುವ ಶಿಕ್ಷೆಗಳನ್ನೆಲ್ಲ ಸಹಿಸಿಕೊಂಡೇ ತನ್ನೆರಡು ಮಕ್ಕಳಿಗಾಗಿ ಆಕೆ ಕಾಲ ಕಳೆಯುತ್ತಾಳೆ. ತನ್ನ ಮೈದುನನ ಅಟ್ಟಹಾಸಕ್ಕೆ ಆಕೆ ಪ್ರತಿರೋಧ ವ್ಯಕ್ತಪಡಿಸಿದರೂ ಆತನಿಗೆ ಜಯ. ಆತನ ಕೈಯೇ ಮೇಲಾಗುತ್ತದೆ.

ತಲಾಖ್‌ವರೆಗೂ ಸಾಗಿ ತನ್ನ ಮಕ್ಕಳನ್ನು ಕಳೆದುಕೊಂಡು ತವರಿಗೆ ಬರಿಗೈಯಲ್ಲಿ ಮಗಳಾಗಿ ವಾಪಾಸಾಗುತ್ತಾಳೆ. ಗಂಡನ ಮನೆಯಲ್ಲಿ ದರಿದ್ರ ಸೊಸೆ, ತವರಲ್ಲಿ ನತದೃಷ್ಟ ಮಗಳು, ತಾನು ಒಂಬತ್ತು ತಿಂಗಳು ಗರ್ಭದಲ್ಲಿ ಹೊತ್ತು ಹೆತ್ತರೂ ತನ್ನ ಮಕ್ಕಳ ಮೇಲೆ ಅಧಿಕಾರವಿರುವುದು ಗಂಡನಿಗೆ ಮಾತ್ರ. ಇಂತಹ ಸಂದರ್ಭದಲ್ಲಿ[೩೪] ಮೊತ್ತಮೊದಲ ಬಾರಿಗೆ ಅವಳ ಮನದಾಳದಿಂದ ಪ್ರಶ್ನೆಯೊಂದು ಉದ್ಭವಿಸಿದ್ದು ಧರ್ಮ ಎಂದರೇನು? ಎಂಬುದಾಗಿದೆ.

'ನಿಯಮ ನಿಯಮಗಳ ನಡುವೆ' ಕಥೆಯಲ್ಲಿ ಜೊಹರಾ ಮಗಳಾಗಿ ಕಷ್ಟಕೋಟಲೆಗಳನ್ನು ಅನುಭವಿಸಿ ಬಾಲ್ಯದಲ್ಲಿ ಯಾರದೋ ಮನೆಯ ಚಾಕರಿ ಮಾಡಿ ಜೀವನ ಸಾಗಿಸುತ್ತಾಳೆ. ಮುಂದಿನ ದಿನಗಳಲ್ಲಿ ಮದುವೆಯಾಗಿ ಹೋದ ಮನೆಯಲ್ಲಿ ಸೊಸೆಯಾಗಿ ಒಳ್ಳೆಯ ಬದುಕು ತನ್ನದಾಗಬಹುದೆಂಬ ನಿರೀಕ್ಷೆಯಲ್ಲಿ ಮದುವೆಗೆ ಆಭರಣಕ್ಕೆ ಒಂದಿಷ್ಟು ಹಣ ಸಂಪಾದಿಸುತ್ತಾಳೆ. ಮದುವೆ ಚೆನ್ನಾಗಿಯೇ ನಡೆದರೂ ಹೋದ ಮನೆಯಲ್ಲಿ ಆಕೆ ಸೊಸೆಯಾಗಿ ನೆಟ್ಟಗೆ ಬಾಳುವುದಿಲ್ಲ. ತಾನು ಹೇಳಿದಂತೆ ಕೇಳಲಿಲ್ಲ ಎಂಬ ಒಂದೇ ಕಾರಣಕ್ಕೆ ಗಂಡನಿಂದ ತಲಾಖ್ ಪಡೆಯುತ್ತಾಳೆ. ತಲಾಖ್ ಪಡೆದು ಮತ್ತೆ ತವರು ಮನೆಯಲ್ಲಿ ಹಿಂತಿರುಗಿದ ಹೆಣ್ಣಿಗೆ ಮೊದಲನೆ ಸ್ಥಾನಮಾನ ದೊರಕದೇ ಇರುವ ಪರಿಸ್ಥಿತಿ ಸಾರಾ ಅಬೂಬಕ್ಕರ್‌ರವರ ಹೆಚ್ಚಿನ ಕಥೆಗಳಲ್ಲಿ ಕಂಡು ಬರುತ್ತದೆ.

ಹೆಣ್ಣು ತವರಲ್ಲಿ ಮಗಳಾಗಿ (ಮದುವೆಯಾದ ಮೇಲೆ) ನರಕಯಾತನೆ ಅನುಭವಿಸುವುದಕ್ಕಿಂತ ಮತ್ತೆ ಗಂಡನ ಹೊಸ್ತಿಲು ತುಳಿದು ಯಮಯಾತನೆಯನ್ನಾದರೂ ಸರಿಯೇ ಅನುಭವಿಸುವ ನಿರ್ಧಾರ ತಳೆಯುವುದನ್ನು ಅವರ ಕಥೆಗಳು ಹೇಳುತ್ತವೆ. ಸೊಸೆಯಾಗಲಿ, ಮಗಳಾಗಲಿ, ತಾನು ಅನುಭವಿಸಬೇಕಾದ ಕೆಲವೊಂದು ಕಷ್ಟಗಳನ್ನು ಅವಳು ಅನಿವಾರ್ಯವಾಗಿ ಅನುಭವಿಸಲೇಬೇಕಾದ ದುಃಸ್ಥಿತಿ. ಆದರೆ ಮಗ ಸೊಸೆಗಾಗಲೀ, ಮಗಳಿಗಾಗಲೀ ಇರುವ ಯಾವುದೇ ಕಟ್ಟುಪಾಡುಗಳಿಗೆ ಬದ್ಧನಾಗದೆ ರಾಜಾರೋಷವಾಗಿ ಮೆರೆಯುತ್ತಿರುತ್ತಾನೆ. ಮನೆಯಿಂದಲೂ ಅವನಿಗೆ ಓದು-ವಿದ್ಯೆ, ಉದ್ಯೋಗ, ಭವಿಷ್ಯಕ್ಕೆ ಸಂಪೂರ್ಣ ನೆರವು ಸಹಕಾರ ಇದೆ.

ಸಾರಾ ಅಬೂಬಕ್ಕರ್‌ರವರ "ಒಂದು ಕಥೆ ಒಂದು ವ್ಯಥೆ" ಕಥೆಯಲ್ಲಿ ಕಥಾ ನಿರೂಪಕಿಯು ಶ್ರೀಮಂತ ಸೊಸೆಯು ಬೇಕೆಂದು ಆಸೆಯಿಂದ ಮಗನಿಗೆ ಮದುವೆ ಮಾಡಿರುತ್ತಾಳೆ. ಆದರೆ ಶ್ರೀಮಂತಿಕೆಯಿಂದ ಬೆಳೆದ ಹೆಣ್ಣು ಮಗಳು ಮನೆಕೆಲಸ ಮಾಡದೇ ಶಾಪಿಂಗ್ ಹೋಟೆಲ್ ಎಂದು ಕಾಲ ಕಳೆಯುತ್ತಾಳೆ. ರಾತ್ರಿ ಊಟಕ್ಕೆ ಅಡುಗೆ ಮಾಡದಿದ್ದಾಗ ಕಥಾ ನಿರೂಪಕಿಯು ಸಿಟ್ಟಿಗೆದ್ದು ಆಕೆಯನ್ನು ಪ್ರಶ್ನಿಸಿದಾಗ, ಮಗ "ಅಮ್ಮಾ ಅವಳ ವಿಷಯದಲ್ಲಿ ತಲೆಹಾಕಬೇಡ"[೩೫] ಎಂದು ಹೇಳುತ್ತಾನೆ. ಆಗ ಕಥಾ ನಿರೂಪಕಿ ಸಿಟ್ಟಿಗೆದ್ದು ಮಗನನ್ನು ಕುರಿತು ಈ ರೀತಿ ಹೇಳುತ್ತಾಳೆ. "ಹೌದಪ್ಪ ನಿನ್ನನ್ನು ಬೆಳೆಸಿ ಇಷ್ಟು ದೊಡ್ಡವನಾಗಿ ಮಾಡಿದೆನಲ್ಲ"? ಇಷ್ಟು ದಿವಸ ನಿನ್ನ ತಾಯಿಯಾಗಿದ್ದೆ, ಇನ್ನು ನಿಮ್ಮಿಬ್ಬರ ಅಡುಗೆಯವಳಾಗಿರುತ್ತೇನೆ. ಏನನ್ನಾದರೂ ಹೇಳುವ, ಕೇಳುವ ಹಕ್ಕನ್ನೇ ಕಳೆದುಕೊಂಡೆನಲ್ಲವಾ?"[೩೪]

ಎಂದು ಮಗನ ಮಾತಿನ ರೀತಿಯನ್ನು ವಿರೋಧಿಸುತ್ತಾಳೆ. ಆಗ ಮಗ ಈ ರೀತಿ ಹೇಳುತ್ತಾನೆ "ಹೌದು. ನೀನೆ ತಾನೇ ಹೇಳಿದ್ದು? ನಮ್ಮ ಅಂತಸ್ತು ಮೇಲೇರಬೇಕು ದೊಡ್ಡ ಮನೆಯ ಸೊಸೆ ಬೇಕೂಂತ?..."[೩೫] ಎಂದು ತಾಯಿಯ ತಪ್ಪನ್ನೇ ಎತ್ತಿ ತೋರುತ್ತಾನೆ. ಶ್ರೀಮಂತ ಮನೆತನದ ಸೊಸೆ ಬೇಕು ಬಡವರ ಮನೆಯ ಹುಡುಗಿಯು ಸೊಸೆಯಾಗಿ ಬೇಡ ಎನ್ನುವ ಧೋರಣೆ ಇರುವವರು ವಿಧೇಯತೆಯನ್ನು ಕೇಳಬಾರದೆಂದು ಈ ಕತೆ ಧ್ವನಿಸುತ್ತದೆ.

'ಸುಣ್ಣ' ಕತೆಯು ಒಂದು ಗಾದೆ ಮಾತಿನಿಂದ ಆಧಾರಿತವಾಗಿದೆ. 'ಒಂದು ಕಣ್ಣಿಗೆ ಬೆಣ್ಣೆ ಒಂದು ಕಣ್ಣಿಗೆ ಸುಣ್ಣ' ಎಂಬಂತೆ ಗಂಡು ಮಕ್ಕಳನ್ನು ಚೆನ್ನಾಗಿ ಓದಿಸುತ್ತಾರೆ. ಹೆಣ್ಣು ಮಕ್ಕಳೆಂದರೆ ಮದುವೆಯಾಗಿ ಬೇರೆಯವರ ಮನೆಗೆ ಹೋಗುವವರು ಎಂದು ಭಾವಿಸಿ ಅವರಿಗೆ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಅವಕಾಶ ನೀಡದೇ ಅರ್ಧದಲ್ಲೇ ಮೊಟಕು ಗೊಳಿಸುತ್ತಾರೆ. ತಂದೆ ಹಿರಿ ಮಗಳನ್ನು ಶ್ರೀಮಂತನಿಗೆ ಕೊಟ್ಟು, ಚಿಕ್ಕ ಮಗಳನ್ನು ಬಡವನಿಗೆ ಮದುವೆ ಮಾಡುತ್ತಾನೆ. ಇದರಿಂದ ನೊಂದ ಆಕೆ ತಾಯಿಯೊಡನೆ "ನೀವೆಲ್ಲರೂ ಸೇರಿ ನನ್ನನ್ನು ಹಾಳು ಬಾವಿಗೆ ನೂಕಿದಿರಲ್ಲವೇ? ನಾನಿನ್ನು ಅಲ್ಲಿಗೆ ಹೋಗುವುದಿಲ್ಲ"[೩೬] ಎಂದಾಗ ತಂದೆ "ಏನಂತಾಳೆ ನಿನ್ನ ಮಗಳು? ಗಂಡನ ಮನೆಗೆ ಹೋಗುವುದಿಲ್ಲವಂತೋ? ಮತ್ತೇನು ಮಾಡುತ್ತಾಳೆ? ಭಿಕ್ಷೆ ಬೇಡಲಿಕ್ಕೆ ಹೋಗುತ್ತಾಳೆಂತೋ? ಹೋಗಲಿ, ಹೋಗಲಿ ಏನಾದರೂ ಮಾಡಿಕೊಳ್ಳಲಿ. ಮನೆಗೆ ಬಂದಿರುವುದು ಬೇಡಂತ ಹೇಳು"[೩೭] ಎಂದು ಕಟುವಾಗಿ ಹೇಳುತ್ತಾನೆ. ಆದರೆ ದಿನಗಳು ಉರುಳಿದಂತೆ ಹೆಂಡತಿಯು ತೀರಿದ ಮೇಲೆ ತಂದೆ ಸೊಸೆಯು ನೀಡುವ ಕಾಫಿ, ತಿಂಡಿಗೆ ಕೈ ಚಾಚ ಬೇಕಾಗುತ್ತದೆ. ಕಿರಿಯ ಮಗಳ ಮನೆಗೆ ತೆರಳುವ ಆಸೆಯಿಂದ ಮಗನ ಹತ್ತಿರ ಕೇಳಿದಾಗ ಆತ ನಿನ್ನ ಅಳಿಯನ ಕಡೆಯವರು ನಿನ್ನನ್ನು ಮರುಳುಮಾಡಿ ಸಹಿ ಹಾಕಿಸಿಕೊಳ್ಳಬಹುದು. ಮುಂದೆ ನಮ್ಮ ಕಚ್ಚಾಟ ಏಕೆ? ವಿಲ್ ಮಾಡಿ ಹೋಗು ಎನ್ನುತ್ತಾನೆ. ಹಾಗೆಯೇ ಆತ ವಿಲ್ ಬರೆಯಲು ತಯಾರಾಗುತ್ತಾನೆ. ಆದರೆ ತನ್ನ ಬಡ ಮಗಳ ಚಿತ್ರ ಕಣ್ಮುಂದೆ ಬಂದರೂ ಎಚ್ಚೆತ್ತುಕೊಳ್ಳದೆ ಆಸ್ತಿಯನ್ನು ಗಂಡು ಮಕ್ಕಳಿಗೆ ಹಂಚುತ್ತಾನೆ. ಮಗಳನ್ನು ಕರೆಯಿಸಿಕೊಂಡು ಹೋಗಬೇಕು ಎಂದಾಗ ಸೊಸೆ ಈ ರೀತಿ ಹೇಳುತ್ತಾಳೆ. "ಸೊಸೆ ಎಷ್ಟೇ ಸೇವೆ ಮಾಡಿದರೂ ಅಪವಾದ ತಪ್ಪಿದ್ದಲ್ಲ. ಮಗಳು ಮಾಡಿದಂತಾಗುವುದಿಲ್ಲ. ನೀವೇ ಕರೆದುಕೊಂಡು ಹೋಗಿ"[೩೮] ಎಂದು ಹೇಳುತ್ತಾಳೆ. ತಂದೆ ಮಗಳೊಂದಿಗೆ ಹೊರಟಾಗ ಮಗ ಪತ್ರಗಳಿಗೆ ಸಹಿ ಹಾಕಿಸಿಕೊಳ್ಳುತ್ತಾನೆ. ಅದನ್ನು ಮಗಳು ಪ್ರಶ್ನಿಸಿದಾಗ ಅಪ್ಪ ಆಸ್ತಿ ವಿಲೇವಾರಿ ಪತ್ರ ಎನ್ನುತ್ತಾನೆ. ಮಗಳು ಹೆಣ್ಣು ಮಕ್ಕಳಿಗೆ ಏನೂ ಬರೆದಿಲ್ಲವೇ? ಎಂದು ಪ್ರಶ್ನಿಸುತ್ತಾಳೆ. ನಿಮಗೆಲ್ಲ ಮದುವೆ

ಮಾಡಿಕೊಟ್ಟಿಲ್ಲವೇ?"[೩೯] ಎಂದು ಮಗ ತಂಗಿಗೆ ದಬಾಯಿಸುತ್ತಾನೆ. ಮಗನ ಮಾತಿಗೆ ತಂದೆ ದನಿಗೂಡಿಸುತ್ತಾನೆ. ತಂದೆಯ ಸಣ್ಣತನ, ಅಣ್ಣನ ಕುತಂತ್ರ ಕಂಡು ಅವಳ ಮನಸ್ಸು ಕಲ್ಲಾಗತೊಡಗಿತು. "ಇಲ್ಲಣ್ಣ, ನಾನು ಇದನ್ನು ಒಪ್ಪುವ ಸಾಧ್ಯತೆಯೇ ಇಲ್ಲ. ತಂದೆಯ ಪೂರ್ತಿ ಹೊಣೆಯನ್ನು ನಾನೇ ಹೊತ್ತುಕೊಳ್ಳಬಲ್ಲ. ಅವರು ಕೊನೆಯವರೆಗೂ ನನ್ನ ಬಳಿಯೇ ಇರಲಿ. ಆದರೆ ಆಸ್ತಿಯಲ್ಲಿ ನನಗೂ ಪಾಲು ದೊರೆಯಬೇಕು. ಅದಕ್ಕಾಗಿ ನಾನು ನ್ಯಾಯಾಲಯದ ಕಟ್ಟೆ ಹತ್ತುವೆ"[೪೦] ಎಂದು ತವರು ಮನೆಯ ತಾರತಮ್ಯ ನೀತಿಗೆ ಪ್ರತಿರೋಧನ ಮಾತುಗಳನ್ನಾಡುತ್ತಾಳೆ. "ಅಪ್ಪಾ ಈ ಸ್ಥಿತಿಯಲ್ಲಿ ಸಂಪ್ರದಾಯಕ್ಕೆ ಅಂಟಿ ಕುಳಿತ ನಿಮ್ಮನ್ನು ಕಂಡು ನನಗೆ ಕನಿಕರವಾಗುತ್ತಿದೆ. ಒಂದು ಕಣ್ಣಿಗೆ ಬೆಣ್ಣೆ. ಇನ್ನೊಂದು ಕಣ್ಣಿಗೆ ಸುಣ್ಣ ಹಾಕಿದರೆ ಸುಣ್ಣ ಹಾಕಿದ ಕಣ್ಣು ಉರಿಯುತ್ತದೆ! ನಿಮ್ಮ ಸಂಪ್ರದಾಯದ ಮೂಟೆಯನ್ನು ನಿಮ್ಮ ಮಗನೆ ಹೊರಲಿ. ನಾನಿನ್ನು ಬರುತ್ತೇನೆ"[೪೧] ಎಂದು ಹೊರಟು ಬಿಡುತ್ತಾಳೆ.

ವೈದೇಹಿಯವರ 'ವರ್ತುಲ' ಕತೆಯಲ್ಲಿನ ಕುಸುಮಳ ಅತ್ತೆಯು ಮಗ ಸೊಸೆ ಹಳ್ಳಿಗೆ ಬಂದ ಸಂದರ್ಭದಲ್ಲೆಲ್ಲಾ ಸೊಸೆ ಬಂದ ಕಾರಣ ನನ್ನ ಮಗ ಪಟ್ಟಣಕ್ಕೆ ಹೋಗಿ ನೆಲೆಸುವಂತಾಯ್ತು ಎಂದು ಆಡಿಕೊಳ್ಳುತ್ತಾಳೆ. ಆದರೆ ಮಗನಿಗೆ ಸರ್ಕಾರಿ ಉದ್ಯೋಗಕ್ಕೆ ಸೇರಬೇಕೆಂಬ ಆಸೆ. ಸೊಸೆ ಹಳ್ಳಿಯಲ್ಲಿ ಇರಲು ಇಷ್ಟಪಟ್ಟಿರುತ್ತಾಳೆ. ಅತ್ತೆಯ ವ್ಯಂಗ್ಯ ಮಾತಿಗೆ ನೊಂದು ನನ್ನಿಂದ ಮಗ ಊರು ಬಿಟ್ಟ ಎಂಬ ಅಪವಾದ ಹೋಗಲಿ ಎಂದು 'ಕೆಲಸಕ್ಕೆ ರಾಜೀನಾಮೆ ಕೊಡಿ ಊರಿಗೆ ಹೋಗುವ ಅಲ್ಲೇ ಇರೋಣ' ಎಂದು ಹೇಳಿದಾಗ, ಆಗ 'ಆಸ್ತಿ ನಂಬಿಕೊಂಡ್ರೆ ಮುಂದೆ ತಣ್ಣೀರು ಬಟ್ಟೆನೇ ಗತಿ'[೪೨] ಎಂದು ಮತ್ತೆ ಊರಿಗೆ ಹೋಗಿ ನೆಲೆಸುವ ಕನಸಿಗೆ ತಣ್ಣೀರೆರಚುತ್ತಾನೆ. ಅತ್ತೆಯ ಮಗಳ ಮದುವೆ ಮದರಾಸಿನಲ್ಲಿ ಕೆಲಸದಲ್ಲಿರುವ ಹುಡುಗನ ಜೊತೆ ನಿಶ್ಚಯವಾಗುತ್ತದೆ. ಅತ್ತೆ ಬಾಯಿಂದ ಅವರ ಮನೇಲಿ ಹದಿನೈದು ಜನರಿರುವ ದೊಡ್ಡ ಸಂಸಾರ, ದೊಡ್ಡಿಯಂತೆ, ಎಂಬ ಮಾತು ಕೇಳಿ ಬರುತ್ತದೆ. ನನ್ನ ಮಗಳೇನು ಅಲ್ಲಿರಬೇಕಾ ಗಂಡನ ಜೊತೆ ತಾನೆ ಇರುತ್ತಾಳೆ ಎಂದು ಅವಿಭಕ್ತ ಕುಟುಂಬವನ್ನು ಆಡಿಕೊಂಡು ಹೇಳುತ್ತಾಳೆ.

ಮಗಳು ಮಾತ್ರ ಅತ್ತೆ ಮನೆಯಲ್ಲಿರಬಾರದು. ಆದ್ರೆ ಸೊಸೆ ಮಾತ್ರ ಅತ್ತೆ ಮನೆಯಲ್ಲಿರಬೇಕು ಎಂಬ ಧೋರಣೆ ಸೊಸೆಯ ಕಣ್ತೆರೆಯುತ್ತದೆ. "ಅತ್ತೆ ಮನೆಯಲ್ಲಿ ಇಪ್ಪತ್ತು ಜನರಿಗೆ ದಿನಾ ಮೂರು ಸೇರು ಅಕ್ಕಿ ಬೇಯಿಸುವ ಮನೆ, ಇಂಥಾ ಮನೆ ಆಗಿದ್ರೆ ಅತ್ತೆ ತನ್ನ ಮಗಳನ್ನು ಅಲ್ಲಿಗೆ ಕೊಡುತ್ತಿರಲಿಲ್ಲ. ಆದರೆ ತನ್ನ ತಂದೆ ತಾಯಿ ಮನೆ ನೋಡದೆ ಹೆಣ್ಣು ಕೊಟ್ಟಿದ್ದನ್ನು ನೆನಪಿಸಿಕೊಂಡು ಒಂದು ನಿರ್ಧಾರಕ್ಕೆ

ಬರುತ್ತಾಳೆ. ತಮ್ಮ ಮಗಳನ್ನೇ ಕೊಡಲೊಪ್ಪದ ವಾತಾವರಣದಲ್ಲಿ ನನಗೆ ನೀನು ಇರಬೇಕು ಎಂದು ಬೋಧಿಸುವ ಹಕ್ಕು ಇವರಿಗೆಲ್ಲಿದೆ? ಗಟ್ಟಿ ಕೇಳಿದರೆ ನಮಗೆ ಮನಸ್ಸಿದ್ದರೆ ನಾವು ಇರಬಹುದು ಇಲ್ಲವಾದರೆ ಇಲ್ಲ"[೬೩] ಎಂದು ಆಕೆ ಹಳ್ಳಿಗೆ ಹೋಗಿ ನೆಲೆಸುವ ನಿರ್ಧಾರದಿಂದ ಹಿಂಜರಿಯುತ್ತಾಳೆ. ಮಗಳು ಬೇರೆ ಸೊಸೆ ಬೇರೆ ಎಂಬ ತಾರತಮ್ಯದಿಂದ ಅತ್ತೆ ಸೊಸೆಯರ ನಡುವೆ ಜಗಳ ನಡೆಯುವುದು. ಮಗಳ ತಾಯಿಯಾಗಿ ಆಲೋಚಿಸುವುದನ್ನೇ ಸೊಸೆಯ ದೃಷ್ಟಿಯಿಂದ ಅದೇ ರೀತಿ ನೋಡಿದಾಗ ಅಪವಾದಗಳು ಬರುವುದಿಲ್ಲ ಎಂಬುದನ್ನು ಈ ಕಥೆ ಧ್ವನಿಸುತ್ತದೆ. ಅತ್ತೆಯ ತಾರತಮ್ಯದ ನಿಲುವಿನಿಂದಾಗಿ ಸೊಸೆ ಹಳ್ಳಿಗೆ ಹೋಗಿ ನೆಲೆಸದೇ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

## ೩.೪ ವೈಧವ್ಯ

ಸಾಮಾಜಿಕ ವ್ಯವಸ್ಥೆಯಲ್ಲಿ ವಿಧವೆಯ ಬದುಕು ಅಸಹನೀಯವಾಗಿರುತ್ತದೆ. ಗಂಡನ ಜೊತೆಯಲ್ಲಿ ಬದುಕುವಾಗಲೇ ಮಹಿಳೆ ನೂರೆಂಟು ಕಟ್ಟುಪಾಡುಗಳಿಗೆ ಒಳಗಾಗುವ ಸನ್ನಿವೇಶ ಇರುವಾಗ ಆತನ ಸಾವಿನ ನಂತರದಲ್ಲಿ ಅವಳು ಯಾರ್ಯಾರದೋ ಅಡಿಯಾಳಾಗಿ ಬದುಕಬೇಕಾದ್ದು ಅನಿವಾರ್ಯ. ಆಕೆಯ ಎಲ್ಲ ಬಗೆಯ ಬಯಕೆಗಳನ್ನು ಹತ್ತಿಕ್ಕಲು ಒತ್ತಾಯಿಸುತ್ತಾ ಅವಳನ್ನು ನಿಯಂತ್ರಿಸುತ್ತಾ ಅವಳಿಗೆ ಯಾವುದೇ ಬಗೆಯ ರಕ್ಷಣೆಯನ್ನು ನೀಡದೇ ಅವಳ ಮೇಲಿನ ದೌರ್ಜನ್ಯಕ್ಕೆ ಕುರುಡಾಗಿ ವರ್ತಿಸುತ್ತ ಬರಲಾಗಿದೆ.

ಆಕೆಯ ಹತ್ತಿರದ ಬಂಧುಗಳು ಅವಳನ್ನು ನಿಕೃಷ್ಟವಾಗಿ ಕಾಣುತ್ತಾರೆ. ಕರಾವಳಿ ಲೇಖಕಿಯರು ವಿಧುರ ಮತ್ತು ವಿಧವೆಯರನ್ನು ಕಾಣುವ ಸಮಾಜದ ತಾರತಮ್ಯ ದೃಷ್ಟಿಯನ್ನು ಕತೆಗಳಲ್ಲಿ ಸೂಕ್ಷ್ಮವಾಗಿ ತೆರೆದಿಡುತ್ತಾರೆ. ವಿಧವೆಯಂತಹ ಕ್ರೂರ ಸಂಪ್ರದಾಯಗಳು ಹೆಣ್ಣಿನ ಜೀವನದಲ್ಲಿ ಅಧೈರ್ಯ ದುರ್ಬಲತೆ, ಜಿಗುಪ್ಸೆ ಉಂಟುಮಾಡಲು ಕಾರಣವಾಗುತ್ತವೆ. ಇಂದು ಹಿಂಸಾತ್ಮಕ ಸಂಪ್ರದಾಯವನ್ನು ಮುರಿದು ಕೆಲವು ಮಹಿಳೆಯರಾದರೂ ಕುಂಕುಮ, ಬಳೆ, ಶೃಂಗಾರದ ವಸ್ತುಗಳು ಮೊದಲಿನಂತೆ ಬಳಸುತ್ತ ಆತ್ಮವಿಶ್ವಾಸದಿಂದ ಬದುಕುತ್ತಿರುವುದನ್ನು ನೋಡಿ ಅಂತಹ ಹೆಣ್ಣುಮಕ್ಕಳ ಕುಟುಂಬದವರೇ ಅವಳನ್ನು ನಿಂದಿಸುತ್ತಾರೆ. ಕೀಳಾಗಿ ನೋಡುತ್ತಾರೆ.

ವೈದೇಹಿಯವರ 'ಒಂದು ಅಪರಾಧ ತನಿಖೆ' ಕತೆಯಲ್ಲಿ ಬಡಕುಟುಂಬದಲ್ಲಿ ಬೆಳೆದ ಬಾಬಿ ಮದುವೆಯಾಗಿ ಹೋದಂದಿನಿಂದ ಗಂಡನ ಮನೆಯಲ್ಲಿ ಏನೇ ಸಮಸ್ಯೆಗಳಿದ್ದರೂ ಕೂಡ ರಾಜಿ ಮಾಡಿಕೊಂಡು ಬಾಳ್ವೆ ನಡೆಸುತ್ತಾಳೆ. ಬಾಬಿಯ ತಾಯಿ ಹುಡುಗನ ಬಗ್ಗೆ ಏನೂ ವಿಚಾರಿಸದೇ ಒಬ್ಬ ಗಂಡು ಸಿಕ್ಕಿದರೆ ಸಾಕು ಎಂಬ ರೀತಿಯಲ್ಲಿ ಮದುವೆ ಮಾಡಿಸಿ ಬಿಡುತ್ತಾಳೆ. ಅದಕ್ಕೆ ಬಾಬಿಗೆ ತಾಯಿಯ ಮೇಲೆ ಸಿಟ್ಟಿದೆ. "ಎಂತಹವನಿಗೆ ಮದುವೆ ಮಾಡಿಸಿ ಬಿಟ್ಟರು ಕಂಡಿರ ಗೌರಕ್ಕ, ಬಿಳಿ ಚರ್ಮವಿದ್ದರಾಯಿತೆ? ಅವನಿಗೆ ಮೊದಲೇ ಹೆಂಡತಿ ಇದೆಯಂತೆ. ಅದಕ್ಕೆ ಮಕ್ಕಳಿಲ್ಲವಂತೆ, ಪಿರ್ಕಿಯಂತೆ, ಅದನ್ನು ಬಿಟ್ಟು ನನ್ನನ್ನು ಮದುವೆಯಾದನಂತೆ. ಊರು ತುಂಬಾ ಮೇವು ಬೇರೆ."[೪೪] ಹೀಗೆ ಹೇಳುವ ಬಾಬಿ ಆಕೆಯ ತಾಯಿ ಮಾಡಿದ ತಪ್ಪನ್ನೇ ಇಲ್ಲಿ ಮಾಡುತ್ತಾಳೆ. ಬಾಬಿ ತನ್ನ ಮಗಳಿಗೆ ಮದುವೆ ಮಾಡಲು ನಿರ್ಧರಿಸುತ್ತಾಳೆ. ಅದನ್ನು ಗೌರಕ್ಕನೊಂದಿಗೆ ಹೇಳುತ್ತಾಳೆ. ಯಾರಿಗೆ ಮದುವೆಯೆಂದು ಕೇಳಿದಾಗ "ಇದಕ್ಕೆ ಮತ್ತೆ ಯಾರಿಗೆ?" ಹುಡುಗ ಸಿಕ್ಕಿದ್ದ, ಸಿಕ್ಕಿದಾಗ ಬಿಟ್ಟುಕೊಂಡರೆ ಮತ್ತೆ ಯಾವನು ಸಿಕ್ಕುತ್ತಾನೋ ಅಥವಾ ಸಿಕ್ಕುವುದೇ ಇಲ್ಲವೋ? ಅದಕ್ಕೆ ಮಾಡಿ ಬಿಡುವ ಎಂತ ಜವಾಬ್ದಾರಿ ಕಳೆದಂತಾಗುವುದಲ್ಲ"[೪೫] ಅದಕ್ಕೆ ಗೌರಕ್ಕ "ನಿನ್ನ ಕರ್ಮಕ್ಕೆ ಇಷ್ಟು ಬೇಗ ಮದುವೆ ಮಾಡುವುದು"[೪೬] ಎಂದು ಕೇಳಿದ್ದಕ್ಕೆ "ಹೂಂ ಈಗಲೇ ಸಮ ನಿಮಗೊತ್ತಿಲ್ಲ, ಆಮೇಲೆ ಅಂಥವ ಬೇಡ, ಇಂಥವ ಬೇಕು ಎಂತ ಕೂತುಕೊಳ್ಳುವುದು. ಕಡೆಗೆ ಯಾರನ್ನಾದರೂ ಕಟ್ಟಿಕೊಂಡು ಓಡಿ ಹೋಗುವುದು.

ಇಲ್ಲಿ ಗಂಡನ ಮನೆಯಲ್ಲಿ ಬೇಯಲಿಕ್ಕಾಗದೆ ಅರ್ಧ ಆಟಕ್ಕೆ ವಾಪಾಸ್ಸು ಬಂದವರಂತೆ ಬರುವುದು. ಮಕ್ಕಳಿಗೆ ತಲೆ ಪೂರಾ ಬೆಳೆಯುವುದರೊಳಗೆ ಮದುವೆ ಮಾಡಿ ಬಿಡಬೇಕು. ನನ್ನ ಕೇಳಿದರೆ ಬೇಗಂದರಂತೆ ಬೇಗ ಎರಡು ಮಕ್ಕಳಾಗಬೇಕು. ಮತ್ತೆಲ್ಲ ಸರಿಯಾಗುತ್ತದೆ"[೪೭] ಇಲ್ಲಿ ಬಾಬಿ ಒಂದು ಮಗಳ ತಾಯಿಯಾದಾಗ ಆಕೆ ಕೂಡ ತನ್ನ ತಾಯಿಯಂತೆ ಯೋಚಿಸಿ ಮದುವೆಮಾಡಿಸಲು ನಿರ್ಧರಿಸುತ್ತಾಳೆ. ಕುಸುಮ ಮದುವೆಯಾಗಿ ಗಂಡನನ್ನು ಬಿಟ್ಟು ತವರು ಮನೆಯಲ್ಲಿ ಇರುತ್ತಾಳೆ. ಹಾಗೇ ಕುಸುಮಳ ಜೀವನದಂತೆ ತನ್ನ ಮಗಳ ಬದುಕು ಆಗದಿರುವಂತೆ ಎಚ್ಚರಿಕೆ ವಹಿಸುತ್ತಾಳೆ. ಇಲ್ಲಿ ಬಾಬಿ ತನ್ನ ಮಗಳ ಮನಸ್ಸನ್ನು ಅರ್ಥ ಮಾಡಿಕೊಳ್ಳುವುದಿಲ್ಲ. ಇಲ್ಲಿ ಮಗಳು ಯಾವುದೇ ರೀತಿಯಲ್ಲಿ ಪ್ರತಿಕ್ರಿಯೆ ನೀಡುವುದಿಲ್ಲ. ಮಗಳ ಸುರಕ್ಷಿತ ನೆಲೆಯಲ್ಲಿ ಜೀವನವನ್ನು ಅಪೇಕ್ಷಿಸುತ್ತಲೇ ಮತ್ತೆ ಒಂದು ಸಾಂಪ್ರದಾಯಿಕ ಸುರಕ್ಷಿತ ಚೌಕಟ್ಟನ್ನು ಹೇರಿಕೊಳ್ಳುವುದಕ್ಕೆ ಮುನ್ನಡೆಯುತ್ತಾಳೆ.

ವಿಧವೆ ತಲೆಗೆ ಹೂ ಮುಡಿದು ಕೊಳ್ಳುತ್ತಾಳೆ. ಇವಳಿಗ್ಯಾಕೆ ಬೇಕು ಶೃಂಗಾರ ಎಂದು ಅವಳನ್ನು ಚುಚ್ಚಿ ಮಾತನಾಡುವರು. ಸಂಪ್ರದಾಯಗಳನ್ನು ಮುರಿಯಬಲ್ಲವರು ಮಾತ್ರ ಸ್ವತಂತ್ರವಾಗಿ ವಿಚಾರ ಮಾಡಬಲ್ಲರು. ಅನಗತ್ಯ ರೂಢಿಗಳ ಮುರಿಯುವಿಕೆ ಸ್ತ್ರೀಪ್ರಗತಿ ಹಾಗೂ ಸಮಾನತೆಯ ಮೊದಲ ಹೆಜ್ಜೆಯಾಗಿದೆ. ಹೆಣ್ಣು ಹೆಚ್ಚು ಹೆಚ್ಚು ಭಾವುಕಳಾದಷ್ಟು ಗಂಡು ಅವಳ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ಆಕೆಯನ್ನು ಶೋಷಿಸುತ್ತಾನೆ. ಮಹಿಳೆಗೆ ಶಿಕ್ಷಣ ದೊರೆತಲ್ಲಿ ಅವಳು ಆತ್ಮವಿಶ್ವಾಸದಿಂದ ಬದುಕಬಲ್ಲಳು ಎನ್ನುವುದನ್ನು ಲೇಖಕಿಯರ ಕತೆಗಳು ಸಾಬೀತುಪಡಿಸುತ್ತವೆ.

ಗಂಗಾಪಾದೇಕಲ್ ಅವರ 'ಸಂಧಿಕಾಲ' (ಕಥೆ) ಮಗಳ ಅನಿಸಿಕೆಯ ಮೂಲಕ ಬಿಚ್ಚಿಕೊಳ್ಳುತ್ತದೆ. ಹದಿನೆಂಟರ ಹರೆಯದಲ್ಲಿಯೇ ವಿಧವೆಯಾಗಿರುವ ನಿರೂಪಕಿಯ ತಾಯಿ ಮಗಳನ್ನು ಸುಶಿಕ್ಷಿತಳನ್ನಾಗಿ ಮಾಡಿ ಯೋಗ್ಯ ವರನಿಗೆ ಮದುವೆ ಮಾಡಿಕೊಟ್ಟ ಮೇಲೆ ಊರಿನ ಮೇಷ್ಟ್ರರೊಬ್ಬರ ಸ್ನೇಹಮಾಡುತ್ತಾಳೆ. ಅವರಿಬ್ಬರೂ ಮದುವೆಯಾಗಲು ನಿರ್ಧರಿಸುತ್ತಾರೆ. ವಿಷಯ ತಿಳಿದು ಬೇಸರ ಮಾಡಿಕೊಳ್ಳುವ ಮಗಳಿಗೆ ಸಮಾಜದ ಹೆದರಿಕೆ. "ಅವಳು ಈವರೆಗೆ ಅನುಭವಿಸಿದ ಕಷ್ಟ ನೆನೆದಾಗ ಅಮ್ಮನ ರೀತಿ ತಪ್ಪಲ್ಲವೆನಿಸುತ್ತದಾದರೂ ಈ ಸಮಾಜ ಅನ್ನುವುದೊಂದಿದೆಯಲ್ಲ? ಅದು ಅವಳ ವರ್ತನೆಗೆ ಛೀಮಾರಿ ಹಾಕದೇ ಉಳಿದೀತೇ?"[೪೮] ಎಂಬ ಸುನೀತಳ ಆಲೋಚನೆ ರೂಢಿಗತವಾದುದೇ ಆಗಿದೆ.

ಸಮಾಜದ ರೀತಿ ನೀತಿಗಳು ಯಾವತ್ತೂ ಒಂದೇ ಬಗೆಯಲ್ಲಿ ಇರಬೇಕಾಗಿಲ್ಲ. ಅಲ್ಲಿರುವ ಎಲ್ಲ ರೀತಿಯ ಅಸಮಾನತೆಗಳನ್ನು ಮಾನವೀಯ ನೆಲೆಯಲ್ಲಿ ಬದಲಾಯಿಸಬೇಕಾಗಿದೆ ಎನ್ನುವುದನ್ನು ಶ್ರೀಕಾಂತನ ಮುಂದಿನ ಮಾತುಗಳು ಸ್ಪಷ್ಟಪಡಿಸುತ್ತವೆ. ನೀನು ಹೇಳಿದಂತೆ "ಈ ಸಮಾಜ ಅವರ ನೆರವಿಗೆ ಬರಲಿಲ್ಲ. ಹೀಗಿದ್ದಾಗ ಸಮಾಜದ ಹಂಗು ಅವರಿಗೇಕೆ? ಸುನೀ, ಸಮಾಜ ಎನ್ನುತ್ತೀ ಅದು ಹೆದರುವವರನ್ನು ಹೆದರಿಸುತ್ತದೆ. ಆದರೆ ದೃಢವಾಗಿ ನಿಂತವರಿಗೆ ಬಾಗಿಬಿಡುತ್ತದೆ. ಇಷ್ಟೇ ಕೆಟ್ಟಕೆಲಸ ಮಾಡದಿದ್ದರಾಯಿತು. ನಾವು ಮಾಡಿದ್ದು ಸರಿ ಎಂದಾದರೆ ಇಂದಲ್ಲ ನಾಳೆ ಅದಕ್ಕೆ ಮನ್ನಣೆ ಸಿಕ್ಕಿಯೇ ಸಿಗುತ್ತದೆ"[೪೯] ಎನ್ನುತ್ತಾನೆ. ಶ್ರೀಧರ ಅತ್ತೆ ತೆಗೆದುಕೊಂಡ ನಿರ್ಧಾರಕ್ಕೆ ಸಹಮತ ಸೂಚಿಸುತ್ತಾನೆ. ಹೆಂಡತಿಯ ಕಳವಳಗಳಿಗೆ ಪರಿಹಾರ ಸೂಚಿಸಿ ಈ ರೀತಿ ಹೇಳುತ್ತಾನೆ. "ಸುನೀ, ನೀನೇಕೆ ಪದವೀಧರೆಯಾದೆ?" 'ವಿದ್ಯೆ ಎಂದರೆ ತಿಳುವಳಿಕೆ ಎಂದರ್ಥ. ನಿನ್ನಮ್ಮನ ಬವಣೆಗಳಿಗೆಲ್ಲ ಸಾಕ್ಷಿಯಾಗಿದ್ದ ನೀನು ಪದವಿ ಪಡೆದುಕೊಂಡೂ ಹೀಗಾಡುತ್ತೀಯಾ!"[೫೦] ಮನಶಾಸ್ತ್ರಜ್ಞರ ಪ್ರಕಾರ ಈ ವಯಸ್ಸಿನಲ್ಲಿಯೇ ಸಂಗಾತಿಗಳ

ಅವಶ್ಯಕತೆ ಮಾನವನಿಗೆ ಜಾಸ್ತಿಯಾಗಿರುವುದು ಎಂದು ತನ್ನ ಅತ್ತೆಯ ನಿಲುವನ್ನು ಸಮರ್ಥಿಸಿಕೊಳ್ಳುತ್ತಾ ಆಕೆಗೆ ತಾಯಿಯ ಬಗ್ಗೆ ಇದ್ದ ಕೆಟ್ಟ ಅಭಿಪ್ರಾಯ ಬದಲಾಯಿಸಿ ಸಮರ್ಥನೆಯ ಮಾತುಗಳು ಮನಸ್ಸಿಗೆ ನೆಮ್ಮದಿಯನ್ನು ನೀಡುತ್ತದೆ. ಇದು ಪುರುಷ ನೆಲೆಯ ಸ್ತ್ರೀವಾದಿ ಚಿಂತನೆಯ ಕತೆಯಾಗಿದೆ.

ಗಂಗಾ ಪಾದೇಕಲ್‌ರ "ನಮ್ಮಲ್ಲಿ ಒಬ್ಬಳು ಅಕ್ಕಣಿ" ಕತೆಯಲ್ಲಿ ಹೆಣ್ಣಿನ ಮೇಲಿನ ದೌರ್ಜನ್ಯ ಬೇರೆಲ್ಲೋ ಆಗದೇ ಕುಟುಂಬದಲ್ಲೇ ಆಗುತ್ತದೆ ಎಂಬುವುದನ್ನು ಈ ಕತೆ ಧ್ವನಿಸುತ್ತದೆ. ವಿಧವೆ ಅಕ್ಕಣಿಗೆ ಮನೆಗೆಲಸ ಮಾಡುವುದರ ಮೂಲಕ ಶೋಷಣೆ ತಪ್ಪಿದ್ದಲ್ಲ. ತನ್ನ ಮಗ ಮಾಧವ ಗಂಡನ ಮನೆಯವರಲ್ಲಿ ಆಸ್ತಿ ಬೇಡ ವಿದ್ಯಾಭ್ಯಾಸ ಕೊಡಿ ಎಂದಾಗ ಆಕೆಯ ಮನಸ್ಸು ಕಸಿವಿಸಿ ಆದರೂ ಮಗನಿಗೋಸ್ಕರ ಸುಮ್ಮನಿರುತ್ತಾಳೆ. ಮಗನ ಶಿಕ್ಷಣ ಮುಗಿದು ಉದ್ಯೋಗ ದೊರಕಿದಾಗ ಖುಷಿಪಡುತ್ತಾಳೆ. ಮಗ ಬೇರೆ ಜಾತಿಯ ಹುಡುಗಿಯನ್ನು ಮದುವೆಯಾದಾಗ ವಿರೋಧ ವ್ಯಕ್ತಪಡಿಸುತ್ತಾಳೆ.

ನಂತರ ಗಂಡನ ಮನೆಯವರು ಮನೆಯಿಂದ ತಾಯಿ ಮಗನನ್ನು ಹೊರಹಾಕಿದಾಗ ಮಾಧವನ ಜೊತೆ ಹೋಗುತ್ತಾಳೆ. ಸೊಸೆ ತನ್ನನ್ನು ಮದುವೆಯಾಗಲು ಅಕ್ಕಣಿಯ ವಿರೋಧ ಇತ್ತು ಎಂದು ಮೊದಲೇ ತಿಳಿದುದ್ದರಿಂದ, ಅಕ್ಕಣಿ ಮೇಲೆ ಅಸಮಾಧಾನ ಬೆಳೆಸಿಕೊಂಡಿದ್ದಳು. ಆಕೆ ದಿನಾ ಕಿರುಕುಳ ನೀಡಲು ಶುರು ಮಾಡಿದಳು. ಒಂದು ದಿನ ಸೊಸೆ 'ಬೀಫ್' ತಂದು ಅಡುಗೆ ಮಾಡಲು ಮುಂದಾದಾಗ ಅದಕ್ಕೆ ಅಲ್ಲಿಂದ ಹೊರಬಿದ್ದಳು. ಮಗನಿದ್ದೂ ಕಂಡವರ ಬಾಗಿಲು ಕಾಯುವ ಅಕ್ಕಣಿಯಂಥ ವೃದ್ಧೆಯರು ಎಷ್ಟೋ ಇದ್ದಾರೆ. ಹೈಕಲ್ಚರ್ ಸೊಸೈಟಿ, ಆಧುನಿಕತೆ, ಪಾಶ್ಚಾತ್ಯರ ಅನುಕರಣೆಯಿಂದ ಮನುಷ್ಯ ಸಹಜ ಭಾವನೆಗಳು ಸಮಾಧಿಯಾಗುತ್ತದೆ. ಅಕ್ಕಣಿ ತನ್ನ ಭಾವನೆಗಳನ್ನು ಮೌನವಾಗಿ ಹಾಗೂ ಕೆಲವೊಮ್ಮೆ ಪ್ರಜ್ಞಾಪೂರ್ವಕವಾಗಿ ವ್ಯಕ್ತಪಡಿಸುತ್ತಾಳೆ. ಇಲ್ಲಿ ಮಗ ಮತ್ತು ಸೊಸೆಯಿಂದ ಶೋಷಣೆಗೊಳಗಾಗುತ್ತಾಳೆ. ವಿಧವೆಯರಿಗೆ ಶೋಷಣೆ ತಪ್ಪಿದ್ದಲ್ಲ ಎಂಬುವುದನ್ನು ಈ ಕತೆ ಧ್ವನಿಸುತ್ತದೆ.

'ಕೊನೆಯ ಅಧ್ಯಾಯ' ಕಥೆಯಲ್ಲಿ ಶಾರದಮ್ಮ ಮಗ ಸೊಸೆಯ ಹಂಗಿನಲ್ಲಿ ಎಲ್ಲರಿಗೂ ಹೊರೆಯಾಗಿ ಸೊಸೆಯ ಕಟಕಿ ಮಾತುಗಳನ್ನು ಸಹಿಸಿಕೊಳ್ಳುತ್ತ ಕಾಲ ನೂಕುತ್ತಾಳೆ. ಆಕೆಗೆ ಮಗಳ ಮನೆಗೆ ಹೋದರು ಅಲ್ಲಿಯೂ ನೆಮ್ಮದಿ ಸಿಗುವುದಿಲ್ಲ. ಮಗಳ ಅತ್ತೆ ವ್ಯಂಗ್ಯದ ಮಾತುಗಳಿಂದ ಈಕೆಯನ್ನು ನೋಯಿಸುತ್ತಾಳೆ. ಗಂಡನನ್ನು ಕಳೆದುಕೊಂಡು ಶಾರದಮ್ಮ ಕೊನೆಗೆ ಅನಾಥಾಶ್ರಮಕ್ಕೆ ಸೇರುವುದೆಂದು

ನಿರ್ಧರಿಸುತ್ತಾಳೆ. ಪ್ರಸ್ತುತ ಸಮಾಜದಲ್ಲಿ ಆಧುನಿಕತೆಗೆ ಒಳಪಟ್ಟು ಯುವ ಜನಾಂಗ ವೃದ್ಧರನ್ನು ಕಡೆಗಣಿಸುವುದನ್ನು ಈ ಕಥೆ ಚಿತ್ರಿಸುತ್ತದೆ.

ಮಿತ್ರಾ ವೆಂಕಟ್ರಾಜ್‌ರವರ 'ಸೋಫಿ ಕಟ್ಟಿದ ಮನೆ' ಕಥೆಯಲ್ಲಿ ಸೋಫಿ ಮುಂಬಯಿ ನಗರದಲ್ಲಿ ಸುಂದರವಾದ ಒಂದು ಮನೆಯನ್ನು ಕಟ್ಟಿಸಿರುತ್ತಾಳೆ. ಆದರೆ ಆಕೆಯ ಮಗ ಟೋನಿ ಆ ಮನೆಯನ್ನು ಕೆಡವಿ ಆ ಜಾಗದಲ್ಲಿ ತನಗೆ ಬೇಕಾದ ಇನ್ನೊಂದು ಮನೆಯನ್ನು ಕಟ್ಟಿಸುವ ತಯಾರಿ ನಡೆಸುತ್ತಾನೆ. ತನ್ನ ಭಾವನೆಗಳಿಗೆ, ತನ್ನ ಬದುಕಿಗೆ ಒಂದು ಮೂರ್ತ ರೂಪ ಕೊಟ್ಟ, ಅರ್ಥ ತುಂಬಿದ ಸೋಫಿ ಕೈ ಕಾಲುಗಳ ಶಕ್ತಿಯನ್ನು ಕಳೆದುಕೊಂಡು ತನ್ನ ಮನೆಯಲ್ಲಿ ಏನು ನಡೆಯುತ್ತದೆ ಎಂಬುದನ್ನು ತಿಳಿಯಲಾರದ ಸ್ಥಿತಿಯಲ್ಲಿ ಇರುತ್ತಾಳೆ. ವೃದ್ಧಾಪ್ಯದಲ್ಲಿ ಭಾವನೆಗಳಿಗೆ ಬೆಲೆ ಸಿಗದೆ ಆಕೆಯನ್ನು ನಿರ್ಲಕ್ಷ್ಯ ಮಾಡುವುದನ್ನು ಕಾಣಬಹುದು. ಕಥೆಗಾರರು ಹೇಳುವ ಹಾಗೆ "ಬದಲಾವಣೆಯೇ ಜೀವನವಂತೆ, ಆ ಮನೆ ಬದಲಾಗಿ ಈ ಕಟ್ಟಡ ಅವತ್ತಿನ ನಿಷ್ಕಲ್ಮಷ ಬಾಲಕ ಹೋಗಿ ಈಗಿನ ಆಸೆ ಬುರುಕ ಮನುಷ್ಯ ಬಿದ್ದ ಗಾಯಕ್ಕೆ ಅರಸಿನ ಬೆಲ್ಲ ಒತ್ತಿ, ರಕ್ತ ಇಂಗಿಸಿದ ಸೋಫಿ ಆಂಟಿ"[೫೧] ಈಗ ಮನುಷ್ಯ ಬದುಕಿನ ಮೂಲವಾದ ನೆನಪನ್ನೇ ಕಳೆದುಕೊಂಡು ಬದುಕುವ ಜೀವಿ. ಸೋಫಿ ಅಸಹಾಯಕಳು. ಸಂಬಂಧಗಳು ಕಳಚಿಕೊಳ್ಳುವ ಅಪಾಯದ ಸ್ಥಿತಿಯನ್ನು ಆಧುನಿಕತೆಗೆ ಮುಚ್ಚಿಹಾಕುವ ಗುಣವಿದೆ.

ಅನುಪಮಾ ಪ್ರಸಾದ್‌ರವರ 'ಸೆಲೆ' ಕತೆಯಲ್ಲಿ ಗಪ್ಪತಿ ಹೆಗ್ಗಡೆಯ ಹಿಂದೆ ಒಂದು ರುದ್ರ ಭಯಾನಕ ಕತೆಯೇ ಇದೆ. ಗಪ್ಪುತಿ ಹೆಗಡೆ ಈಗ ವಾಸವಾಗಿರುವ ಮಂಗಳೂರು ಸಿಟಿಯಲ್ಲಿ ಈ ಕಥೆ ಸಿಗುವುದಿಲ್ಲ. ಅದನ್ನು ನಾವು ಹುಡುಕಬೇಕೆಂದರೆ ರಾಮು ಕಾಕ ಇರುವ ಮಲೆನಾಡಿನ ಕಾನ್ಕೊಪ್ಪಕ್ಕೇ ಹೋಗಬೇಕು. ಗಪ್ಪತಿ ಹೆಗಡೆಯ ಅಪ್ಪ ವಿಧವೆಗೆ ಹುಟ್ಟಿದವನು. ಅಜ್ಜಿ ಗಿರಿಜಾಬಾಯಿ ಹದಿಮೂರನೇ ವರ್ಷದಲ್ಲಿ ಮದುವೆಯಾಗಿ ನಾಲ್ಕು ತಿಂಗಳಿಗೇ ಗಂಡನನ್ನು ಕಳೆದುಕೊಂಡವಳು. ಅವಳ ಗಂಡನ ಮನೆಯವರು ದೊಡ್ಡ ಜಮೀನ್ದಾರರು ಊರಿನವರ ಸಮಸ್ಯೆಗಳಿಗೆ ತೀರ್ಪು ಹೇಳುವ ಮನೆತನದವರು.

ಅಂದಿನ ಕಾಲದ ಸಂಪ್ರದಾಯದಂತೆ ತಲೆ ಬೋಳಿಸಿ ಕೆಂಪು ಮಡಿ ಉಟ್ಟರೂ ಆಕೆ ಗಂಡ ಸತ್ತ ನಾಲ್ಕು ವರ್ಷದ ನಂತರ ಬಸಿರಾದಳು. ಈ ಕತೆ ಜಮೀನ್ದಾರಿ ಮನೆತನಗಳ ಒಳ ಗುಟ್ಟನ್ನು ಬಿಡಿಸುತ್ತದೆ. ಒಳಗಿನ ರಹಸ್ಯಗಳನ್ನು ಶೋಧಿಸುತ್ತದೆ. ಅಲ್ಲಿನ ಕ್ರೌರ್ಯ, ದರ್ಪ, ಅಮಾನವೀಯ ಶೋಷಣೆಯನ್ನು ಅನಾವರಣಗೊಳಿಸುತ್ತದೆ. ಆದರೂ ಈ ವಿಷವರ್ತುಲದ ಒಳಗಿನಿಂದ ಎದ್ದು ಬರುವ ವ್ಯಕ್ತಿಗಳ ಛಲವನ್ನು

ಹೋರಾಟವನ್ನು ಬದುಕಿನ ಬಗೆಗಿನ ಶ್ರದ್ಧೆಯನ್ನು ಮಹಿಳೆಯ ಹಕ್ಕಿಗಾಗಿ ಶ್ರಮಿಸುವ ಪರಿಯನ್ನು ವ್ಯಕ್ತಿಯ ಘನತೆಯನ್ನು ಹೇಳುತ್ತದೆ.

ಮಿತ್ರಾರವರ "ಒಂದು ಒಸಗೆ ಒಯ್ಯುವುದಿತ್ತು" ಕಥೆಯು ಪರಂಪರಾನುಗತವಾಗಿ ಸ್ತ್ರೀಯರಿಗೆ ಒದಗಿದ ದುಃಸ್ಥಿತಿಯನ್ನು ಧ್ವನಿಸುವ ಕಥೆಯಾಗಿದೆ. ಸಮಾಜದ ಶೋಷಣೆಗೆ ಬಲಿಯಾದ ದೌರ್ಜನ್ಯಕ್ಕೆ ಒಳಗಾದ ಹೆಣ್ಣೊಬ್ಬಳ ಕಥೆಯನ್ನು ಚಿತ್ರಿಸುತ್ತದೆ. ಪತಿಯನ್ನು ಕಳೆದುಕೊಂಡು ವಿಧವೆಯೊಬ್ಬಳು ಸಮಾಜದ ನಿಂದನೆ, ನಿಷ್ಠುರತೆಗಳನ್ನು ಎದುರಿಸಿ ಬದುಕನ್ನು ನಿಭಾಯಿಸಿದ ಚಿತ್ರಣವಿದೆ. ಜಲಜ ಚಿಕ್ಕಿಯ ಜೀವನ ವೃತ್ತಾಂತವೂ ಆಗಿದೆ. ಮದುವೆಯಾದ ಕೆಲಕಾಲದಲ್ಲೇ ಗಂಡನನ್ನು ಕಳೆದುಕೊಂಡು ಜಲಜ ಚಿಕ್ಕಿಯು ಅರಿವಿಲ್ಲದಂತೆ ತನ್ನ ಭಾವ ಅಪ್ಪಣ್ಣನಲ್ಲಿ ಅನುರಕ್ತೆಯಾಗುತ್ತಾಳೆ.

ಜಲಜ ಚಿಕ್ಕಿಯ ಕಷ್ಟ ಸುಖಗಳಿಗೆ ಆಗಾಗ ಸ್ಪಂದಿಸುತ್ತಾ ಬಂದ ಅಪ್ಪಣ್ಣ ತನ್ನ ಹೆಂಡತಿಯ ಸಾವಿನ ಅನಂತರ ಮರುಮದುವೆಯಾಗದೇ ಇದ್ದವನು. "ಆ ದೊಡ್ಡ ಮನೆಗೆಲ್ಲ ಅಪ್ಪಣ್ಣ ಚಿಕ್ಕಪ್ಪಯ್ಯ ಮತ್ತು ಜಲಜ ಚಿಕ್ಕಿ ಇಬ್ಬರೇ ಇದ್ದು, ತಂತಾನೇ ಅಲ್ಲೊಂದು ವಿಶಿಷ್ಟ ಬಾಂದವ್ಯ ಬೆಳೆದು ಬಂದೀತು"[೫೨] ಆದರೆ ಸಮಾಜದ ಕಣ್ಣಿಗೆ ಇದೊಂದು ವಿವಾಹಬಾಹಿರ, ಅನೈತಿಕ ಸಂಬಂಧವಾಗಿ ತೋರುತ್ತದೆ. ಜಲಜ ಚಿಕ್ಕಿಯ ಜೀವನೋತ್ಸಾಹವನ್ನು ಕಂಡು ಖುಷಿಪಟ್ಟು ನಿರೂಪಕಿ ನರ್ಮದೆಯೂ ಕೂಡ ನಂತರ ಸಮಾಜದ ಆಡುವ ಬಾಯಿಗಳಿಗೆ ಬಲಿಯಾಗುತ್ತಾಳೆ.

"ಸಣ್ಣಂದಿನಿಂದ ಆಡಿಬೆಳೆದ ಮನೆಯ ಕತೆಯನ್ನು ಹೊಸಬರ ಕತೆ ಕೇಳುವಂತೆ ಆಲಿಸಿದ ನರ್ಮದೆ ಚಪ್ಪೆಗಟ್ಟಿ ಹೋಗಿದ್ದಳು. ತನ್ನ ಮುಗ್ಧಮನಸ್ಸಿಗೆ ಉಲ್ಲಾಸ ತಂದಿದ್ದ ಜಲಜ ಚಿಕ್ಕಿ ಮತ್ತು ಚಿಕ್ಕಪ್ಪಯ್ಯನ ಸಂಬಂಧ ಬೇರೆಯವರ ಬಾಯಮಾತಿನಲ್ಲಿ ವಿಕೃತವಾಗಿ ಕಾಣಹತ್ತಿತ್ತು."[೫೩]

ಜಲಜ ಚಿಕ್ಕಿ ಇಷ್ಟು ಕೆಟ್ಟವಳಂತ ನನಗೆ ಗೊತ್ತೇ ಇರಲಿಲ್ಲ ಎಂದುಕೊಂಡ ಈ ಅನೈತಿಕ ಸಂಬಂಧದ ನೆರಳಿನಿಂದ ದೂರವಾಗುತ್ತಾಳೆ. ವಿಧವೆ ಹೆಣ್ಣೊಬ್ಬಳ ಪ್ರೀತಿ, ಸ್ನೇಹ, ಒಳ್ಳೆಯತನವನ್ನು ಇಲ್ಲಿ ಸಮಾಜ ಕೆಟ್ಟದೃಷ್ಟಿಯಿಂದ ನೋಡುತ್ತದೆ. ಹಾಗೆ ನೋಡಿದರೆ ಹಳ್ಳಿಯ ಮುಗ್ಧೆ ಜಲಜ ಇದಾವುದಕ್ಕೂ ತಲೆಕೆಡಿಸಿಕೊಂಡವಳಲ್ಲ. ಬದುಕಿನುದ್ದಕ್ಕೂ ಅವಳು ಕಷ್ಟನಷ್ಟಗಳನ್ನೇ ಉಂಡು ಬೆಳೆದವಳು. ಜಲಜ ಚಿಕ್ಕಿಯ ಅಪ್ಪ ಅಮ್ಮ ಸಣ್ಣಪ್ರಾಯದಲ್ಲಿ ಈ ಲೋಕವನ್ನು ತ್ಯಜಿಸಿದ್ದರಿಂದ ಅವಳು ತವರು ಮನೆಯ ಆಸರೆಯಲ್ಲಿರಲೇ ಇಲ್ಲ. ಇರಲಿಕ್ಕೇನೋ ನಾಲ್ಕು ಅಣ್ಣತಮ್ಮಂದಿರು. ಆದರೆ ಇದ್ದ ಮನೆಯನ್ನು ನಾಲ್ಕು

ಹೋಳು ಮಾಡಿ ನಾಲ್ಕು ದಿಕ್ಕಿಗೆ ಮುಖಮಾಡಿ ಸಾಗುತ್ತಿದ್ದ ಆ ಬದುಕುಗಳೆಡೆಯಲ್ಲಿ ತನ್ನ ನೆಲೆ ಹುಡುಕುವುದು ಅವಳಿಗೆ ಬೇಡವಾಗಿತ್ತು. ಹಕ್ಕಿನ ಮನೆಯಲ್ಲಿಯೇ ಇದ್ದುಕೊಂಡು ಕುಟುಂಬ ಸಮುದಾಯವನ್ನು ಏಕಾಂಗಿಯಾಗಿ ಎದುರಿಸುತ್ತಾಳೆ. ಜಲಜಳದ್ದು ಒಂದು ರೀತಿಯಲ್ಲಿ ದಿಟ್ಟ ವ್ಯಕ್ತಿತ್ವ

ಜಲಜ ಹಾಗೂ ಅಪ್ಪಣ್ಣ ಗಂಡ ಹೆಂಡತಿಯಲ್ಲದಿದ್ದರೂ ಅನ್ಯೋನ್ಯತೆಯಿಂದ ಬದುಕಿದ ರೀತಿ, ವಿಧವೆಯಾದವಳು ಮರುಮದುವೆಯಾದಲ್ಲಿ ಮಾತ್ರ ಸುಖವಾಗಿರುತ್ತಾಳೆ ಎಂಬುದನ್ನು ತಿರಸ್ಕರಿಸಿ ಯಾರ ಹಂಗೂ ಇಲ್ಲದೇ ಬದುಕಲು ಸಾಧ್ಯ ಎಂಬುದನ್ನು ಇಲ್ಲಿ ಜಲಜ ಚಿಕ್ಕಿಯ ಪಾತ್ರದ ಮೂಲಕ ಲೇಖಕರು ತೋರಿಸಿಕೊಟ್ಟಿದ್ದಾರೆ.

ಮನಸ್ಸಿಗೆ ಬಂದವರನ್ನು ಪ್ರೀತಿಸುವ ಹಕ್ಕಿನ ಮನೆಯಲ್ಲಿಯೇ ಉಳಿದು ಜೀವನ ನಡೆಸುವ ಮೂಲಕ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವ ಜಾಣ್ಮೆಯನ್ನು ಜಲಜ ಚಿಕ್ಕಿ ತೋರಿದ್ದಾಳೆ. ಜಲಜ ಅಪ್ಪಣ್ಣರ ನಿರ್ಮಲ ಪ್ರೀತಿಗೆ ಸಾಕ್ಷಿಯಾಗಿ ನಿರೂಪಕಿ ನರ್ಮದೆ ನಿಲ್ಲುತ್ತಾಳೆ. ಕಲುಷಿತಗೊಂಡ ನರ್ಮದೆಯ ಮನಸ್ಸು ತಿಳಿಯಾಗಿ ಅವರ ಒಸಗೆಯನ್ನು ಒಯ್ಯುವ ಕೆಲಸಕ್ಕೆ ಮುಂದಾಗುತ್ತಾಳೆ. ವಿಧವೆ ಜಲಜ ಚಿಕ್ಕಿ ಸಂಪ್ರದಾಯಗಳನ್ನು ಮೀರಿ ತನ್ನ ಮನಸ್ಸಿಗೆ ತೋಚಿದ ಹಾಗೆ ಜೀವನ ನಡೆಸುತ್ತಾಳೆ. ಅದೇ ರೀತಿ ಹೆಣ್ಣನ್ನು ಸಮಾಜ ಶೋಷಣೆ ಮಾಡುವುದನ್ನು ಕಾಣಬಹುದು.

ಮಿತ್ರಾ ವೆಂಕಟ್ರಾಜ್‌ರವರ "ಸೆಳೆತ" ಕತೆಯಲ್ಲಿ ಪ್ರೀತಿಯ ಗಂಡ ಸತ್ತಾಗ ತಲೆಬೋಳಿಸಿ ಕೆಂಪುಸೀರೆ ಉಡಿಸಿ ಗೃಹ ಬಂಧನದಲ್ಲಿ ಇರಿಸಿ ಸಂಪ್ರದಾಯಕ್ಕೆ ಚ್ಯುತಿ ತಟ್ಟದಂತೆ ಮಾಡಿ ಗಂಡನ ಮನೆಯವರು ಮನೆತನದ ಮಾರ್ಯಾದೆ ಉಳಿಸಿದ್ದರು. ರತ್ನತ್ತೆ ಯಜ್ಞಪಶು ವಿನಂತೆ ಎಲ್ಲವನ್ನೂ ಮೌನವಾಗಿ ಸಹಿಸಿಕೊಂಡು ಇದ್ದಳು.

ನಂತರ ತವರುಮನೆಗೆ ಬಂದು ಮರುಮದುವೆಯಾಗಿದ್ದಳು. ಕಿಟ್ಟಿ ಆಕೆಯನ್ನು ಕರೆಯಲು ಬಂದಾಗ "ನಾನಿನ್ನು ಆ ಮನೆಗೆ ಬರುತ್ತೇನೆಂತ ನೀವೇಣಿಸಿದ್ದರೆ ಅದು ನಿಮ್ಮ ತಪ್ಪು. ಅಲ್ಲಿ ಬಂದು ಅಜೀವ ಕೊಳೆಯುವುದು ನನಗೆ ಬೇಕಿಲ್ಲ. ಸಣ್ಣ ಮಾವಯ್ಯ ಬಂದಾಗ ನಾನೆಲ್ಲ ಹೇಳಿದ್ದಲ್ಲವಾ? ನಾನು ಮರು ಮದುವೆ ಯಾದ ಸುದ್ದಿಯೂ ಗೊತ್ತಾಗಿರಬೇಕಲ್ಲ. ನಿನಗೆ, ಮಧ್ಯಾಹ್ನ ನೀನು ಭೇಟಿಯಾಗಿದ್ದೆಯಲ್ಲ, ಅವರೇ ನನ್ನ ಗಂಡ ಎಂದು ಹೇಳುತ್ತಾಳೆ.[೫೪] ಸಂಪ್ರದಾಯಗಳನ್ನು ಮೀರಿ ರತ್ನತ್ತೆ ಮರುಮದುವೆ ಯಾಗುವುದರ ಮೂಲಕ ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ಅನುಪಮಾ ಪ್ರಸಾದವರ ಕಥೆಗಳೇ ವಿಭಿನ್ನ ರೀತಿಯವು. ಇವರು ಬಹು ನಾಜೂಕಿನಿಂದ ಕಥೆಗಳನ್ನು ಬೆಸೆಯುವ ಕಲೆಯುಳ್ಳವರು. ಅವರ ಕಥೆಗಳ ಪದ ಸಂಯೋಜನೆ ಪಾತ್ರಗಳ ಅಂತರಾಳದ ಭಾಷೆ ಅಪೂರ್ವವೆನಿಸಿ ಓದುಗರನ್ನು ಆಕರ್ಷಿಸುತ್ತದೆ.

"ಜೋಗತಿ ಜೋಳಿಗೆ" ಕಥೆಯಲ್ಲಿ ಬರುವ ಯಮುನಗೆ ಒಂದೆಡೆ ವಿಧವೆಯಿಂದಾದ ದೇಹದ ಹಸಿವು. ಇನ್ನೊಂದೆಡೆ ತನ್ನ ನಾಲ್ಕು ಮಕ್ಕಳು ಮತ್ತು ತನ್ನ ಹೊಟ್ಟೆಗೆ ಗಂಡನ ಮನೆಯವರು ಸರಿಯಾಗಿ ಹಾಕದ ಅನ್ನದ ಹಸಿವು. ಜೊತೆಗೆ ಮನೆಯವರ ನಿಂದನೆ. ತನ್ನಂತೆಯೇ ಹೆಣ್ಣಾಗಿಯೂ ವಿಧವೆಯಾಗಿಯೂ ಇದ್ದ ನಾದಿನಿಯಿಂದಲೂ ತನ್ನ ಗಂಡನ ಮನೆಯಲ್ಲಿ ಅವಮಾನ. ನಾದಿನಿ ದೇಹದ ಹಸಿವು ತೀರಿಸಿಕೊಳ್ಳುವುದಕ್ಕೆ ತನ್ನ ಮೈದುನನ ಜೊತೆ ಅನೈತಿಕ ಸಂಬಂಧ ಇಟ್ಟುಕೊಂಡಿರುತ್ತಾಳೆ.

ಇದು ಯಮುನೆಗೆ ಗೊತ್ತಿದ್ದರೂ ಆಕೆ ಸುಮ್ಮನಿರುತ್ತಾಳೆ. ಯಾಕೆಂದರೆ ದೇಹದ ಕಾಮನೆ ಸಹಜವಾದುದು ತನಗೂ ಅಂತಹ ಆಶೆಗಳಿವೆ ಎನ್ನುವ ವಿವೇಚನೆಯುಳ್ಳವಳು. ಯಾರಿಗೂ ವಿಷಯವನ್ನು ಬಹಿರಂಗಗೊಳಿಸುವುದಿಲ್ಲ. ಗಂಡು ಬೆಕ್ಕನ್ನು ಬಯಕೆ ತೀರಿಸಿಕೊಳ್ಳಲು ಕರೆಯುವ ಹೊರಳಾಡುವ ಹೆಣ್ಣು ಬೆಕ್ಕನ್ನು ಆಕೆ ಇದಕ್ಕೆ ಹೋಲಿಸುತ್ತಾಳೆ.

ಪ್ರಕೃತಿ ಸಹಜ ದೇಹ ಕಾಮನೆಯ ಕುರಿತು ಸಮಾಜದಲ್ಲಿ ಶಾಸ್ತ್ರ ಕಟ್ಟುಪಾಡುಗಳನ್ನು ಹಾಕಿದವರ ಕುರಿತು ಆಕೆಗೆ ಸಿಟ್ಟಿದೆಯೋ ಹೊರತು ತನ್ನನ್ನು ಅವಮಾನಿಸುತ್ತಿದ್ದರೂ ನಾದಿನಿಯ ಮೇಲೆ ಆಕೆಗೆ ಸೇಡಿಲ್ಲ. ತನಗೆ ಎಲ್ಲಾ ತಿಳಿದಿದ್ದಾಗ್ಯೂ ಮೈದುನ ಅವಮಾನಿಸಿದಾಗ ಆಕೆ ಮನೆ ತೊರೆದು ಹೊರಡುತ್ತಾಳೆಯೇ ಹೊರತು ಅವರಿಬ್ಬರ ಅನೈತಿಕ ಸಂಗತಿಯನ್ನು ಬಹಿರಂಗಪಡಿಸುವುದಿಲ್ಲ. ಹೆಣ್ಣು ಲೈಂಗಿಕತೆಯ ವಿಷಯದಲ್ಲಿ ಬಹಳ ವರ್ಷಗಳಿಂದಲೂ ನಮ್ಮ ಸಮಾಜದಲ್ಲಿ ಪರಿಧಿಯೊಳಗೆ ಬಂಧಿಸಲ್ಪಟ್ಟವಳು. ಗಂಡಿಗಿಲ್ಲದ ನಿರ್ಬಂಧ ಈ ವಿಚಾರದಲ್ಲಿ ಹೆಣ್ಣಿಗೆ ಮಾತ್ರವಿದೆ. ಹೆಣ್ಣನ್ನು ನಿಯಂತ್ರಿಸುವ ಪ್ರಬಲ ಅಸ್ತ್ರವಾಗಿ ಲೈಂಗಿಕತೆಯ ದಮನವು ಎಂದಿನಿಂದಲೂ ಬಳಕೆಯಲ್ಲಿದೆ.

ಇದೊಂದು ಮಿಥ್ಯ ವಿಚಾರ, ಲೋಕ ಇದನ್ನು ಮಿಥ್ಯವಾಗಿಯೇ ಎದುರಿಸಬೇಕೆಂಬ ನಿಲುವು ಇರುವವಳು ಯಮುನೆ. ತನ್ನ ಬದುಕಿಗಾಗಿ ಮುಂದೆ ಹೊಲಿಗೆಯ ಮೂಲಕ ಆಕೆ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಮಕ್ಕಳಿಗೆ ಭದ್ರ ಬುನಾದಿ ಹಾಕುವ ದಾರಿ ಕಂಡುಕೊಳ್ಳುತ್ತಾಳೆ. ಇಷ್ಟಾದರೂ ಸಮಾಜ ಎಂದಿಗೂ ಅವಳೆಡೆಗೆ ಒಳ್ಳೆಯ ದೃಷ್ಟಿ ತೋರದೆ ನಿರ್ಲಕ್ಷ್ಯದಿಂದ ನೋಡುತ್ತದೆ. ಆದರೂ ಅದರ ಗೋಜಿಗೆ

ಹೋಗದೆ ಆಕೆ ತನ್ನ ಸ್ವಾವಲಂಬಿ ಬದುಕಿನಿಂದ ಮನೋಸ್ಥೈರ್ಯ ತಂದುಕೊಳ್ಳುತ್ತಾಳೆ. ಇಲ್ಲಿ ತನ್ನ ಆದ ಸ್ವಾವಲಂಬನೆಯಿಂದ ಭವಿಷ್ಯ ಕಟ್ಟಿಕೊಳ್ಳುವ ನರ್ಮದೆಗೆ ಯಮುನೆಯಷ್ಟು ಧೈರ್ಯವಿರುವುದಿಲ್ಲ. ಪಾರಾಯಣ ಸಹಸ್ರನಾಮ ಓದಲು ವಿಧವೆಯರಿಗೆ ಸ್ವಾಮಿಗಳು ಅವಕಾಶ ನೀಡಿದಾಗ ಯಮುನೆ ಧಿಕ್ಕರಿಸುತ್ತಾಳೆ. ಆದರೆ ಯಮುನೆ ಹೆದರಿಕೊಂಡು ಸಹಸ್ರನಾಮ ಕೇಳ್ತೇನೆ ಅಂದಾಗ "ನಿಮ್ಮ ಪಿಟ್ಟು ಹೆದರಿಕೆ ಎಂತದ್ದಕ್ಕೆ ಅಂತ ನನಗೆ ಅರ್ಥ ಆಗುವುದಿಲ್ಲ. ನರ್ಮದತ್ತಿಗೆ ಹೊಟ್ಟೆ ಇಳಿಯಲಿಕ್ಕೆ ಅಂತ ಮಾಂಕು ಮೇರನ ಹೆಂಡತಿ ಗುದ್ದಿಕೊಡುವ ಹಸಿ ಮದ್ದನ್ನು ಕೊಟ್ಟಗೆಯಲ್ಲಿರುವ ಹೊಲಿಗೆ ಮಿಷನ್ನಿನ ಹಿಂದೆ ಅಡಗಿಸಿಟ್ಟು ಕುದ್ದ ದಿನಗಳಲ್ಲೂ ನೀವು ಮಾವಯ್ಯನ ಪೂಜೆಗೆ ಗಂಧ ತೇಯ್ದು ಕೊಡ್ತಿರಲಿಲ್ವಾ? ಸುಮ್ಮನೆ ಈ ಬಿರ್ಷತ್ತಿಗೆ ಎಂತದಕ್ಕೆ"[೫೫] ಎನ್ನುತ್ತಾಳೆ. ಯಮುನಳ ಇಲ್ಲಿ ದಿಟ್ಟ ಮನಸ್ಸಿನ ವಿಧವೆಯ ಪಾತ್ರ ಓದುಗರನ್ನು ಗಮನ ಸೆಳೆಯುತ್ತದೆ.

ಅನುಪಮಾ ಪ್ರಸಾದ್‌ರವರ "ಖಾದಿ ಅಂಗಿ" ಕಥೆಯ ಸೀತಕ್ಕನದು ಇನ್ನೊಂದು ತರಹದ ದುರಂತದ ಬದುಕು ಮದುವೆಯಾಗದೆಯೇ ವಿಧವೆಯಾಗಿ ಬಾಳಿದವಳು. ಇಳಿವಯಸ್ಸಲ್ಲೂ ತಾರುಣ್ಯದ ತನ್ನ ಪ್ರೇಮಿಯದ್ದೇ ನೆನಪಲ್ಲಿ ಬಾಳುವವಳು. ಅವಳ ಪ್ರೇಮಿ ಬಿಸಿರಕ್ತದ ನಾಡಿನ ಸ್ವಾತಂತ್ರ್ಯ ಹೋರಾಟಗಾರ. ಆಕೆಯ ಪ್ರೇಮಿ ಕೃಷ್ಣಾನಂದ ಭೂಗತ ಹೋರಾಟಗಾರನಾಗಿ ಅವಳ ಮನೆ ಸೇರಿಕೊಂಡವ.

ಅವನಿಗೂ ಅವಳ ಮೇಲೆ ಪ್ರೀತಿ. ಸೀತಕ್ಕ ಬ್ರಾಹ್ಮಣ ಸಂಪ್ರದಾಯಸ್ಥ ಹೆಣ್ಣಾದರೂ ತನ್ನ ಪ್ರೇಮದ ಉತ್ಕಟತೆಯಲ್ಲಿ ಹೆಣ್ಣು ಮನೆಯೊಳಗಿನ ಗೋಡೆಗಳಿಗಷ್ಟೇ ಸೀಮಿತ ಅನ್ನುವ ಪರಂಪರೆ ನಿಯಮಗಳನ್ನು ಉಲ್ಲಂಘಿಸಿ ದೇಶದ ತಾನು ಗಾಢವಾಗಿ ಪ್ರೀತಿಸಿದ ಕೃಷ್ಣಾನಂದ ರಾಜಕೀಯ ಹೋರಾಟದಲ್ಲಿ ಮಡಿದಾಗ ಹಿರಿಯರ ಇಚ್ಛೆಯ ವಿರುದ್ಧವಾಗಿ ನಿಂತು ವಿವಾಹವಾಗದೆ ಉಳಿದು, ಆತನ ನೆನಪಿನಲ್ಲೇ ಬದುಕು ಸವೆಸಿದ ದಿಟ್ಟತನ ಅವಳದ್ದು. ಪರಂಪರೆ ಹೆಣ್ಣಿಗೆ ವಿಧಿಸಿದ ಕಟ್ಟು ಪಾಡುಗಳನ್ನು ಧಿಕ್ಕರಿಸಿ ನಡೆಯುವ ಸೀತತ್ತೆ, ಅಂತರ್ಜಾತೀಯ ವಿವಾಹವಾದ ತನ್ನ ತಮ್ಮನ ಮಗಳನ್ನು ಬೆಂಬಲಿಸಿ ತಮ್ಮನ ದ್ವೇಷ ಕಟ್ಟಿಸಿಕೊಳ್ಳುತ್ತಾಳೆ.

ಸೀತಕ್ಕನಲ್ಲಿ ತನ್ನ ಹದಿಹರೆಯದ ಪುಳಕ, ಪ್ರೇಮದ ನೆನಪು ಹೋರಾಟದ ಆದರ್ಶ ಮತ್ತು ಕೃಷ್ಣಾನಂದನೊಡನೆ ಯಾವತ್ತೂ ಒಂದಾಗಲಾರದ ಆಕೆ ಜೀವನಪರ್ಯಂತ ವಿರಹಿಯಾಗಿದ್ದಾಳೆ. ನಾಡಿನ

ಸ್ವಾತಂತ್ರ್ಯಕ್ಕೆ ಅವಳ ತ್ಯಾಗದ ಕೊಡುಗೆಯಿದೆ. ಅವಳ ಮದುವೆಯೇ ಆಗದೆ ಶಾಶ್ವತ ವೈಧವ್ಯ ಅನುಭವಿಸುತ್ತಾಳೆ.

'ಜಾಜಿ ಗಂಧದ ಜಾಡು' ಕೂಡ ಕತೆಯಲ್ಲಿ ಹೆಣ್ಣನ್ನೇ ಮುಖ್ಯ ಪಾತ್ರವಾಗಿರಿಸಿಕೊಂಡು ಹೆಣೆಯಲಾದ ಕತೆ. 'ಖಾದಿ ಅಂಗಿ' ಕತೆಯ ಸೀತಕ್ಕನಂತೆ ಈ ಕಥೆಯ ನಾಯಕಿ ಕೂಡ ಚಿರವಿರಹಿಯಾಗಿ ಬಾಳುವಳು. ಅವಳ ಗಂಡ ಜಯಂತ ಕಲಾವಿದ. ಕ್ಯಾನ್ವಾಸಿನ ಮೇಲೆ ಚಿತ್ರ ಮೂಡಿಸುವ ಪ್ರತಿಭೆಯುಳ್ಳವ. ಆಕೆಯನ್ನು ಶಾಸ್ತ್ರೋಕ್ತವಾಗಿ ಕೈ ಹಿಡಿದ ಜಯಂತನಿಗೆ ಬೇಕಾಗಿರುವುದು ಅವಳು ತನ್ನ ವರ್ಣಚಿತ್ರಕ್ಕೆ ಮಾಡೆಲ್ ಆಗಿ ಅಷ್ಟೇ. ಅವಳ ಮೈ ಮನಗಳ ಆಸೆ ಬಯಕೆಗಳಿಗೆ ಅವನು ನಿರಾಸಕ್ತ. ಅವಳ ನೃತ್ಯಗುರು ಮಾರ್ತಾಂಡವರ್ಮನ ಬಳಿ ಆಕೆ ಪ್ರೇಮವನ್ನು ಬೇಡಿದರೂ ಅವರು ಕೂಡಾ ನಿರಾಸಕ್ತರು. ಗಂಡನಿಂದ ಪ್ರೇಮ – ಕಾಮ ಎರಡನ್ನು ಪಡೆಯದೆ ಶಾಶ್ವತ ವಿರಹಿಯಾಗಿ ಶಾಪಗ್ರಸ್ಥೆಯಂತೆ ಬಾಳುತ್ತಾಳೆ.

## ೩.೫ ವೃದ್ಧಾಪ್ಯ

ಹೆಣ್ಣಾಗಿ ಹುಟ್ಟಿ ಆಕೆ ಬೆಳೆದು ಯೌವನವನ್ನು ಕಳೆದು ಮುದುಕಿಯಗುವವರೆಗೆ ಗಂಡು ಅನುಭವಿಸದ ವಿಶಿಷ್ಟ ಅನುಭವಗಳನ್ನು ಅನುಭವಿಸುತ್ತಾಳೆ. ವಯಸ್ಸು ದಾಟಿ ಸಾಯುವ ಹಂತದವರೆಗೆ ತಲುಪಿದರೂ ತನ್ನ ಸಂಸಾರ, ಮನೆ, ಮಗನ ಮದುವೆ, ಮಗಳ ಸಂಸಾರ, ಗಂಡನ ಕ್ಷೇಮ ಈ ಕೂಪದೊಳಗೆ ಗಿರಕಿ ಹೊಡೆಯುತ್ತಾಳೆಯೇ ಹೊರತು ಎಲ್ಲಾ ಜವಾಬ್ದಾರಿಗಳನ್ನು ಕಳೆದು ಮುಪ್ಪನ್ನು ಆರಾಮದಿಂದ ಅನುಭವಿಸುವ ವೃದ್ಧೆಯರು ಬಹಳ ಕಡಿಮೆ. ವೃದ್ಧಾಪ್ಯದಲ್ಲಿ ಮಗ–ಸೊಸೆ–ಗಂಡ–ಮಕ್ಕಳ ಆಸರೆಯಲ್ಲಿ ನಲಿದಾಡುವ ವೃದ್ಧೆ ಅಥವಾ ಆರಾಮದಲ್ಲಿ ತಿಂದುಂಡು ವಿಶ್ರಾಂತಿ ಪಡೆದು ವಿಶ್ರಾಂತ ಜೀವನ ನಡೆಸುವ ವೃದ್ಧ ಬಹಳ ಅಪರೂಪ.

ಆದರೆ ವೃದ್ಧನಾದರೂ ತನ್ನ ಹಕ್ಕನ್ನು ಮನೆಯವರ ಮೇಲೆ ತನ್ನ ಮುದಿ ಹೆಂಡತಿಯ ಮೇಲೆ ಚಲಾಯಿಸುತ್ತಾನೆ. ಮುದಿತನದಲ್ಲಿ ಅಹಂಕಾರ, ದರ್ಪ, ಸರ್ವಾಧಿಕಾರ ಬಿಡದೆ ಸಾವಿನಂಚಲ್ಲೂ ಮುದಿ ಹೆಂಡತಿಗೆ ಸಹಾನುಭೂತಿ ತೋರದೆ ವೃದ್ಧ ಆರಾಮದಲ್ಲಿ ಬದುಕು ಸವೆಸುತ್ತಾನೆ.

ಸಾರಾರವರ "ಬಿಸಿಲ್ಗುದುರೆಯ ಬೆನ್ನು ಹತ್ತಿ" ಕಥೆಯ ಕಜ್ಜಮ್ಮ ಸಂಸಾರಕ್ಕಾಗಿ ಜೀವನ ಸವೆದು ಸೋತ ವೃದ್ಧೆಯಾದರೆ 'ನೀಲಿ ಚಿತ್ರದ ಕೆಂಪು ಬಣ್ಣ' ಕಥೆಯಲ್ಲಿ ರಫೀನಾಳ ತಾಯಿ ಫಾತಿಮ್ಮ ತನ್ನ ಮಗಳ ಮನೋವ್ಯಾಧಿಗಾಗಿ ತನ್ನ ಬದುಕಿನ ಭರವಸೆಯನ್ನೇ ಕಳೆದುಕೊಂಡ ವೃದ್ಧೆ. "ನಿಯಮ ನಿಯಮಗಳ ನಡುವೆ" ಕಥೆಯಲ್ಲಿ ತನ್ನ ಮಗಳ ಬದುಕನ್ನು ಸರಿದಾರಿಗೆ ತರಲೆತ್ನಿಸಿ ಮಗಳನ್ನೇ ಬಲಿಕೊಟ್ಟ ಹತಾಶೆ ತಾಯಿ. ಅವರ ಹೆಚ್ಚಿನ ಕಥೆಗಳಲ್ಲಿ ಸಾಂಸಾರಿಕ ಕಥೆಗಳೇ ಇರುವುದರಿಂದ ವೃದ್ಧೆಯ ಪಾತ್ರಗಳೇ ಹೇರಳವಾಗಿ ಗೋಚರಿಸುತ್ತವೆ ಹೊರತು ಸಂಸಾರದಲ್ಲಿ ವೃದ್ಧನ ಪಾತ್ರ ನಗಣ್ಯವೆಂದರೂ ತಪ್ಪಾಗಲಾರದು.

ಸಂಸಾರದ ನೇಗಿಲನ್ನು ಕೊನೆಯವರೆಗೂ ಹೊತ್ತು ಹೆಣಗಾಡುವವಳು ವೃದ್ಧೆ ಯಾಕೆಂದರೆ ಸ್ತ್ರೀವಾದಿ ನೆಲೆಯಿಂದ ಹೊರಹೊಮ್ಮುವ ಸಾರಾರವರ ಕಥೆಗಳು ವೃದ್ಧರಿಗಿಂತ ಹೆಚ್ಚಾಗಿ ವೃದ್ಧೆಯರ ಚಿತ್ರಣ ನೀಡುವುದು ಸಮಂಜಸವಾಗಿದೆ.

'ಯುದ್ಧ" ಕಥೆಯ ಮುದುಕಿ ಕರುಣೆ ಹೊತ್ತ ಅಂತರಂಗ ಇರುವವಳು. ಯುದ್ಧದ ಸಂದರ್ಭದಲ್ಲಿ ಗಾಯಗೊಂಡು ಮನೆಯೊಳಗೆ ಹೊಕ್ಕ ಅಪರಿಚಿತ ಡಾಕ್ಟರನನು ಆತ ಶತ್ರು ಕಡೆಯವನಾದರೂ ತನ್ನ ಮಗನ ಅಗಲುವಿಕೆಯ ನೋವನ್ನು ಸಹಿಸಿಕೊಳ್ಳುವ ಸಲುವಾಗಿ ರಾಹಿಲ್‌ನನ್ನು ಮಗನಾಗಿ ಸ್ವೀಕರಿಸಿದವಳು. ಪರಸ್ಪರ ಯುದ್ಧ ಮಾಡಿ ಎಷ್ಟೋ ಜನರ ಸಾವಿನ ಬಳಿಕ ಶತ್ರು ರಾಷ್ಟ್ರದ ನಾಯಕರು ಯುದ್ಧ ನಿಲ್ಲಿಸಿ ರಾಜಿಯಾಗಿ ಪರಸ್ಪರ ಕೈಕುಲುಕಿಕೊಂಡರೆ, ಆಕೆ ಹೀಗೆನ್ನುತ್ತಾಳೆ... ಎಷ್ಟೊ ಜನ ತಾಯಂದಿರ ಮತ್ತು ಪತ್ನಿಯರ ಹೃದಯಗಳಿಂದ ಹರಿಯುತ್ತಿದೆಯಲ್ಲಾ ನೆತ್ತರು? ಅದನ್ನು ಕಟ್ಟೆ ಕಟ್ಟಿ ನಿಲ್ಲಿಸಲು ಯಾವ ತಂತ್ರಜ್ಞರನ್ನು ಕರೆ ತರುತ್ತಾರೆ ಇವರು? ಈ ಮೂರ್ಖರ ವಿರುದ್ಧ ದಂಗೆ ಏಳುವುದೇ ಈ ನಮ್ಮ ಮುಂದಿರುವ ದಾರಿ".[೫೬] ಈ ಮಾತು ಮುದುಕಿಯ ಬಾಯಿಯಿಂದ ಹೊರಟದ್ದು ಪ್ರತಿರೋಧವೆಂಬಂತೆ ತೋರುತ್ತದೆ.

'ದೋಣಿ ಸಾಗಲಿ' ಕಥೆಯಲ್ಲಿ ಗಿರಿಜಾ ತನ್ನ ವೃದ್ಧ ಗಂಡನ ಜೋಪಾನಕ್ಕಾಗಿ ಮಗಳನ್ನು (ಪ್ರಸವದದಿನ ಹತ್ತಿರ ಬರುತ್ತಿದ್ದರೂ) ಬಿಟ್ಟು ಪಟ್ಟಣದಿಂದ ತನ್ನ ಮನೆಗೆ ಬರುತ್ತಾಳೆ. ಹೆಂಡತಿಯಿದ್ದರೂ ಪರಸ್ತ್ರೀ ಸಂಗ ಮಾಡುವ ಪುರುಷರನ್ನು ಪಟ್ಟಣದಲ್ಲಿ ಕಣ್ಣೆದುರೇ ಕಂಡ ಮಗಳು ಲತಾ ತನ್ನ ಗಂಡ ಇಂತಹ ವ್ಯವಹಾರಕ್ಕೆ ಕೈ ಹಚ್ಚಿಯಾನು ಎನ್ನುವ ಭಯದಿಂದ ಆತನೊಂದಿಗೆ ಇದ್ದು ಅಲ್ಲೇ ತನ್ನ ಹೆರಿಗೆಯಾಗಲಿ ಎಂದು ಯೋಚಿಸಿ ತನ್ನ ತಾಯಿಯನ್ನು ಅಲ್ಲಿಗೇ ಕರೆಸಿಕೊಳ್ಳುತ್ತಾಳೆ. ಆದರೆ ಗಂಡನನ್ನು

ಊರಿನಲ್ಲಿ ಬಿಟ್ಟು ಬಂದ ಗಿರಿಜಮ್ಮನಿಗೆ ತನ್ನ ಮಗಳಂತೆಯೇ ತನ್ನ ಗಂಡನ ಬಗೆಗೆ ಚಿಂತೆ ಹುಟ್ಟಿಕೊಳ್ಳುತ್ತದೆ.

ವೃದ್ಧರಾದರೂ ಪುರುಷರು ಪುರುಷರೇ ಅಲ್ಲವೇ? ಪಟ್ಟಣದಲ್ಲಿ ಇಂತಹ ದೃಶ್ಯಗಳನ್ನು ಕಂಡ ಗಿರಿಜಮ್ಮ ಆತಂಕದಿಂದ ಊರಿಗೆ ಹೊರಡುತ್ತಾಳೆ. ಹೊರಡುವಾಗ ಆಕೆ ಮಗಳೊಂದಿಗೆ ಹೇಳಿದ ಮಾತು ಇದು. ನಿನ್ನ ವಸ್ತುವನ್ನು ನೀನು ಜೋಪಾನ ಮಾಡಿದಂತೆ ನನ್ನ ವಸ್ತುವನ್ನು ನಾನಾದರೂ ಜೋಪಾನ ಮಾಡಬೇಕೋ ಬೇಡವೋ? ನಮ್ಮಂತಹ ಹೆಂಗಸರ ಬದುಕೆಲ್ಲವೂ ನಮ್ಮ ವಸ್ತುವನ್ನು ಜೋಪಾನ ಮಾಡುವುದರಲ್ಲೇ ಕಳೆದು ಹೋಗುತ್ತದೋ ಏನೋ?...[೫೭] ಗಿರಿಜಮ್ಮನ ಸಾವಧಾನದ ಪ್ರತಿರೋಧವಿದು!

ಸುಳ್ಳು ಹೇಳಿ ಮಗಳನ್ನು ಮದುವೆ ಮಾಡಿಕೊಂಡ ಅಳಿಯನನ್ನು ತರಾಟೆಗೆ ತೆಗೆದುಕೊಳ್ಳುವ, ಗಂಡ ತಪ್ಪು ದಾರಿ ಹಿಡಿದಾಗ ಸಿಡಿದೇಳುವ, ಮಗನ ಸ್ವಭಾವವನ್ನು ತಿದ್ದುವ ಹೀಗೆ ವೃದ್ಧೆಯ ಪತ್ರ ಅನೇಕ ಕಥೆಗಳಲ್ಲಿ ಪ್ರತಿರೋಧವೊಡ್ಡುವ ಸಂದರ್ಭಗಳು ಸಾರಾ ಅಬೂಬಕ್ಕರ್‌ರವರ ಕಥೆಗಳಲ್ಲಿ ಅಲ್ಲಲ್ಲಿ ಕಾಣಸಿಗುತ್ತವೆ. ವೃದ್ಧಾಪ್ಯದಲ್ಲಿ ನಿಶ್ಚಿಂತೆಯಾಗಿ ಜೀವನ ಸಾಗಿಸುವ ವೃದ್ಧೆಯರು ಬಹಳ ಅಪರೂಪ.

ಆದರೆ ವೃದ್ಧನ ಬದುಕು ಹಾಗಿಲ್ಲ. ವೃದ್ಧಾಪ್ಯದಲ್ಲೂ ಹೆಂಡತಿಯನ್ನು, ಮನೆಯನ್ನು, ಮನೆಯವರನ್ನು ಆಳುವ ಸರ್ವಾಧಿಕಾರಿ ಪಾತ್ರ 'ಬಂದಣಿಗೆ' ಕಥೆಯ ಅಬ್ದುಲ್ ಖಾದರ್. ಸೊಂಟ ಮುರಿದು ಬಿದ್ದಿದ್ದರೂ ತಾನು ಮುದುಕನೆನ್ನುವ ಸ್ವಭಾವವೇ ಅವನಲ್ಲಿ ಇಲ್ಲ. ಮುಪ್ಪಿನಲ್ಲಿಯೂ ಮಲಗಿದ್ದಲ್ಲಿಂದಲೇ ತನ್ನ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸಿ ಆಕೆಯನ್ನು ಹದ್ದುಬಸ್ತಿನಲ್ಲಿ ಇಟ್ಟು ಕೊಂಡಿರುತ್ತಾನೆ.

ವೃದ್ಧಾಪ್ಯದಲ್ಲೂ ಅವನಿಗೆಷ್ಟು ಅಹಂ ಇತ್ತೆಂದರೆ ಅವನ ಗೆಳೆಯ ಪೋಲೀಸ್ ಅಫೀಸರ್‌ನ ರೂಪದಲ್ಲಿ ಸಾರಾ ಅಬೂಬಕ್ಕರ್‌ರವರು ತಮ್ಮ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಆ ಮುದುಕನ ಪ್ರತಿಯೊಂದು ಅಹಂಕಾರದ ಹೆಜ್ಜೆಯನ್ನು ಗೆಳೆಯ ಪೋಲೀಸ್ ಆಫೀಸರನ ಮುಖಾಂತರ ಅವಲೋಕಿಸುತ್ತಾರೆ.

ಅನುಪಮಾ ಪ್ರಸಾದ್‌ರವರ "ಆತ್ಮ ಸಂಗಾತ" ಕಥೆ ವೃದ್ಧಾಪ್ಯ ಬದುಕನ್ನು ತೆರೆದಿಡುತ್ತದೆ. ಈ ಕಥೆಯ ಮುಖ್ಯ ಪಾತ್ರ ಸರೋಜಮ್ಮ ತನ್ನ ಜೀವನದಲ್ಲಿ ಒಂದಿಷ್ಟು ಕೂಡ ದಾಂಪತ್ಯ ಸುಖವನ್ನು

ಅನುಭವಿಸದೆ ಉಸಿರು ಕಟ್ಟಿಸುವ ವಾತಾವರಣದಲ್ಲಿ ಬೆಳೆದವರು. ಸರೋಜಮ್ಮನ ಗಂಡ ಕಟ್ಟಾ ಸಂಪ್ರದಾಯವಾದಿ. ಸರೋಜಮ್ಮನ ಹೆಂಗಸರಿಗೆ ಕೊಂಚವೂ ಸ್ವಾತಂತ್ರ್ಯವಿಲ್ಲದ ಪರಿಸ್ಥಿತಿ ಮಡಿ – ಮೈಲಿಗೆ ಅಂತ ಇಲ್ಲ ಸಲ್ಲದ ವಿಪರೀತ ಆಚರಣೆಗಳು ಬೇರೆ.

ಮನೆ ಮಂದಿ ಸ್ವರವೆತ್ತಿ ಮಾತನಾಡುವಂತಿಲ್ಲ, ನಗುವಂತಿಲ್ಲ ಮನಪೂರ್ತಿ ಹಾಸ್ಯ ಹರಟೆಯಲ್ಲಿ ತೊಡಗುವಂತಿಲ್ಲ. ಇಂತಹ ಸ್ವಾತಂತ್ರ್ಯರಹಿತ ಬದುಕನ್ನು ತನ್ನ ಗಂಡನ ಜತೆಯಲ್ಲಿ ಬದುಕಿದ ಸರೋಜಮ್ಮನಿಗೆ ಹಾಡುವ ಕಲೆ ರಕ್ತಗತವಾಗಿ ಬಂದರೂ ಹಾಡುವಂತಿಲ್ಲ. ಜೊತೆಗೆ ಸುಂದರವಾಗಿ ಕಸೂತಿ ಹೆಣೆಯುವುದು ಅವರಿಗೆ ತಿಳಿದಿದ್ದರೂ ಸಂಸಾರದ ಜವಾಬ್ದಾರಿಗಳ ಜೊತೆಯಲ್ಲಿ ಅದನ್ನು ಮೂಲೆ ಗುಂಪು ಮಾಡಿದ್ದರು.

ಒರಟ ಗಂಡನ ಜೊತೆ ಕಷ್ಟದ ಸಂಸಾರ ಹೂಡಿದ ಸರೋಜಮ್ಮನದು ಮೃದು ಹೃದಯ ತನ್ನ ಸೊಸೆಯಂದಿರು ತಾನು ಅನುಭವಿಸಿದ ಕಷ್ಟವನ್ನು ತನ್ನ ಮನೆಯಲ್ಲಿ ಅನುಭವಿಸಬಾರದು, ಅವರಿಗೆ ಕಷ್ಟಗಳ ಗಂಧಗಾಳಿಯೂ ತಾಗಬಾರದು ಎಂಬ ವಿಪರೀತ ಕಾಳಜಿಯಿರುವ ಅತ್ತೆಯಾಗಿ ಕಥೆಯಲ್ಲಿ ಮೂಡಿಬರುತ್ತಾರೆ. ತನ್ನ ಸೊಸೆ ಸುಮಾಳನ್ನು ತನ್ನ ಮನೆಯಲ್ಲಿ ಅತ್ಯಂತ ಜೋಪಾನದಿಂದ ಕಾಯ್ದುಕೊಂಡು ಅವಳ ಉಸಿರಿಗೆ ಉಸಿರಾಗುತ್ತಾರೆ.

ಹೀಗಿರುತ್ತಾ ಒಂದು ದಿನ ಸರೋಜಮ್ಮ ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾರೆ. ಅಂತಹ ಸಮಯದಲ್ಲಿ ಸುಮಾ (ಸೊಸೆ) ಅತ್ತೆಯನ್ನು ತನ್ನ ಮಂಗಳೂರಿನ ಮನೆಗೆ ಕರೆದೊಯ್ಯುತ್ತಾಳೆ. ಯಾವಾಗ ತನ್ನನ್ನು ಹದ್ದುಬಸ್ತಿನಲ್ಲಿಟ್ಟು ಉಸಿರುಗಟ್ಟಿಸುವ ವಾತಾವರಣಕ್ಕೆ ತನ್ನ ಗಂಡ ತಳ್ಳಿದ್ದರೋ ಆ ವಾತಾವರಣದಿಂದ ಹೊರಬಂದ ಸರೋಜಮ್ಮ ಸಂಪೂರ್ಣ ಬದಲಾಗುತ್ತಾರೆ.

ವಾರಪತ್ರಿಕೆ ಓದುವುದು, ದಿನಪತ್ರಿಕೆ ನೋಡುವುದು, ಹಾಡುವುದು, ಕಸೂತಿ ಹಾಕುವುದು ಇಂತಹ ತನ್ನ ಅಭಿರುಚಿಯ ಕೆಲಸಗಳಿಗೆ ತನ್ನನ್ನು ಹಚ್ಚಿಕೊಂಡು ತನ್ನ ದಿನಚರಿಯನ್ನೇ ಬದಲಾಯಿಸಿಕೊಂಡು ಸರೋಜಮ್ಮ ತನ್ನ ಸೊಸೆ ಸುಮಾಳಿಗೆ ಆಶ್ಚರ್ಯವನ್ನೇ ಉಂಟುಮಾಡುತ್ತಾರೆ. ನಿಜವಾಗಿಯೂ ಗಂಡನ ಜೊತೆಯಲ್ಲಿದ್ದು ದಾಂಪತ್ಯ ಸುಖ ಅನುಭವಿಸಬೇಕಿದ್ದ ಸರೋಜಮ್ಮನಿಗೆ ಆ ಸುಖವಿರುವುದಿಲ್ಲ.

ಬದಲಾಗಿ ಸ್ವಲ್ಪವಾದರೂ ನೆಮ್ಮದಿ ಕಂಡದ್ದು ವೈಧವ್ಯ ಪ್ರಾಪ್ತವಾದ ಮೇಲೆಯೇ ವಿಧವೆಯಾಗಿ ತನ್ನ ಬದುಕನ್ನು ಬೇಜಾರಿನಿಂದ ಕಳೆಯುವ ಬದಲು ಅದಕ್ಕೊಂದು ಅರ್ಥ ಕೊಡುವ ಕೆಲಸವನ್ನು ಮತ್ತು ಆ ಬದುಕನ್ನು ಪರಿಪೂರ್ಣಗೊಳಿಸುವ ಕೆಲಸವನ್ನು ಮಾಡುತ್ತಾರೆ. ತಂಬೂರಿ ಹಿಡಿದು ಮನಪೂರ್ತಿ ಹಾಡುತ್ತಾರೆ. ಇದಕ್ಕೆಲ್ಲಾ ಸೊಸೆ ಸಂಪೂರ್ಣ ಸಹಕಾರವನ್ನು ನೀಡುತ್ತಾಳೆ.

ಇನ್ನೊಂದು ಈ ಕಥೆಯ ಮುಖ್ಯ ವಿಚಾರ ಎಂದರೆ ವೃದ್ಧಾಪ್ಯದಲ್ಲಿ ಅವರಿಗೆ ಸಾಥ್ ಕೊಡುವವರು ಅವರಂತೆಯೇ ಸಮಾನ ದುಃಖಿಗಳಾದ ವೃದ್ಧ ಪಕ್ಕದ ಮನೆಯ ಚಿದಾನಂದರಾಯರು. ಈ ವ್ಯಕ್ತಿಯೂ ತನ್ನ ವೃದ್ಧಾಪ್ಯದಲ್ಲಿ ತನ್ನ ಹೆಂಡತಿಯ ಆಸರೆಯಿಂದ ದೂರವಾಗಿ ಒಂಟಿತನ ಅನುಭವಿಸಿದವರು ಸಾಮಾನ್ಯವಾಗಿ ಮನುಷ್ಯ ತನ್ನ ಮುಪ್ಪಿನ ಸಮಯಕ್ಕೆ ಬಂದಾಗ ತನ್ನವರ ಆಸರೆ, ಪ್ರೀತಿ ಆ ಸಮಯದಲ್ಲಿ ಅದರ ಅವಶ್ಯಕತೆಯೂ ಹೆಚ್ಚಿರುತ್ತದೆ.

ಆದರೆ ಇಂದು ಮುಂದುವರೆದ ಸಮಾಜ ಮುದುಕರನ್ನು ದೂರವಿಟ್ಟು ಅವರು ಒಂಟಿತನದಿಂದ ಬಳಲುವಂತೆ ಮಾಡುತ್ತಾರೆ ಅನ್ನುವ ಕಟು ಸತ್ಯವನ್ನು ಈ ಕಥೆ ಸೂಕ್ಷ್ಮವಾಗಿ ನಿರೂಪಿಸುತ್ತದೆ. ಇಲ್ಲಿ ಚಿದಾನಂದರಾಯರು ಮತ್ತು ಸರೋಜಮ್ಮ ಪರಸ್ಪರ ಮಾನಸಿಕವಾಗಿ ಹತ್ತಿರವಾಗುವುದು ಯಾವುದೇ ಅನೈತಿಕತೆಯ ಲೇಪವಿಲ್ಲದೆ ನ್ಯಾಯಯುತವಾದ ಸಂಗತಿಯೆನಿಸುತ್ತದೆ. ವೃದ್ಧಾಪ್ಯದಲ್ಲಿ ಸಂಗಾತಿಯ ಬಯಕೆ ಮಾನಸಿಕ ಗಟ್ಟಿತನಕ್ಕಾಗಿ ಎಂಬುವುದನ್ನು ಇಲ್ಲಿ ಗಮನಿಸಬಹುದು.

ವೈದೇಹಿಯವರ 'ಮಂಜಮ್ಮಜ್ಜಿ ಹೋಯ್ತಂತೆ' ಕತೆಯಲ್ಲಿ ಮಂಜಮ್ಮಜ್ಜಿ ತೀರಿಹೋದ ಸುದ್ದಿ ಕೇಳಿ ಕಥೆಯ ನಿರೂಪಕಿ ಶಾರದೆ ಪಡುವ ಮಾನಸಿಕ ತಳಮಳದೊಳದೊಂದಿಗೆ ಕಥೆ ಆರಂಭವಾಗುತ್ತದೆ. ಕಥೆಯು ಮಂಜಮ್ಮಜ್ಜಿಯ ಅತೀಂದ್ರೀಯ ಶಕ್ತಿಯಿಂದಾಗಿ ಗೌರವಕ್ಕೆ ಒಳಗಾಗುವುದಿರಲಿ ಅವಳು ಒಬ್ಬ ಮನುಷ್ಯಳು ಎಂದು ನೋಡಲಾರದೇ ಪಶುವಿಗಿಂತ ಕಡೆಯೆನಿಸಿ ದನದ ಕೊಟ್ಟಿಗೆಯಲ್ಲೇ ಬದುಕುತ್ತ ಪ್ರಾಣಬಿಡಬೇಕಾದ ಅವಸ್ಥೆಗೆ ತನ್ನ ಇಳಿವಯಸ್ಸಿನಲ್ಲಿ ಒಳಗಾಗುತ್ತಾಳೆ.

ಮಂಜಮ್ಮಜ್ಜಿಗೆ ನೆಂಟಸ್ತಿಕೆ ಬಂದಾಗ ಕಂಡಿಯಲ್ಲಿ ನೋಡಿ "ಇದೆಲ್ಲಿ ಕಪ್ಪೆ ನಮ್ಮ ಅಂಗಳಕ್ಕೆ ಬಂತೋ ಓಡಿಸಿ, ಓಡಿಸಿ, ಅದನ್ನು ಅಂತ ಬೊಬ್ಬೆ ಹೊಡೆಯಿತಂತೆ ಓಡಿ ಹೋಗಿ ತನ್ನಜ್ಜಿಯ ಮಡಿಲೊಳಗೆ ಮುಖ ಮುಚ್ಚಿಕೊಂಡು 'ಅಜ್ಜಿ ಕಪ್ಪೆರಾಜಕುಮಾರ ಅಂತಿದ್ದೆಯಲ್ಲ ಅಲ್ಲಿ ನೋಡು, ಒಂದು

ಕಪ್ಪೆಯು ರಾಜಕುಮಾರನ ವೇಷಧರಿಸಿ ಬರುತ್ತಿದೆ, ನನ್ನನ್ನು ಕೊಡಬೇಡಿ ಅಂತ ಹಠಮಾಡಿತಂತೆ.'[೫೮] ಆದರೆ ಮನೆಯವರು ಅವನೊಂದಿಗೆ ಮದುವೆ ಮಾಡಿಬಿಡುತ್ತಾರೆ.

ಮಂಜಮ್ಮಜ್ಜಿ ಮದುವೆಯಾದ ನಂತರ ಅವಳು ತನ್ನ ಗಂಡನ ಜೊತೆ ಕಳೆದದ್ದು ಒಂದು ರಾತ್ರಿ ಮಾತ್ರ. ಗಂಡ ಬಿಟ್ಟು ಬಂದ ಮಂಜಮ್ಮಜ್ಜಿ ಹೀಗೆ ಹೇಳುತ್ತಾಳೆ. "ತಾನು ಬೆಳಗೆದ್ದು ನೋಡುತ್ತೇನೆ, ಅರರೆ, ಹಿಂದಿನ ರಾತ್ರಿ ಕಂಡದ್ದೆ ಬೇರೆ, ಈಗನೇ ಬೇರೆ. ಇದೆಲ್ಲ ಹೇಗೆ? ಅರ್ಥವೇ ಆಗಲಿಲ್ಲ ತನಗೆ. ಮತ್ತೆ ಮತ್ತೆ ನೋಡಿದೆ; ಗಂಡ ಮದುಮಗ ಸ್ವಸ್ಥ ಉಸಿರಾಡುತ್ತಿದ್ದ. ಎಂಥಾ ಸುಂದರಾಂಗ! ರಾತ್ರಿಯಷ್ಟೆ ಕಪ್ಪೆಯಂತಿದ್ದವ ಹಾಗೆ ಕಂಡವ! ಕಿರುಚುವಂತಾಯ್ತು ತನಗೆ. ಆತನಿಗೆ ಎಚ್ಚರವಾದೀತೆಂಬ ಭಯ ಬಾಯಿ ಕಟ್ಟಿಸಿತು"[೫೯] ಎನ್ನುತ್ತಾಳೆ. ಮದುವೆಯಾದ ಗಂಡನಿಂದ ದೂರವಿದ್ದ ಮಂಜಮ್ಮಜ್ಜಿ ಒಂದು ಮಾದರಿಯ ಪ್ರತಿಭಟನಾಕಾರಳಂತೆ ಕಾಣುತ್ತಾಳೆ.

ಮಂಜಮ್ಮಜ್ಜಿ ತಾನಿದ್ದ ಮನೆಯವರ ಬಿಟ್ಟಿ ಚಾಕರಿ ಮಾಡಿಕೊಂಡು ತನ್ನ ದೇಹಕ್ಕಾಗಲೀ, ಜೀವಕ್ಕಾಗಲೀ ಯಾವ ಹಸಿವು ಅಥವಾ ಕಾಮನೆಯೂ ಹತ್ತಿರವು ಸುಳಿಯದು ಎಂಬಂತೆ ಒಣಗಿಕೊಂಡು, ವಟ ವಟ ಮಾತಾಡಿಕೊಂಡು ಇದ್ದವಳು. ವೃದ್ಧೆಯನ್ನು ಮನೆಕೆಲಸಕ್ಕೆ ಬಳಸಿಕೊಂಡು ಕೊನೆಗೆ ಆಕೆಯ ಬಗ್ಗೆ ಯಾವ ಕನಿಕರ ಇಲ್ಲದ ರೀತಿಯಲ್ಲಿ ವರ್ತಿಸುತ್ತಾರೆ.

'ಮರಗಿಡಬಳ್ಳಿ' ಕಥೆಯಲ್ಲಿ ಮಂದಕ್ಕಳೆಂಬ ವೃದ್ಧೆಯ ಅಸಾಯಕ ಸ್ಥಿತಿ ಕಾಣಿಸಿಕೊಳ್ಳುತ್ತದೆ. ಚಿಕ್ಕಂದಿನಲ್ಲಿ ಪ್ರೀತಿಯಿಂದ ಸಾಕಿದ ಮಕ್ಕಳು ವೃದ್ಧಾಪ್ಯದಲ್ಲಿ ಈಕೆಯನ್ನು ಕಡೆಗಣಿಸುತ್ತಾರೆ. ಆಕೆಯ ಸೇವೆಗೆ ದಾದಿಯೊಬ್ಬಳನ್ನು ನೇಮಿಸಲು ನಿರ್ಧರಿಸುವುದು ಅತೀವ ನೋವನ್ನು ಉಂಟು ಮಾಡುತ್ತದೆ. ಸಾವು ಬದುಕಿನ ಹೋರಾಟದಲ್ಲಿ ಒದ್ದಾಡುತ್ತಿರುವ ಮಂದಕ್ಕನಿಗೆ ಮಗಳು ಶಾರದ ಬರುತ್ತಾಳೆ ಎನ್ನುವ ಸುದ್ದಿಯಾಗಲಿ ಮಗ ಸೂರ್ಯಮಣಿ ಬರುವ ಸುದ್ಧಿಯಾಗಲಿ ಅತೀವ ಸಂತೋಷವನ್ನು ಉಂಟು ಮಾಡುವುದು ಹೆತ್ತ ಕರುಳಿನ ಮಿಡಿತವಾಗಿದೆ. ಒಳಗಡೆ ಶಾರದೆಯ ನಗು ಕೇಳಿಸಿಕೊಂಡ ನಂತರ ಮಂದಕ್ಕ "ಅಮ್ಮನಿಂದಲೆ ಜೀವ ತೆರುವಂತಿದ್ದ ಶಾರದ ಅವಳ ಅಮ್ಮ ಇಲ್ಲಿ ಹೀಗೆ ನಿಶ್ಚೇಷ್ಟಿತಳಾಗಿ ಬಿದ್ದಿರುವಾಗ ನಗ ಬಲ್ಲಳೇ . . .[೬೦] ಎಂಬ ಮಾತು ಹೆತ್ತ ತಾಯಿಗೆ ತುಂಬಾ ನೋವು ಉಂಟು ಮಾಡುತ್ತದೆ.

ಕಪ್ಪೆಯು ರಾಜಕುಮಾರನ ವೇಷಧರಿಸಿ ಬರುತ್ತಿದೆ, ನನ್ನನ್ನು ಕೊಡಬೇಡಿ ಅಂತ ಹಠಮಾಡಿತಂತೆ.'[೫೮] ಆದರೆ ಮನೆಯವರು ಅವನೊಂದಿಗೆ ಮದುವೆ ಮಾಡಿಬಿಡುತ್ತಾರೆ.

ಮಂಜಮ್ಮಜ್ಜಿ ಮದುವೆಯಾದ ನಂತರ ಅವಳು ತನ್ನ ಗಂಡನ ಜೊತೆ ಕಳೆದದ್ದು ಒಂದು ರಾತ್ರಿ ಮಾತ್ರ. ಗಂಡ ಬಿಟ್ಟು ಬಂದ ಮಂಜಮ್ಮಜ್ಜಿ ಹೀಗೆ ಹೇಳುತ್ತಾಳೆ. "ತಾನು ಬೆಳಗೆದ್ದು ನೋಡುತ್ತೇನೆ, ಅರರೆ, ಹಿಂದಿನ ರಾತ್ರಿ ಕಂಡದ್ದೆ ಬೇರೆ, ಈಗನೇ ಬೇರೆ. ಇದೆಲ್ಲ ಹೇಗೆ? ಅರ್ಥವೇ ಆಗಲಿಲ್ಲ ತನಗೆ. ಮತ್ತೆ ಮತ್ತೆ ನೋಡಿದೆ; ಗಂಡ ಮದುಮಗ ಸ್ವಸ್ಥ ಉಸಿರಾಡುತ್ತಿದ್ದ. ಎಂಥಾ ಸುಂದರಾಂಗ! ರಾತ್ರಿಯಷ್ಟೆ ಕಪ್ಪೆಯಂತಿದ್ದವ ಹಾಗೆ ಕಂಡವ! ಕಿರುಚುವಂತಾಯ್ತು ತನಗೆ. ಆತನಿಗೆ ಎಚ್ಚರವಾದೀತೆಂಬ ಭಯ ಬಾಯಿ ಕಟ್ಟಿಸಿತು"[೫೯] ಎನ್ನುತ್ತಾಳೆ. ಮದುವೆಯಾದ ಗಂಡನಿಂದ ದೂರವಿದ್ದ ಮಂಜಮ್ಮಜ್ಜಿ ಒಂದು ಮಾದರಿಯ ಪ್ರತಿಭಟನಾಕಾರಳಂತೆ ಕಾಣುತ್ತಾಳೆ.

ಮಂಜಮ್ಮಜ್ಜಿ ತಾನಿದ್ದ ಮನೆಯವರ ಬಿಟ್ಟಿ ಚಾಕರಿ ಮಾಡಿಕೊಂಡು ತನ್ನ ದೇಹಕ್ಕಾಗಲೀ, ಜೀವಕ್ಕಾಗಲೀ ಯಾವ ಹಸಿವು ಅಥವಾ ಕಾಮನೆಯೂ ಹತ್ತಿರವು ಸುಳಿಯದು ಎಂಬಂತೆ ಒಣಗಿಕೊಂಡು, ವಟ ವಟ ಮಾತಾಡಿಕೊಂಡು ಇದ್ದವಳು. ವೃದ್ಧೆಯನ್ನು ಮನೆಕೆಲಸಕ್ಕೆ ಬಳಸಿಕೊಂಡು ಕೊನೆಗೆ ಆಕೆಯ ಬಗ್ಗೆ ಯಾವ ಕನಿಕರ ಇಲ್ಲದ ರೀತಿಯಲ್ಲಿ ವರ್ತಿಸುತ್ತಾರೆ.

'ಮರಗಿಡಬಳ್ಳಿ' ಕಥೆಯಲ್ಲಿ ಮಂದಕ್ಕಳೆಂಬ ವೃದ್ಧೆಯ ಅಸಾಯಕ ಸ್ಥಿತಿ ಕಾಣಿಸಿಕೊಳ್ಳುತ್ತದೆ. ಚಿಕ್ಕಂದಿನಲ್ಲಿ ಪ್ರೀತಿಯಿಂದ ಸಾಕಿದ ಮಕ್ಕಳು ವೃದ್ಧಾಪ್ಯದಲ್ಲಿ ಈಕೆಯನ್ನು ಕಡೆಗಣಿಸುತ್ತಾರೆ. ಆಕೆಯ ಸೇವೆಗೆ ದಾದಿಯೊಬ್ಬಳನ್ನು ನೇಮಿಸಲು ನಿರ್ಧರಿಸುವುದು ಅತೀವ ನೋವನ್ನು ಉಂಟು ಮಾಡುತ್ತದೆ. ಸಾವು ಬದುಕಿನ ಹೋರಾಟದಲ್ಲಿ ಒದ್ದಾಡುತ್ತಿರುವ ಮಂದಕ್ಕನಿಗೆ ಮಗಳು ಶಾರದ ಬರುತ್ತಾಳೆ ಎನ್ನುವ ಸುದ್ದಿಯಾಗಲಿ ಮಗ ಸೂರ್ಯಮಣಿ ಬರುವ ಸುದ್ಧಿಯಾಗಲಿ ಅತೀವ ಸಂತೋಷವನ್ನು ಉಂಟು ಮಾಡುವುದು ಹೆತ್ತ ಕರುಳಿನ ಮಿಡಿತವಾಗಿದೆ. ಒಳಗಡೆ ಶಾರದೆಯ ನಗು ಕೇಳಿಸಿಕೊಂಡ ನಂತರ ಮಂದಕ್ಕ "ಅಮ್ಮನಿಂದಲೆ ಜೀವ ತೆರುವಂತಿದ್ದ ಶಾರದ ಅವಳ ಅಮ್ಮ ಇಲ್ಲಿ ಹೀಗೆ ನಿಶ್ಚೇಷ್ಟಿತಳಾಗಿ ಬಿದ್ದಿರುವಾಗ ನಗ ಬಲ್ಲಳೇ . . .[೬೦] ಎಂಬ ಮಾತು ಹೆತ್ತ ತಾಯಿಗೆ ತುಂಬಾ ನೋವು ಉಂಟು ಮಾಡುತ್ತದೆ.

## ೩.೬ ಲೈಂಗಿಕತೆ

ಭಾರತದಲ್ಲಿ ಶೀಲ, ಪಾತಿವ್ರತ್ಯ ಮೊದಲಾದ ಮೌಲ್ಯಗಳು ಮಹಿಳೆಯರನ್ನು ನಿಯಂತ್ರಿಸುವುದನ್ನು ನೋಡುತ್ತೇವೆ. ಸ್ತ್ರೀಯರನ್ನು ಹತೋಟಿಯಲ್ಲಿಡಲು ಪುರುಷ ವ್ಯವಸ್ಥೆಯು ಬಳಸಿದ ಅತ್ಯಂತ ಹರಿತವಾದ ಆಯುಧವೆಂದರೆ ಲೈಂಗಿಕ ವಿಷಯ. ಸ್ತ್ರೀ ಲೈಂಗಿಕತೆಯ ವಿಷಯವು ಸ್ತ್ರೀ ಪುರುಷರ ಸಂಬಂಧದ ಮೂಲದಲ್ಲಿದೆ. ಹಾಗೂ ಕುಟುಂಬ ಸಮಾಜ ರಚನೆ ಇವುಗಳ ಕೇಂದ್ರದಲ್ಲಿದೆ. ಪಿತೃಪ್ರಧಾನ ವ್ಯವಸ್ಥೆಯು ತನಗೆ ಬೇಕಾದಾಗ ಸ್ತ್ರೀ ಲೈಂಗಿಕತೆಗೆ ಅನುಮೋದನೆ ನೀಡಿ ಬೇಡದಿದ್ದಾಗ ಅದನ್ನು ನಿರಾಕರಣೆ ಪ್ರಯತ್ನ ಮಾಡುತ್ತದೆ. ಹೆರುವ ಜೈವಿಕ ಕ್ರಿಯೆಯ ಮೇಲೆ ಪಿತೃಪ್ರಧಾನ ವ್ಯವಸ್ಥೆಯು ಶಿಶುಪಾಲನೆ, ಪೋಷಣೆಯನ್ನು ಸ್ತ್ರೀಯ ಹಣೆಗೆ ಕಟ್ಟಿ ತಾಯ್ತನವನ್ನು ವೈಭವೀಕರಿಸುತ್ತದೆ.

ಹೆಣ್ಣನ್ನು ಪುರುಷ ಒಂದಲ್ಲ ಒಂದು ರೀತಿಯಲ್ಲಿ ಶೋಷಣೆ ಮಾಡುತ್ತಲೇ ಇರುತ್ತಾನೆ. ಹೆಣ್ಣು ಲೈಂಗಿಕ ಸಮಸ್ಯೆಗೆ ಒಳಗಾಗಲು ಮುಖ್ಯವಾದ ಕಾರಣಗಳೆಂದರೆ ನಂಬಿಕೆ, ಬೇಜವಾಬ್ದಾರಿತನ, ಅಸಹಾಯಕತೆ, ಬದುಕಿನ ಅತಂತ್ರ ಸ್ಥಿತಿ ಗಳಾಗಿರುತ್ತವೆ.

ವೈದೇಹಿಯವರು 'ಅಮ್ಮಚ್ಚಿಯೆಂಬ ನೆನಪು' ಕತೆಯಲ್ಲಿ ಸಂಬಂಧಿಕ ವೆಂಕಪ್ಪಯ್ಯ ಅಮ್ಮಚ್ಚಿಯ ಶೀಲವನ್ನು ಕೆಡಿಸುವ ಮೂಲಕ ತನ್ನವಳಾಗಿ ಮಾಡುತ್ತಾನೆ. ಅಮ್ಮಚ್ಚಿಯ ಉಡುಗೆ ತೊಡುಗೆಗಳಲ್ಲೂ ನಿರ್ಬಂಧಗಳನ್ನು ಹೇರುತ್ತಾನೆ. ಇದರಿಂದ ಕುಪಿತಳಾದ ಅಮ್ಮಚ್ಚಿ ವೆಂಕಪ್ಪಯ್ಯನ ಶರ್ಟ್‌ಗುಂಡಿಗಳನ್ನು ತೆಗೆದು ಹಿಂಬದಿಗೆ ಜೋಡಿಸಿ ಹೊಲೆಯುತ್ತಾಳೆ. ಈ ರೀತಿಯ ತಿರುಗೇಟನ್ನು ಸಹಿಸದ ಆತ ಅಮ್ಮಚ್ಚಿಯನ್ನು ತನ್ನ ಹಿಡಿತಕ್ಕೆ ತರಲು ಈ ಬಗೆಯಲ್ಲಿ ಲೈಂಗಿಕವಾಗಿ ಶೋಷಣೆ ಮಾಡಿರುವುದು ಚಿತ್ರಿತವಾಗಿದೆ.

ಅವಳತ್ತ ನುಗ್ಗಿ, ಅವಳ ಜಡೆ ಬುಡಕ್ಕೆ ಕೈ ಹಾಕಿ ದರದರನೆ ಎಳೆಯುತ್ತಾ ಸೀದಾ ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡ. ಅಯ್ಯೋ ಅಯ್ಯೋ "ಏನಪ್ಪಾ ಇದೆಲ್ಲಾ.... ನಂಗೆ ಕಾಂಬಗೇ ಆತಿಲ್ಲ. ಯೇ ಯಾಕಪ್ಪಯ್ಯ ಬಾಗಿಲು ತೆರೆ... ಬಾಗಿಲು ತೆರೆ... ಯಾಕಪ್ಪಯ್ಯ ಅಯ್ಯೋ ಮಾರಿ ಹೆಣ್ಣೇ..[೬೧] ಎಂದು ಎದೆ ಒಡೆದುಕೊಂಡು ಸೀತಮ್ಮ ಕೂಗಿಕೊಂಡರು. ತನಗೆ ದಕ್ಕಬೇಕಾದ ಹೆಣ್ಣು ತನ್ನ ನಿಯಂತ್ರಣದಿಂದ ತಪ್ಪಿ ಹೋಗುತ್ತಾಳೆ ಎಂದು ತಿಳಿದ ಕ್ಷಣ ಪುರುಷ ಮಾಡುವ ಕ್ರೌರ್ಯ ಹೆಣ್ಣಿನ ಶೀಲವನ್ನು ಕೆಡಿಸುವುದು.

ಆಕೆ ಎಷ್ಟು ಪ್ರತಿರೋಧ ತೋರಿದರೂ ಅದು ವಿಫಲವಾಗುತ್ತದೆ. ಪುರುಷ ಲೈಂಗಿಕವಾಗಿ ಶೋಷಣೆ ಮಾಡುತ್ತಿರುತ್ತಾನೆ.

ಗಂಗಾಪಾದೇಕಲ್‌ರ "ಹಸಿವು"ಯಲ್ಲಿ ಹೆಣ್ಣನ್ನು ಭೋಗವಸ್ತುವನ್ನಾಗಿ ಕೇವಲ ಕಾಮದ ಬೊಂಬೆಯನ್ನಾಗಿಸಿ ಮಾಡಿ ದೌರ್ಜನ್ಯ ಹಾಗೂ ಶೋಷಣೆಗೆ ಗಂಡು ಕಾರಣನಾಗುತ್ತಾನೆ. ಬಡತನದಿಂದಾಗಿ ಅಕ್ಕನ ಮನೆಯಲ್ಲಿ ಸಹಾಯ ಕೇಳುವ ಧೈರ್ಯ ಮಾಡದೇ ತಾನು ದುಡಿದ ಮನೆಗೇ ಕಮಲಿಯನ್ನು ಕಳುಹಿಸಿದ್ದಳು. ಕಮಲಿ ರಾಯರ ಮನೆಗೆ ಬಂದಾಗ ರಂಗಪ್ಪ ಎದುರಾಗಿ "ಜೋರು ಮಾಡುತ್ತಾನೆ. ಆಗ ಆಕೆ "ಅವ್ವಾಗೆ ಏಳಾಕೇ ಆಗಕಿಲ್ಲ. ಇಪ್ರಿತ ಜರ"[೬೨] ಹೇಳುತ್ತಾ ಹಸಿವು ಅವ್ವನ ಕಾಯಿಲೆಯಿಂದ ಉಂಟಾಗಿದ್ದ ವ್ಯಥೆಯೂ ಇಮ್ಮಡಿಯಾಗಿ ಜೋರಾಗಿ ಬಿಕ್ಕಳಿಸಲಾರಂಭಿಸಿದಳು.

ಆಕೆಯನ್ನು ಸಮಾಧಾನ ಪಡಿಸಿ ರಂಗಪ್ಪ "ಅಳ್ಬೇಡ ಒಳಗೆ ಏನಾದರೂ ಇದೆಯೂ ನೋಡ್ತೀನಿ. ಕಣ್ಣು ಮೂಗು ಒರೆಸ್ಕೋ, ಕಮಲಿ ಅಷ್ಟು ಕೇಳುತ್ತಲೂ ಅಳು ನಿಲ್ಲಿಸಿ, ತನಗೆ ತಿನ್ನಲೀಕ್ಕೇನಾದರೂ ಸಿಗುತ್ತದೆ."[೬೩] ಆ ಮಾತು ಮಂತ್ರವಾಗಿ ಕೆಲಸ ಮಾಡಿತ್ತು. ಒಳಗೆ ಹೋದ ರಂಗಪ್ಪ ಬೆಳಗಿನ ಚಪಾತಿಯನ್ನು ಎತ್ತಿಕೊಳ್ಳುತ್ತಲೇ, ಕಿಟಕಿಯಿಂದ ಅವಳೆಡೆಗೆ ನೋಡಿದ, ಕೈಯಲ್ಲಿ ಕರವಸ್ತ್ರವೇನೂ ಇಲ್ಲದ ಆ ಮುಗ್ದೆ ತನ್ನ ಲಂಗದ ಅಂಚನ್ನೇ ಎತ್ತಿ ಕಣ್ಣು ಒರೆಸಿಕೊಳ್ಳುತ್ತಿದ್ದರು. ಎತ್ತಿದ ಲಂಗದ ಅಡಿಯಲ್ಲಿ ಕಂಡ ಆ ಸದೃಢ ಬಿಳೀ ಕಾಲುಗಳು ರಂಗಪ್ಪನ ಹಸಿವನ್ನು ಜಾಸ್ತಿ ಮಾಡಿತು.

ಕಮಲಿಗೆ ಚಪಾತಿಯನ್ನು ಕೊಟ್ಟು ನಾಳೇನೂ ಈ ಹೊತ್ಗೆ ಬಾ ತಿಂಡಿ ಕೊಡುತ್ತೇನೆ ಎಂದು ಹೇಳುತ್ತಾನೆ. ತಮ್ಮಂದಿರಿಗೆ ತಿಂಡಿ ತಿನ್ನಿಸುತ್ತಾ 'ನಾ ನಾಳೀಕೆ ಓಯ್ತೀನಿ'[೬೪] ಎಂಬ ಉತ್ಸಾಹದಿಂದ ವಿವರಿಸುತ್ತಿದ್ದ ಆ ಹಸುಳೆಗೆ ಒಂದಿಲ್ಲೊಂದು ದಿನ ತಾನವನ ಹಸಿವಿಗೆ ಆಹಾರವಾದೇನೆಂಬ ಕಲ್ಪನೆ ಕೂಡಾ ಹೊಳೆದಿರಲಿಲ್ಲ. ಈ ಕತೆ ಪುರುಷನ 'ಹಸಿವು' ಯಾವ ಮಟ್ಟದ್ದು ಎಂಬುವುದನ್ನು ಧ್ವನಿಸುತ್ತದೆ. ಪುರುಷ ಹೆಣ್ಣು ಮಗುವನ್ನು ಕೂಡ ಕಾಮದಾಸೆಯಿಂದ ನೋಡುವುದನ್ನು ಚಿತ್ರಿಸುತ್ತದೆ.

ಗಂಗಾ ಪಾದೇಕಲ್‌ರವರ "ಹದ್ದುಗಳು" ಕಥೆ ಸರ್ಕಾರಿ ಆಸ್ಪತ್ರೆಯೊಳಗಿನ ಕರಾಳ ಮುಖಗಳ ಪರಿಚಯ ಮಾಡಿಕೊಡುತ್ತದೆ. ಬಡರೋಗಿಗಳ ಪಾಲಿಗೆ ದೇವರೇ ಆಗಿ ಕಾಣಬೇಕಾದ ವೈದ್ಯರು ನರ್ಸ್‌ಗಳ ರಾಕ್ಷಸೀ ನಡವಳಿಕೆ ಮನಕರಗುವಂತೆ ಚಿತ್ರಿತವಾಗಿದೆ. ಈ ಕಥೆಯಲ್ಲಿ ಬರುವ ಆಕೆ ಗಂಡನ ಜೀವ ಉಳಿಸಿಕೊಳ್ಳಲು ಹೋಗಿ ತರುಣ ವೈದ್ಯನೊಬ್ಬನ ಕಾಮ ಪಿಪಾಸೆಯನ್ನು ತಣಿಸುವ ವಸ್ತುವಾಗಬೇಕಾಗುತ್ತದೆ

ಬಡವರ ಜೀವಗಳಿಗೆ ಬೆಲೆಯಿಲ್ಲ. ಆಸ್ಪತ್ರೆಯ ನರಕ ಸದೃಶ ಒದ್ದಾಟಕ್ಕಿಂತ ಸಾವೇ ಮೇಲು ಎಂಬುದನ್ನು ಈ ಕತೆ ನಿರೂಪಿಸುತ್ತದೆ. ಗಂಗಾ ಪಾದೇಕಲ್‌ರವರ "ಕಳ್ಳ" ಕಥೆಯು ಬಡವರ ಹೆಣ್ಣುಮಕ್ಕಳನ್ನು ಶ್ರೀಮಂತರು ನಡೆಸಿಕೊಳ್ಳುವ ರೀತಿಯನ್ನು ಚಿತ್ರಿಸುತ್ತದೆ. ಬೀಡಿ ಬ್ರಾಂಚಿನ ಮಾಪಿಳ್ಳೆ ಕಾಳಿಯನ್ನು ತನ್ನ ಕಾಮದ ಹಸಿವೆಯನ್ನು ನೀಗಿಸಿಕೊಳ್ಳಲು ಹೊಂಚುಹಾಕುತ್ತಾನೆ. ಇತ್ತ ಕಾಳಿ ಹಾಗೂ ಆಕೆಯ ಅಣ್ಣ ಕೊರಗ ಹೊಟ್ಟೆಯ ಹಸಿವೆಯಿಂದ ಬಳಲುತ್ತಿದ್ದಾರೆ. ಮೂರು ದಿನ ಉಪವಾಸವಿದ್ದು ಧನಿಯು ಮನೆಗೆ ಬೇಡಲು ಬಂದಾಗ ಧನಿ ಹಾಗೂ ಆತನ ಹೆಂಡತಿ ನಡೆದುಕೊಳ್ಳುವ ರೀತಿ ಶ್ರೀಮಂತರ ಕ್ರೌರ್ಯ ಮುಖದ ಪರಿಚಯ ಮಾಡಿಕೊಡುತ್ತದೆ.

ಮಾಪಿಳ್ಳೆಯ ವ್ಯಂಗ್ಯದ ಮಾತುಗಳ ಬಾಣದಿಂದ ಬಿಡುಗಡೆ ಪಡೆಯಲು ಬೀಡಿ ಕಟ್ಟುವುದನ್ನೇ ನಿಲ್ಲಿಸುವ ಸಂದರ್ಭ ಒದಗಿ ಬರುತ್ತದೆ. ಬಡಹೆಣ್ಣು ಮಕ್ಕಳ ಯೌವ್ವನ ಹಾಗೂ ಸೌಂದರ್ಯ ಹಣವಂತರ ಸುಖಕ್ಕಾಗಿ ಎಂಬುವುದು ಈ ಕಥೆಯಲ್ಲಿ ವ್ಯಕ್ತವಾಗುತ್ತದೆ. ಬೀಡಿ ಬ್ರಾಂಚ್‌ಗೆ ಹೋಗುವುದನ್ನು ನಿಲ್ಲಿಸುವುದರ ಮೂಲಕ ತಣ್ಣನೆಯ ಪ್ರತಿರೋಧವನ್ನು ಕಾಳಿ ತೋರುತ್ತಾಳೆ.

ಗಂಗಾಪಾದೇಕಲ್‌ರವರ "ಛೇದ" ಗಮನಿಸಬೇಕಾದ ಇನ್ನೊಂದು ಕತೆ. ತನ್ನ ಕಾಮುಕತೆಯಿಂದ ಊರಿಗೆ ಕಂಟಕನಾದ ಊರ ಗೌಡರ ಮಗ ಶಿವಣ್ಣನ ಮಗಳು ಮಾದೇವಿಯ ಬಾಳಿಗೆ ಕೀಚಕನಾಗಿ ಬಂದಾಗ ರುಕ್ಕು ಬೇರೆ ದಾರಿ ತೋರದೆ ರೋಷದಿಂದ ಅವನ ಜನನಾಂಗವನ್ನೇ ಛೇದಿಸುವ ಮಾರ್ಮಿಕ ಘಟನೆ ಅಪೂರ್ವವಾದರೂ ಅಸಹಜವೇನಲ್ಲ. ತನ್ನ ಬಾಳಿನಲ್ಲಿ ಒಮ್ಮೆ ಪುರುಷನೊಬ್ಬನಿಗೆ ಸೋತ ಮಾತ್ರಕ್ಕೆ ಅಪವಾದಕ್ಕೊಳಗಾಗಿ ಬದುಕಬೇಕಾಗಿ ಬಂದ ರುಕ್ಕುವಿಗೆ ಮಗಳ ಮಾನರಕ್ಷಣೆ ಎನ್ನುವುದು ದೊಡ್ಡ ಪ್ರಶ್ನೆಯಾಗಿ ಕಾಡುತ್ತದೆ.

ಕಾಮುಕ ಶಿವಣ್ಣನಿಂದ ಹೇಗಾದರೂ ಪಾರುಮಾಡಬೇಕೆಂದು ಗರಿಷ್ಠ ಮುಂಜಾಗ್ರತೆಯನ್ನು ವಹಿಸಿದರೂ ಮಾದೇವಿ ಅವನ ಕಾಮುಕತೆಗೆ ಇನ್ನೇನು ಬಲಿಯಾಗುವ ಸಂದರ್ಭದಲ್ಲಿ ಕಣ್ಣರಿಯದಿದ್ದರೂ ಕರುಳರಿಯದೇ ಎಂಬಂತೆ ಅಲ್ಲಿಗೆ ಬಂದ ರುಕ್ಕು ಆತನ ಜನನಾಂಗವನ್ನು ಛೇದಿಸುವ ಘಟನೆ ಆಕಸ್ಮಿಕವೆಂಬಂತೆ ನಡೆದು ಬಿಡುತ್ತದೆ. ಅದೇನು ಪೂರ್ವ ಯೋಜಿತ ಕೃತ್ಯವಲ್ಲ. ಕತೆ ನಿರೂಪಿಸುವ ಆವರಣದಲ್ಲಿ ಅಂತಹ ಕ್ರಿಯೆಗೆ ತನ್ನದೇ ಸಮರ್ಥನೆ ವಿಪರ್ಯಾಸವಿದೆ. ಬಹುಶಃ ಪ್ರತಿಯೊಬ್ಬರು ಇಂತಹ ವಸ್ತುವನ್ನು ಎತ್ತಿಕೊಂಡು ಬರೆಯುವ ಸಂಗತಿಯೇ ಪ್ರತಿರೋಧ ಸ್ವರೂಪದ್ದು.

ಗಂಗಾಪಾದೇಕಲ್‌ರವರ "ಪುಲಪೇಡಿ" ಕತೆಯು ಹೆಣ್ಣನ್ನು ಪುರುಷ ಪ್ರಧಾನ ಸಮಾಜ ಲೈಂಗಿಕವಾಗಿ ಶೋಷಣೆ ಮಾಡುವುದನ್ನು ಅನಾವರಣ ಮಾಡುತ್ತದೆ. ಅತಾರ್ಕಿಕವಾದ ಸಂಪ್ರದಾಯಗಳು, ಕಟ್ಟುಪಾಡುಗಳು ಅವುಗಳಿಗೆ ಬಲಿಯಾದ ಸೂಕ್ಷ್ಮ ಸಂವೇದನಾಶೀಲರನ್ನು ಹೇಗೆ ಘಾಸಿಗೊಳಿಸುತ್ತವೆ ಎನ್ನುವುದು ಈ ಕತೆಯ ಒಂದು ನೆಲೆಯಾದರೆ ಅದಕ್ಕಿಂತ ಮುಖ್ಯವಾದ ಇನ್ನೊಂದು ನೆಲೆ ಬೇರೆಯೇ ಇದೆ.

ನಂಬೂದಿರಿ ಪುರುಷರು ಸಂಪ್ರದಾಯದಂತೆ ನಾಯರ್ ಸ್ತ್ರೀಯರ ಜೊತೆ ಸಂಬಂಧವಿರಿಸಿಕೊಂಡಲ್ಲಿ ಸ್ತ್ರೀಯರ ಸ್ಥಾನಮಾನ ಪುರುಷರ ಮನಸ್ಸಿನ ಒಳಗೂ ಹೊರಗೂ ಹೇಗೆ ಇದೆ ಎಂಬುದರ ಅನಾವರಣ ಈ ಕತೆಯಲ್ಲಿ ಚಿತ್ರಿಸಲ್ಪಟ್ಟಿದೆ. ಹಾಗೆ ಅನಾವರಣಗೊಂಡಾಗ ಒಬ್ಬಾಕೆ ನಾಯರ್ ಸ್ತ್ರೀ ಸಂಪ್ರದಾಯವನ್ನು ವಿರೋಧಿಸುವುದು ಮತ್ತೊಂದು ನೆಲೆಯಿಂದಾಗಿ ಕತೆ ಹೆಚ್ಚು ಮೌಲಿಕವಾಗುತ್ತದೆ.

ಕತೆಗಾರ್ತಿ ಈ ಪದ್ಧತಿಯ ಕುರಿತು ತಿಳಿಸುವಂತೆ ರಾಜನಾದವನು ಹೊರಡಿಸುವ ಒಂದು ವಿಶೇಷ ಆಜ್ಞೆಗನುಸಾರವಾಗಿ ಅದರ ಮುಂದಿನ ಇಪ್ಪತ್ತು ದಿನಗಳಲ್ಲಿ ಪರಯರು, ಇನ್ನುಳಿದ ಕೀಳ್ಜಾತಿಯವರು ಬೀದಿಗಳಲ್ಲಿ ಓಡಾಡಬಹುದಿತ್ತು. ಮೇಲ್ಜಾತಿಯವರು ಮೀಯುವ ಕೆರೆಗಳಲ್ಲಿ ಮಿಂದು ದೇವರ ದರ್ಶನಕ್ಕೆ ದೇಗುಲಕ್ಕೆ ಹೋಗಬಹುದಿತ್ತು. ಮೇಲ್ಜಾತಿಯ ಹೆಣ್ಣು ಒಂಟಿಯಾಗಿ ಕಾಣಸಿಕ್ಕ ಸಂದರ್ಭಗಳಲ್ಲಿ ಪರಯ ಪುರುಷ ಅವಳನ್ನು ಸ್ಪರ್ಶಿಸಿದಲ್ಲಿ ಆಕೆ ಅವನವಳಾಗಬಹುದು.

ವಿಚಿತ್ರವೆಂದು ತೋರಬಹುದಾದರೂ ಶೋಷಿತ ಜನಾಂಗಕ್ಕೆ ಈ ರಾಜಾಜ್ಞೆ ಹುಟ್ಟು ಹಾಕುವ ಸಂಚಲನ ಹೇಗಿರಬಹುದು ಎಂದು ಊಹಿಸಬಹುದು. ಕಣ್ಣನೆಂಬ ಹೆಸರಿನ ಪರಯನಿಗೆ ಮೇಲ್ಜಾತಿಯ ಲಲಿತೆಯ ಕುರಿತು ಕನಸು ಕಾಣುವುದಕ್ಕೆ ರಾಜ ಸಾರಿದ ಆ ಡಂಗುರ ಪ್ರೇರೆಪಿಸಿತ್ತು. ಆ ಆಜ್ಞೆಯ ವ್ಯಾಪ್ತಿಯೊಳಗೆ ತನ್ನ ಆಸೆಯನ್ನು ಆತ ಒಂಟಿಯಾಗಿ ದೇವಾಲಯಕ್ಕೆ ಬಂದ ವೇಳೆ ಲಲಿತೆಯನ್ನು ಸ್ಪರ್ಶಿಸುವ ಮೂಲಕ ಈಡೇರಿಸ ಹೊರಟಿದ್ದ. ಆದರೆ ಆಕೆ ಬಸುರಿಯಾಗಿದ್ದರಿಂದ ನಿಯಮದಂತೆ ಕಾಯಬೇಕಾದ ಪರಿಸ್ಥಿತಿ ಅವನದು. ತನ್ನ ಶಯ್ಯೆಗೊದಗುವ ಇನಿಯ ರಾಮನ್ ನಂಬೂದಿರಿಯ ಬಗ್ಗೆ ಲಲಿತೆಗೆ ಮಧುರ ಭಾವಗಳಿದ್ದು, ರಾಜಾಜ್ಞೆ ಕೊಟ್ಟ ಸ್ವಾತಂತ್ರ್ಯದ ಮೇರೆಗೆ ತನ್ನನ್ನು ಸ್ಪರ್ಶಿಸಿದ ಪರಯನ ಬಗ್ಗೆ ಅಸಹನೆ ತಿರಸ್ಕಾರಗಳು ತುಂಬಿದ್ದವು.

ಅವರ ಧೋರಣೆ ಬದಲಾಗುವ ಸಂದರ್ಭ ಒದಗಿದ್ದು ಹೀಗೆ; ರಾಮನ್ ನಂಬೂದಿರಿಯನ್ನು ಒಮ್ಮೆ ನೋಡುವ ಹಂಬಲದಿಂದ ಹೊಳೆಯ ಕಡೆಗೆ ಹೋಗಿದ್ದ ಲಲಿತೆಗೆ ಆತನ ದರ್ಶನವಾಯಿತಾದರೂ ಆತನ ಚರ್ಯೆ, ನಡವಳಿಕೆಗಳು ಲಲಿತೆಯ ಕುರಿತಾದ ತಿರಸ್ಕಾರಕ್ಕೆ ಸ್ಪಷ್ಟ ಸಾಕ್ಷಿಯಾಗಿದ್ದವು. ಮಾವುತನ ನಿಯಂತ್ರಣ ತಪ್ಪಿದ ಮದ ಬಂದ ಆನೆ ಅಟ್ಟಿಸಿಕೊಂಡು ಬಂದ ಸಂದರ್ಭದಲ್ಲಿ ನಂಬೂದಿರಿ ಮರವೇರಿ ತನ್ನನ್ನು ರಕ್ಷಿಸಿಕೊಳ್ಳುತ್ತಾನೆ. ಹೊರತು ಕೈ ನೀಡಿ ಮೇಲೆತ್ತುವಂತೆ ಅಂಗಲಾಚಿದ ಬಸುರಿ ಲಲಿತೆಯನ್ನು ಕಡೆಗಣಿಸುತ್ತಾನೆ. ಈ ವೇಳೆ ಅಲ್ಲಿಗೆ ಬಂದ ಕಣ್ಣ ತನ್ನ ಪ್ರಾಣವನ್ನೇ ಪಣಕ್ಕೊಡ್ಡಿ ಲಲಿತೆಯನ್ನು ಕಾಪಾಡುತ್ತಾನೆ.

ಈ ಘಟನೆಯಿಂದ ಅವಳ ಹೃದಯದಲ್ಲಿದ್ದ ನಂಬೂದಿರಿಯು ಹೊರದೂಡಲ್ಪಟ್ಟು ಪರಯಕಣ್ಣನು ಪ್ರತಿಷ್ಠಾಪಿತನಾಗುತ್ತಾನೆ. ಪುಲಪೇಡಿ ಪದ್ಧತಿ ನೀಡಿದ ಒಂದು ಆಶ್ವಾಸನೆಯಂತೆ ಗಂಡುಮಗುವಾಗಿ ಪರಯನಿಂದ ಪಾರಾಗುವ ಅವಳ ಹಂಬಲ ಪ್ರಾರ್ಥನೆಗಳೇ ತಿರುವುಮುರುವಾಗಿ ಹೆಣ್ಣು ಮಗು ಜನಿಸಿ ನಂಬೂದಿರಿಯಿಂದ ಪಾರಾಗಿ ಪರಯನವಳಾಗುವ ಅದೃಷ್ಟಕ್ಕಾಗಿ ಮೊರೆಯಿಡುತ್ತದೆ. ಅವಳ ಬದಲಾದ ಆಶೆಗೆ ವಿರುದ್ಧವಾಗಿ ಗಂಡುಮಗುವೇ ಆದಾಗ ಅವಳಿಗಾದ ನಿರಾಶೆ ಸಂಕಟಗಳನ್ನು ಅರ್ಥೈಸಿಕೊಳ್ಳುವರು ಆ ಜಡಗಟ್ಟಿದ ಸಮಾಜದಲ್ಲಿ ಯಾರೂ ಇರಲಿಲ್ಲ.

ವೀರತ್ವವನ್ನು ಮೆರೆದು ತನ್ನ ಪ್ರೀತಿಗಾಗಿ ಪ್ರಾಣವನ್ನೇ ಪಣಕ್ಕಿಟ್ಟ ಪರಯವನಳಾಗಿಯೇ ಇರುವ ನಿರ್ಧಾರಕ್ಕೆ ಕೊನೆಗೂ ಆಕೆ ಬರುವಲ್ಲಿ ಜಡಗಟ್ಟಿದ ಸಂಪ್ರದಾಯಕ್ಕೆ ಆಕೆ ತೋರುವ ಪ್ರತಿರೋಧವನ್ನು ಗಮನಿಸಬಹುದು. ಕತೆಯಲ್ಲಿ ಪರಯ ಸಾಯುವ ಸೂಚನೆ ಇದ್ದರೂ ಆಕೆ ತಳೆಯುವ ನಿರ್ಧರಕ್ಕೆ ಮಹತ್ವ ಇದೆ.

ಅನುಪಮಾ ಪ್ರಸಾದ್‌ರವರ 'ಕರವೀರದ ಗಿಡ' ಕತೆಯ ನಾಯಕಿ ಸುಮಿತ್ರ ತನ್ನನ್ನು ಕಾಮಕ್ಕಾಗಿ ಬಳಸಿಕೊಂಡ ಆ ಶಿಕ್ಷಕನನ್ನು ಸುಮ್ಮನೆ ದೂಷಿಸುವುದಿಲ್ಲ. ಅವನಿಗೆ ಮದುವೆಯಾಗಿತ್ತು ಎಂದು ಅವಳಿಗೆ ಗೊತ್ತಿತ್ತು. ಅವನೂ ಎಂದೂ ಅವಳಿಗೆ ಮದುವೆ ಆಗುವುದಾಗಿ ಭರವಸೆ ಕೊಟ್ಟಿರಲಿಲ್ಲ. ಆತ ನಡೆಸಿದ ಲೈಂಗಿಕ ಕ್ರಿಯೆ ತನ್ನ ಮೇಲೆ ನಡೆದ ದೌರ್ಜನ್ಯ-ಶೋಷಣೆ ಎಂದು ಅವಳು ಭಾವಿಸುವುದಿಲ್ಲ. ಈ ತಪ್ಪಲ್ಲಿ ತನ್ನ ಪಾಲು ಕೂಡ ಇದೆ ಎಂದು ಅವಳು ತಿಳಿದಿದ್ದಾಳೆ.

ಇಂತಹ ಅರಿವು ಈ ಕಥೆಯ ಒಂದು ಹೊಸ ಟರ್ನಿಂಗ್ ಪಾಯಿಂಟ್ ಬಸಿರಾಗಿ ಮಗುವನ್ನು ಹೆರುವುದು ಮತ್ತು ಬೆಳೆಸುವುದರ ಹಿಂದೆ ಹೆಣ್ಣು ಎದುರಿಸಬೇಕಾದ ಸಂಕಷ್ಟದ ಛಲದ ಚಿತ್ರಣವೂ ಕೂಡ ಈ ಕತೆಯಲ್ಲಿ ನಿರೂಪಿತವಾಗಿದೆ. ಈ ಕಥಾ ನಾಯಕಿ ಸುಮಿತ್ರ ಅತ್ಯಂತ ಪ್ರಬುದ್ಧ ಹೆಣ್ಣು ಹಾಗಾಗಿ ಅವಳು ಬದುಕುವ ಕ್ರಮವನ್ನೇ ಬದಲಿಸುತ್ತದೆ. ಇಲ್ಲಿ ಹೆಣ್ಣಿನ ಯಾವ ಆಕ್ರೋಶವಾಗಿಲಿ ಬಂಡಾಯವಾಗಿಲಿ ಗೋಚರಿಸದೆ ಸಮಚಿತ್ತ ಮೂಡಿದಂತಿದೆ. ಈ ಸಮಚಿತ್ತದ ಮನೋಭಾವ ಅವಳು ಬದುಕಿನಲ್ಲಿ ಗೆಲ್ಲುವಂತೆ ಮಾಡುತ್ತದೆ. ಕಥೆಯಲ್ಲಿ ಬರುವ ಶೀನಿಬಾವನ ಪಾತ್ರವೂ ಕೂಡ ವಿಶಿಷ್ಟವಾದದ್ದೇ ಎಂದೆನಿಸುತ್ತದೆ. ಕಥಾ ನಾಯಕಿಯ ನಿರ್ಧಾರ ಆಲೋಚನೆಗಳಿಗೆ ಶೀನಿಬಾವ ಪುಷ್ಟಿ ಕೊಡುವ ಗಂಡು ಪಾತ್ರವಾಗಿ ಮೂಡಿ ಬಂದಿದ್ದಾನೆ. ಸಮಾಜದಲ್ಲಿ ತಾಯ್ತನಕ್ಕೆ ಮಾನ್ಯತೆ ಇರುವುದು ವೈವಾಹಿಕ ಪರಿಧಿಯೊಳಗೆ ಮಾತ್ರ ತಾಯ್ತನದ ಮತ್ತು ಲೈಂಗಿಕತೆಯನ್ನು ಅನುಭವಿಸಲು ಮತ್ತು ಆಯ್ಕೆಯ ಸ್ವಾತಂತ್ರ್ಯ ತನ್ನದಲ್ಲ ಎಂದು ಅರಿವುಂಟಾದಾಗ ತನ್ನ ಹಕ್ಕನ್ನು ಸ್ಥಾಪಿಸುವ ಅಗತ್ಯ ಕಂಡು ಬರುವುದನ್ನು ಈ ಕತೆ ಧ್ವನಿಸುತ್ತದೆ.

ಕರಾವಳಿ ಲೇಖಕಿಯರು ಮಹಿಳೆಯರ ಸಮಸ್ಯೆಗಳಾದ ತಾಯ್ತನ, ಗೃಹಿಣಿತ್ವ, ಮಗಳು, ಸೊಸೆಯ ತಾರತಮ್ಯ, ವೈಧವ್ಯ ಸಮಸ್ಯೆ, ವೃದ್ಧಾಪ್ಯ ಸಮಸ್ಯೆ, ಲೈಂಗಿಕ ಸಮಸ್ಯೆಗಳ ಬಗ್ಗೆ ತಮ್ಮ ಕತೆಗಳಲ್ಲಿ ಚರ್ಚಿಸಿದ್ದಾರೆ. ಹಳೆಯ ನಂಬಿಕೆಗಳಿಗೆ ಪದ್ಧತಿಗಳಿಗೆ ವಿದಾಯ ಹೇಳಿ ಹೊಸ ರೀತಿ ನೀತಿಗಳನ್ನು ಸ್ವೀಕರಿಸುವ ಗಂಗಾಪಾದೆಕಲ್‌ರವರ 'ಸಂಧಿಕಾಲ'ದಲ್ಲಿ ಇಂತಹ ತಳಮಳಗಳು, ಸಂಘರ್ಷಗಳು ಅನಿವಾರ್ಯ ಎಂಬುದನ್ನು ಕತೆ ಸೂಚಿಸುತ್ತದೆ. ವಿಧವಾ ವಿವಾಹ ಆಗುವುದರಿಂದ ಹೆಂಗಸಿನ ನೋವನ್ನು, ಅಗತ್ಯವನ್ನು ಗಂಡಸೂ ಅರ್ಥಮಾಡಿಕೊಳ್ಳಬಲ್ಲ ಎನ್ನುವ ಲೇಖಕಿಯ ಧೋರಣೆ ಬದುಕಿನ ಸಂಕೀರ್ಣತೆಗೆ ಕನ್ನಡಿ ಹಿಡಿಯುತ್ತದೆ. ವಿವಾಹ ಸಂಸ್ಥೆಯು ಹುಟ್ಟಿಕೊಂಡಾಗಿನಿಂದ ಗಂಡು ಹೆಣ್ಣಿನ ಸಂಬಂಧವನ್ನು ಈ ಚೌಕಟ್ಟಿನೊಳಗೆ ಬಂಧಿಸುತ್ತ ಬರಲಾಗಿದೆ. ಮಹಿಳಾ ಚಳುವಳಿಯು ಮಹಿಳೆಯನ್ನು ನಿರ್ಬಂಧಿಸಿದನ್ನು ಪ್ರಶ್ನಿಸಿತು. ಎಂಭತ್ತರ ದಶಕದಿಂದೀಚೆಗೆ ಮಹಿಳೆಯರ ಲೈಂಗಿಕ ಸ್ವಾತಂತ್ರವನ್ನು ಪ್ರತಿಬಿಂಬಿಸುವ ಕತೆಗಳು ರಚನೆಯಾಗಿವೆ. ಕರಾವಳಿಯ ಲೇಖಕಿಯರು ಸ್ತ್ರೀವಾದಿ ಚಿಂತನೆಯ ಹಿನ್ನೆಲೆಯಲ್ಲಿ ಮಹಿಳೆಯರ ಸಮಸ್ಯೆಗಳ ಬಗ್ಗೆ ಗಮನ ಹರಿಸಿದ್ದಾರೆ.

**ಅಡಿಟಿಪ್ಪಣಿ**

೧. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಮಂಗಳೂರು ೨೦೧೦ ಪುಟ ೭೯

೨. ಸಾರಾ ಅಬೂಬಕ್ಕರ್, ಖೆಡ್ಡಾ, ಚಂದ್ರಗಿರಿ ಪ್ರಕಾಶನ, ಮಂಗಳೂರು ೧೯೯೯ ಪುಟ ೭೧

೩. ಸಾರಾ ಅಬೂಬಕ್ಕರ್, ಖೆಡ್ಡಾ, ಚಂದ್ರಗಿರಿ ಪ್ರಕಾಶನ, ಮಂಗಳೂರು ೧೯೯೯ ಪುಟ ೭೩

೪. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಚಂದ್ರಗಿರಿ ಪ್ರಕಾಶನ, ಮಂಗಳೂರು ೨೦೧೦ ಪುಟ ೬೪

೫. ಗಾಂಗಾಪಾದೇಕಲ್, ಈ ಪ್ರಜಾ ರಾಜ್ಯದೊಳಗೆ, ಪುಟ ೯೦ – ೨೦೦೬

೬. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ೧೭೯

೭. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ೧೮೦

೮. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ೨೦೦

೯. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ೨೦೪

೧೦. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ೨೦೪

೧೧. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ಸಂಖ್ಯೆ ೨೦೬

೧೨. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ, ಪುಟ ಸಂಖ್ಯೆ ೨೦೬

೧೩. ಮಿತ್ರಾವೆಂಕಟ್ರಾಜ್, ರುಕುಮಾಯಿ, ಪುಟ ೬೯

೧೪. ಮಿತ್ರಾವೆಂಕಟ್ರಾಜ್, ರುಕುಮಾಯಿ, ಪುಟ ೧೪೬

೧೫. ಮಿತ್ರಾವೆಂಕಟ್ರಾಜ್, ರುಕುಮಾಯಿ, ಪುಟ ೧೫೩

೧೬. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೨, ಪುಟ ೧೭೭

೧೭. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೨೯೦

೧೮. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೨೯೦

೧೯. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೨೯೦

೨೦. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೪೪

೨೧. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೫೬೨

೨೨. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೬೬೯

೨೩. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೬೬೯

೨೪. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೫೫

೨೫. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೫೭೯

೨೬. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೫೭೯

೨೭. ಗಂಗಾಪಾದೇಕಲ್, ವಾಸ್ತವ, ಪುಟ ೫೪

೨೮. ಅನುಪಮಾ ಪ್ರಸಾದ್, ದೂರ ತೀರ, ಪುಟ ೫೩

೨೯. ಅನುಪಮಾ ಪ್ರಸಾದ್, ದೂರ ತೀರ, ಪುಟ ೬೭

೩೦. ಅನುಪಮಾ ಪ್ರಸಾದ್, ದೂರ ತೀರ ಕಥಾ ಸಂಕಲನ, ಪುಟ ೬೮

೩೧. ಅನುಪಮಾ ಪ್ರಸಾದ್, ದೂರ ತೀರ, ಪುಟ ೬೮

೩೨. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಪುಟ ೧೦

೩೩. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಪುಟ ೧೯೮

೩೪. ಸಾರಾ ಅಬೂಬಕ್ಕರ್, ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು, ಪುಟ ೯೨

೩೫. ಸಾರಾ ಅಬೂಬಕ್ಕರ್, ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು, ಪುಟ ೩೬

೩೬. ಸಾರಾ ಅಬೂಬಕ್ಕರ್, ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು, ಪುಟ ೩೬

೩೭. ಸಾರಾ ಅಬೂಬಕ್ಕರ್, ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು, ಪುಟ ೩೭

೩೮. ಸಾರಾ ಅಬೂಬಕ್ಕರ್, ಚಪ್ಪಲಿಗಳು ಆಯ್ದ ಕತೆಗಳು, ಪುಟ ೪೮

೩೯. ಸಾರಾ ಅಬೂಬಕ್ಕರ್, ಚಪ್ಪಲಿಗಳು ಆಯ್ದ ಕತೆಗಳು, ಪುಟ ೪೯

೪೦. ಸಾರಾ ಅಬೂಬಕ್ಕರ್, ಚಪ್ಪಲಿಗಳು ಆಯ್ದ ಕತೆಗಳು, ಪುಟ ೫೨

೪೧. ಸಾರಾ ಅಬೂಬಕ್ಕರ್, ಚಪ್ಪಲಿಗಳು ಆಯ್ದ ಕತೆಗಳು, ಪುಟ ೫೨

೪೨. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೩೨

೪೩. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೧೪

೪೪. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೧೪

೪೫. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೧೪

೪೬. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೧೪

೪೭. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೧೧೪

೪೮. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೧, ಪುಟ ೧೫೪

೪೯. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೧, ಪುಟ ೧೫೪

೫೦. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೧, ಪುಟ ೧೫೪

೫೧. ಮಿತ್ರಾ ವೆಂಕಟರಾಜ್, ಮಾಯಕದ ಸತ್ಯ, ಪುಟ ೧೦೦

೫೨. ಮಿತ್ರಾ ವೆಂಕಟರಾಜ್, ಹಕ್ಕಿ ಮತ್ತು ಅವಳು, ಪುಟ ೧೭

೫೩. ಮಿತ್ರಾ ವೆಂಕಟರಾಜ್, ಹಕ್ಕಿ ಮತ್ತು ಅವಳು, ಪುಟ ೧೮

೫೪. ಮಿತ್ರಾವೆಂಟ್ರಾಜ್, ರುಕುಮಾಯಿ, ಪುಟ ೮೧

೫೫. ಅನುಪಮಾ ಪ್ರಸಾದ್, ಜೋಗತಿ ಜೋಳಿಗೆ, ಪುಟ ೪೦

೫೬. ಸಾರಾ ಅಬೂಬಕ್ಕರ್, ಚಪ್ಪಲಿಗಳು ಆಯ್ದ ಕತೆಗಳು, ಪುಟ ೩೨

೫೭. ಸಾರಾ ಅಬೂಬಕ್ಕರ್, ಚಪ್ಪಲಿಗಳು, ಪುಟ ೩೨

೫೮. ವೈದೇಹಿ, ಕತೆಕತೆ ಕಾರಣ, ಪುಟ ೪೫

೫೯. ವೈದೇಹಿ, ಕತೆಕತೆ ಕಾರಣ, ಪುಟ ೪೫

೬೦. ವೈದೇಹಿ, ಅಲೆಗಳಲ್ಲಿ ಅಂತರಂಗ, ಪುಟ ೬೮

೬೧. ವೈದೇಹಿ, ಅಂತರಂಗದ ಪುಟಗಳು, ಪುಟ ೮೩

೬೨. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೨, ಪುಟ ೫೯.

೬೩. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೨, ಪುಟ ೬೦.

೬೪. ಗಂಗಾಪಾದೇಕಲ್, ಸಮಗ್ರ ಕಥಾ ಸಂಕಲನ ಭಾಗ ೨, ಪುಟ ೬೦.

## ಅಧ್ಯಾಯ : ೪

## ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಪ್ರತಿರೋಧದ ಸಾಮಾಜಿಕ ನೆಲೆಗಳು

## ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಪ್ರತಿರೋಧದ ಸಾಮಾಜಿಕ ನೆಲೆಗಳು

ನಮ್ಮ ಸಾಮಾಜಿಕ ವ್ಯವಸ್ಥೆಯು ಮೂಲಭೂತವಾಗಿ ಪುರುಷ ಪ್ರಧಾನವಾಗಿದ್ದು ಮಹಿಳೆಯನ್ನು ಶತಮಾನಗಳ ಹಿಂದಿನಿಂದಲೂ ಸಂಪ್ರದಾಯದ ಸಂಕೋಲೆಗಳಲ್ಲಿ ಬಂಧಿಸಿಟ್ಟಿದೆ. ಭಾರತದ ಸಂದರ್ಭದಲ್ಲಿ "ಸ್ತ್ರೀಯ ಶೋಷಣೆಗೆ ಪುರುಷನಷ್ಟೇ ಕಾರಣವಾಗಿರದೆ, ಜಾತಿ, ವರ್ಗ, ಸಮಾಜ, ಒಟ್ಟಾರೆ ವ್ಯವಸ್ಥೆ ಅದರಲ್ಲಿನ ಆರ್ಥಿಕ ಅಸಮಾನತೆ, ನಿರುದ್ಯೋಗ, ಬಂಡವಾಳಶಾಹಿ ಆರ್ಥಿಕ ಅಸಮಾನತೆ, ನಿರುದ್ಯೋಗ, ಬಂಡವಾಳಶಾಹಿ ಪದ್ಧತಿಗಳು ಕಾರಣವಾಗಿರುತ್ತವೆ"[೧] ಮಹಿಳೆಯರ ಸಮಸ್ಯೆಗಳೆಲ್ಲವು ಹಸಿವು ಮತ್ತು ಬಡತನದ ಸುತ್ತ ಗಿರಕಿ ಹೊಡೆಯುತ್ತಿರುತ್ತವೆ. "ಅತ್ಯಂತ ಕ್ರೂರವಾಗಿರುವ ಜಾತಿ ವ್ಯವಸ್ಥೆಯಲ್ಲಿ ಕೊನೆಯ ಅಂಚಿನಲ್ಲಿರುವ ಮಹಿಳೆಯರು ಜಾತಿಯ ಶಾಪದ ಜೊತೆಗೆ ಲಿಂಗ, ವರ್ಗ ಹಾಗೂ ವರ್ಣದ ಕಾರಣಗಳಿಂದಾಗಿ ಪುರುಷ ವಿಕಾರಗಳನ್ನು ಅಸಹಾಯಕತೆಯಿಂದ ಎದುರಿಸುತ್ತಿದ್ದಾರೆ"[೨] ಕೆಳಜಾತಿ ವರ್ಗಗಳಲ್ಲಿ ಹುಟ್ಟಿದ ಕಾರಣಕ್ಕಾಗಿಯೇ ಬಹಳಷ್ಟು ಮಹಿಳೆಯರು ಇನ್ನಿಲ್ಲದಷ್ಟು ಶೋಷಿಸಲ್ಪಟ್ಟಿದ್ದಾರೆ. "ಹೊಟ್ಟೆ ತುಂಬಿಸಿಕೊಳ್ಳುವ ದುರ್ದಿನದಲ್ಲಿದ್ದು ನಿತ್ಯವೂ ದುಡಿದು ಅರೆಹೊಟ್ಟೆ ಉಣ್ಣುವ ಈ ಮಹಿಳೆಯರ ಪಾಲಿಗೆ ಶಿಕ್ಷಣ, ಉದ್ಯೋಗ, ಆಸ್ತಿ ಹಕ್ಕು, ವಿಚ್ಛೇದನದಂತಹ ಆಧುನಿಕ ವಿಷಯಗಳು ಗಾವುದ ದೂರವೇ ಉಳಿದಿವೆ".[೩] ವ್ಯಕ್ತಿಯ ಸಾಮಾಜಿಕ ಜೀವನದ ಸ್ಥಿತಿಗತಿಗಳು ನಿರ್ಧಾರವಾಗಲು ಇರುವ ಮಾನದಂಡವೆಂದರೆ ಆತನ ಆರ್ಥಿಕ ಪರಿಸ್ಥಿತಿ. ಸಮಾಜದಲ್ಲಿ ಈ ಅಂಶವು ವರ್ಗಬೇಧವನ್ನುಂಟುಮಾಡಿ ಬಡತನದಿಂದಾಗಿ ಮಹಿಳೆಯು ಬೇರೆ ಬೇರೆ ನೆಲೆಗಳಲ್ಲಿ ಶೋಷಣೆಗೆ ಒಳಗಾಗಬೇಕಾಗುತ್ತದೆ.

### ೪.೧ ಬಡತನ ಮತ್ತು ಅರ್ಥಿಕತೆಯ ಪ್ರಶ್ನೆಗಳು

ಹೆಣ್ಣಿನ ಆರ್ಥಿಕ ಸ್ವಾತಂತ್ರ್ಯದ ಬಗ್ಗೆ ಗಂಗಾ ಅವರ ಕತೆಗಳಲ್ಲಿ ಬಲವಾದ ಪ್ರತಿಪಾದನೆ ಇದೆ. ಹೆಣ್ಣು – ಗಂಡು ಎಂಬ ತಾರತಮ್ಯ ವೈವಾಹಿಕ ನೆಲೆಗೆ ಸಂಬಂಧಿಸಿದಂತೆ ಮಾತ್ರವಲ್ಲ, ಮದುವೆಯಾದ ಹೆಣ್ಣಿಗೂ ಅನಿವಾರ್ಯವೆಂದರು ಗಂಡಿಗೆ ಅಗತ್ಯವೆಂದೂ ನೋಡುವ ರೀತಿಯಲ್ಲೂ ವ್ಯಕ್ತವಾಗುವುದನ್ನು ಅವರ ಕತೆಗಳು ಗುರುತಿಸುತ್ತವೆ.

ನಮ್ಮ ಸಾಮಾಜಿಕ ವ್ಯವಸ್ಥೆಯು ಮೂಲಭೂತವಾಗಿ ಪುರುಷ ಪ್ರಧಾನವಾಗಿದ್ದು ಮಹಿಳೆಯನ್ನು ಶತಮಾನಗಳ ಹಿಂದಿನಿಂದಲೂ ಸಂಪ್ರದಾಯದ ಸಂಕೋಲೆಗಳಲ್ಲಿ ಬಂಧಿಸಿಟ್ಟಿದೆ. ಭಾರತದ

ಸಂವಿಧಾನದಲ್ಲಿ ಸ್ತ್ರೀಯ ಶೋಷಣೆಗೆ ಪುರುಷನಷ್ಟೇ ಕಾರಣವಾಗಿರದೆ, ಜಾತಿ, ವರ್ಗ, ಸಮಾಜ, ಒಟ್ಟಾರೆ ವ್ಯವಸ್ಥೆ ಅದರಲ್ಲಿನ ಆರ್ಥಿಕ ಅಸಮಾನತೆ, ನಿರುದ್ಯೋಗ, ಬಂಡವಾಳಶಾಹಿ ಪದ್ಧತಿಗಳು ಕಾರಣವಾಗಿರುತ್ತವೆ. ಮಹಿಳೆಯರ ಸಮಸ್ಯೆಗಳೆಲ್ಲವು ಹಸಿವು ಮತ್ತು ಬಡತನದ ಸುತ್ತ ಗಿರಕಿ ಹೊಡೆಯುತ್ತಿರುತ್ತವೆ. ಅತ್ಯಂತ ಕ್ರೂರವಾಗಿರುವ ಜಾತಿ ವ್ಯವಸ್ಥೆಯಲ್ಲಿ ಕೊನೆಯ ಅಂಚಿನಲ್ಲಿರುವ ಮಹಿಳೆಯರು ಜಾತಿಯ ಶಾಪದ ಜೊತೆಗೆ ಲಿಂಗ, ವರ್ಗ ಹಾಗೂ ವರ್ಣದ ಕಾರಣಗಳಿಂದಾಗಿ ಪುರುಷ ವಿಕಾರಗಳನ್ನು ಅಸಹಾಯಕತೆಯಿಂದ ಎದುರಿಸುತ್ತಿದ್ದಾರೆ.

ಕೆಳಜಾತಿ ವರ್ಗಗಳಲ್ಲಿ ಹುಟ್ಟಿದ ಕಾರಣಕ್ಕಾಗಿಯೇ ಬಹಳಷ್ಟು ಮಹಿಳೆಯರು ಇನ್ನಿಲ್ಲದಷ್ಟು ಶೋಷಿಸಲ್ಪಟ್ಟಿದ್ದಾರೆ. 'ಹೊಟ್ಟೆ ತುಂಬಿಸಿಕೊಳ್ಳುವ ದುರ್ದಿನದಲ್ಲಿದ್ದು ನಿತ್ಯವೂ ದುಡಿದು ಅರೆಹೊಟ್ಟೆ ಉಣ್ಣುವ ಈ ಮಹಿಳೆಯರ ಪಾಲಿಗೆ ಶಿಕ್ಷಣ ಉದ್ಯೋಗ. ಆಸ್ತಿ ಹಕ್ಕು, ವಿಚ್ಛೇದನದಂತಹ ಆಧುನಿಕ ವಿಷಯಗಳು ಗಾವುದ ದೂರವೇ ಉಳಿದಿವೆ.

ಗಂಗಾಪಾದೇಕಲ್‌ರವರ 'ಇದು ಬರಿ ಬೆಳಗಲ್ಲೋ ಅಣ್ಣಾ' ಕತೆಯ ಗೌರ ಅಣ್ಣ ಅತ್ತಿಗೆಯರ ಕಾಟ, ಎದೆಯುರಿ, ತೀವ್ರ ದುಡಿತದಿಂದ ಬೇಸತ್ತು ನಗರಕ್ಕೆ ಬಂದು ಗಾರ್ಮೆಂಟ್ ಫ್ಯಾಕ್ಟರಿಗೆ ಸೇರುತ್ತಾಳೆ. ತಾನು ದುಡಿದ ಹಣವನ್ನು ಅಕ್ಕನ ಮದುವೆಗೆಂದು ಪ್ರತಿ ತಿಂಗಳು ಕಳುಹಿಸಿಕೊಡುತ್ತಾಳೆ. ಸ್ವತಃ ತಾಯಿಯೇ ಗಂಡು ಮಕ್ಕಳ ಪಕ್ಷಪಾತಿಯಾಗಿದ್ದುಕೊಂಡು, ಮದುವೆಗೆ ಕಳುಹಿಸಿದ ಹಣವನ್ನು ತನ್ನ ಸೊಸೆಗೆ ಒಡವೆ ಮಾಡಿಸಲು ಮತ್ತು ಮನೆ ಖರ್ಚಿಗಾಗಿ ಉಪಯೋಗಿಸಿಕೊಂಡಿರುವುದನ್ನು ತಿಳಿದು ದುಃಖಿಸುತ್ತಾಳೆ. ಅಕ್ಕನ ಜೀವನ ಹಾಳಾಗುವುದನ್ನು ಕಂಡು ಆಕೆಯ ಹತ್ತಿರ ತನ್ನಂತೆಯೇ ನೀನು ಕೂಡ ಹಣ ಸಂಪಾದನೆ ಮಾಡಬಹುದೆಂದು ಹೇಳಿ ನಗರಕ್ಕೆ ಕರೆದುಕೊಂಡು ಬಂದು ಅವಳಿಗೂ ಕೆಲಸ ಕೊಡಿಸಿ ಅವಳ ಬದುಕನ್ನು ರೂಪಿಸಿಕೊಳ್ಳಲು ಸಹಾಯ ಮಾಡುತ್ತಾಳೆ. ಹೆಣ್ಣು ಸ್ವಾವಲಂಬಿಯಾದರೆ ತನ್ನ ಕಷ್ಟಕರವಾದ ಜೀವನವನ್ನು ಸುಖಮಯವಾಗಿಸಲು ಹಾಗೂ ಮಹಿಳಾ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯಲು ಸಾಧ್ಯ ಎಂಬುದನ್ನು ಈ ಕತೆ ಧ್ವನಿಸುತ್ತದೆ.

ಸಾಮಾಜಿಕ ನ್ಯಾಯದ ಪರವಾಗಿ ಮಿಡಿಯುವ ಗಂಗಾ ಅವರ ಕತೆಗಳ ಗುಂಪಿನಲ್ಲಿ 'ನ್ಯಾಯ' ಎಂಬ ಕತೆಯನ್ನು ಗಮನಿಸಬಹುದು. ಶ್ರಮಿಕ ವರ್ಗದ ಹುಡುಗನಿಗೆ ತನ್ನ ಹರಿದ ಚಡ್ಡಿಯಿಂದಾಗಿ

ಶಾಲೆಯಲ್ಲಿ ಒದಗುವ ಅವಮಾನ ಸಂಕಟಗಳನ್ನು ದಾಟಲು ಕಳಂಜಿಲೆಯಿಂದ ತಂದ ಗೇರುಬೀಜ ಮಾರಿ ಚಡ್ಡಿ ಹೊಲಿಸುವ ಕನಸು. (ಸ್ವಂತ ಗೇರುತೋಟವಿಲ್ಲ). ದೇವಸ್ಥಾನದ ಜೀರ್ಣೋದ್ಧಾರದ ವಂತಿಗೆಗೆ ಈ ಹಣ ಸಲ್ಲುವ ಪ್ರಶ್ನೆ ಬಂದಾಗ ಅಲ್ಲಿ ಒಂದು ಸಂಕೀರ್ಣತೆ ಸೃಷ್ಟಿಯಾಗುತ್ತದೆ.

ತಂದ ಗೇರುಬೀಜ ಕಳ್ಳತನದ್ದು. ಹಾಗಾಗಿ ಅದನ್ನು ಮಾರಿದ ಹಣ ದೇವಸ್ಥಾನಕ್ಕೆ ಸಲ್ಲುವುದು ನೈತಿಕವಾಗಿ ಸರಿಯೇ ಎಂಬ ಪ್ರಶ್ನೆಯನ್ನು ಹಣಕೊಡುವ ವಿಚಾರದಿಂದ ಪಾರಾಗುವ ಉಪಾಯವಾಗಿ ಇವರು ಮುಂದಿಟ್ಟರೆ ವಂತಿಗೆಯವರು ಹಣ ಕೈತಪ್ಪಿ ಹೋಗುವುದೆಂಬ ಧೂರ್ತತನದಿಂದ ಕಳ್ಳತನದ ಅಪರಾಧಕ್ಕಾಗಿ ಜೈಲು ಸೇರಬೇಕಾದೀತೆಂದು ಬೆದರಿಕೆ ತಂತ್ರವನ್ನು ಬಳಸಿ ಬೆದರಿಕೆಯನ್ನು ಒಡ್ಡುತ್ತಾರೆ. ಇಂತಹ ಬಿಕ್ಕಟ್ಟಿನಿಂದ ಪಾರಾಗುವ ದಾರಿಯನ್ನು ಹೊಸಚಡ್ಡಿಯ ಕನಸುಕಂಡ ಹುಡುಗ ತಾನಾಗಿ ಕಂಡುಕೊಳ್ಳುತ್ತಾನೆ. ತಮ್ಮನ್ನು ಕಳ್ಳರೆಂದು ಆಪಾದಿಸುವ ಈ ಧರ್ಮೋದ್ಧಾರಕರು ಕಾಡಿನಿಂದ ಕಳ್ಳ ನಾಟಾ ಸಾಗಿಸುವಲ್ಲಿ ನಿರತರಾಗಿದ್ದುದನ್ನು ತಾನು ನೋಡಿರುವೆನಾದ್ದರಿಂದ ಅವರು ಕಳ್ಳರೇ ಎಂಬ ಅನಿರೀಕ್ಷಿತ ತಿರುಗೇಟನ್ನು ನೀಡಲು ಅವನಿಗೆ ಸಾಧ್ಯವಾಗುತ್ತದೆ.

ಈ ಮಾತಿನ ಹೊಡೆತಕ್ಕೆ ಅವರ ಪ್ರತಿಕ್ರಿಯೆಯ ಸ್ವರೂಪ ಹೇಗಿರಬಹುದು ಎಂದು ಆತಂಕದಲ್ಲಿ ಹುಡುಗನ ತಂದೆ ಸಂಕಪ್ಪಯ್ಯನಿದ್ದ ಯಾಕೆಂದರೆ ಮೊದಲಿನಿಂದಲೂ ಶೋಷಣೆಯನ್ನು ಅನುಭವಿಸಿಕೊಂಡು ಬಂದವನಿಗೆ ಮಗ ತಿರುಗೇಟು ಕೊಟ್ಟಾಗ ಎಂಬ ಭಯ ಆತನನ್ನು ಕಾಡುತ್ತದೆ. ಸಂಕಪ್ಪಯ್ಯನಿಗೆ ಸಾಧ್ಯವಾಗದ ಪ್ರತಿರೋಧ ಅವನ ಮಗನಿಗೆ ಸಾಧ್ಯವಾಗುತ್ತದೆ. ಮುಂದಿನ ತಲೆಮಾರು ಆ ಧೈರ್ಯವನ್ನು ತೋರಬಲ್ಲದು ಎಂಬ ಸೂಚನೆ ಈ ಕತೆಯಲ್ಲಿದೆ. ಅಲ್ಲದೆ ಕತೆ ತನ್ನ ಒಡಲಲ್ಲಿ ಹೊಂದಿರುವ ದುರಂತವನ್ನು ಅನಾವರಣ ಮಾಡುತ್ತದೆ.

ಸಮಾಜದ ಅತ್ಯಂತ ಕೆಳವರ್ಗದ ಕೊರಗ ಸಮುದಾಯದ ಬಡಜೀವವೊಂದು ಉಳ್ಳವರ ಅಮಾನವೀಯ ಧೋರಣೆಗೆ ಬಲಿಯಾಗಿ ಅಸುನೀಗುವುದು ಮಾತ್ರವಲ್ಲ. ತಾನು ಮಾಡಿಯೆ ಇರದ ಅಪರಾಧದ ಅಪವಾದವನ್ನು ಮರಣಾನಂತರ ಹೊತ್ತುಕೊಳ್ಳಬೇಕಾಗಿ ಬಂದ ಮತ್ತೊಂದು ದುರಂತವನ್ನು "ಕಳ್ಳ" ಕತೆಯು ಚಿತ್ರಿಸುತ್ತದೆ.

ಕೊರಗನ ಹಸಿವು, ಅದರ ತೀವ್ರತೆ ಮತ್ತು ಆತನ ಅಸಹಾಯಕತೆ – ಇದಕ್ಕೆ ವೈದೃಶ್ಯವಾಗಿ ಒಡೆಯ/ಒಡತಿಯ ದರ್ಪ ಹಾಗೂ ಕ್ರೂರ ಅಮಾನವೀಯ ನಡತೆಗಳು ವಿಜೃಂಭಿಸುತ್ತ ಹಸಿವಿನ

ಬಳಲಿಕೆಯನ್ನು ಹೊತ್ತುಕೊಂಡೇ ಮರವೇರಿದ ಕೊರಗ ಮರದಿಂದ ಬಿದ್ದು ಸಾಯುವುದು, ಆತ ಕಳ್ಳತನಕ್ಕಾಗಿ ಮರವೇರಿದ ಸಂದರ್ಭದಲ್ಲಿ ಬಿದ್ದು ಸತ್ತನೆಂಬ ಸುದ್ದಿಯನ್ನು ಸೃಷ್ಟಿಸಿ ಹಬ್ಬಿಸುವುದನ್ನು ಕಾಣಬಹುದು.

ವೈದೇಹಿಯವರ ಕತೆಗಳಲ್ಲಿ ಸಾಮಾನ್ಯವಾಗಿ ಹೆಣ್ಣಿಗೆ ಸಂಬಂಧಪಟ್ಟಂತೆ ಆರ್ಥಿಕ ಸಮಸ್ಯೆಯನ್ನು ಕಾಣಬಹುದು. ಕೆಲವು ಕತೆಗಳಲ್ಲಿ ಗಂಡಸರು ಸೋಮಾರಿತನದಿಂದ ಅಥವಾ ಇನ್ನ್ಯಾವುದೋ ಅಶಕ್ತತೆಯಿಂದ ದುಡಿಯದೇ ಮನೆಯ ಹೆಂಗಸರು ದುಡಿದು ಸಂಸಾರ ನಡೆಸಬೇಕಾಗುವ ಸ್ಥಿತಿಯ ಜೊತೆಗೆ ಎಷ್ಟು ದುಡಿದರೂ ಸಂಸಾರ ಸಾಗಿಸಲು ಕಷ್ಟವಾದಾಗ ಸುಳ್ಳು ಹೇಳಿಯೋ ಅಥವಾ ಕಳ್ಳತನ ಮಾಡಿಯೋ ಸಂಸಾರವನ್ನು ಸಾಗಿಸಬೇಕಾಗುವ ಹೆಂಗಸರ ಅನಿವಾರ್ಯತೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ವೈದೇಹಿಯವರು ಕೆಲವು ಸ್ತ್ರೀ ಪಾತ್ರಗಳ ಮೂಲಕ ಆರ್ಥಿಕ ಸ್ವಾವಲಂಬನೆಯ ಅಗತ್ಯದ ಬಗ್ಗೆ ಹೇಳುತ್ತಾರೆ.

"ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು" ಕತೆಯಲ್ಲಿ ಊರ ಒಳಗಡೆ ಟೆಂಟ್ ಟಾಕೀಸು ಕಟ್ಟಿಸಿ ಹೆಂಗಸರ ಪ್ರಪಂಚದಲ್ಲಿ ಸಣ್ಣ ಮಟ್ಟಿನ ಬದಲಾವಣೆಯನ್ನು ಉಂಟು ಮಾಡುವ ಗುಲಾಬಿ, ಬೊಂಬಾಯಿಗೆ ಓಡಿ ಹೋದ ತನ್ನ ಗಂಡನ ಬಗ್ಗೆ ಚಿಂತಿಸಿ ಸುಮ್ಮನೆ ಕೂರದೆ ಗುಲಾಬಿಯ ಟಾಕೀಸಿನಲ್ಲಿ ಗೇಟ್ ಕೀಪರ್ ಆಗಿ ಸೂಲಗಿತ್ತಿಯಾಗಿ ಕೆಲಸ ಮಾಡುತ್ತ, ತನಗೆದುರುಗೊಂಡ ತೊಂದರೆಗಳನ್ನೆಲ್ಲ ದಿಟ್ಟತನದಿಂದ ಎದುರಿಸುತ್ತ ಆರ್ಥಿಕ ಸ್ವಾವಲಂಬಿಯಾಗಿ ಬದುಕುವ ಲಿಲ್ಲಿಬಾಯಿ, ಯಾವ ಕೆಲಸವೇ ಆಗಲಿ ಜಗ್ಗದೇ ಮಾಡುತ್ತ ಯಾರಿಗೂ ಲೆಕ್ಕಿಸದೆ ತನ್ನ ಕಾಲ ಮೇಲೆ ನಿಂತು ಬದುಕುವ 'ಅಲ್ಲಲ್ಲಿನ ಲೋಕದವರು' ಕತೆಯ ಮಂಜಿ. ಈಕೆ ಲಕ್ಷ್ಮೀದೇವಮ್ಮನ ಮನೆಯಲ್ಲಿ ಕೆಲಸ ಮಾಡುವವಳು. ಸಮಯಕ್ಕೆ ಸರಿಯಾಗಿ ಹಾಜರಾಗುವ, ಯಾವ ಕೆಲಸವಾದರೂ ಸರಿ ಅಚ್ಚುಕಟ್ಟಾಗಿ ಮಾಡುವವಳು. ಲಕ್ಷ್ಮೀದೇವಮ್ಮನ ಮಾತಿನಂತೆ ಮಂಜಿ "ಒಬ್ಳ್ ಬಂದ್ಳ್ ಅಂದ್ರೆ ಗಂಡ್ ಬಲ ಬಂದ್ಹಾಂಗೆ"[೪] ಗಂಡಿನ ಸಮನಾಗಿ ಮನೆಕೆಲಸ, ತೋಟದ ಕೆಲಸ ಎಲ್ಲವನ್ನು ಮಾಡುವಳು. ಬಡತನ ಇದ್ರು ಸ್ವಾವಲಂಬಿಯಾಗಿ ಬದುಕನ್ನು ಕಟ್ಟಿಕೊಂಡವಳು.

"ಒಂದು ಕಳ್ಳ ವೃತ್ತಾಂತ" ಕತೆಯು ವೈದೇಹಿಯವರ ಉತ್ತಮ ಆರ್ಥಿಕ ಸಮಸ್ಯೆಯ ಕತೆಯಾಗಿದೆ. ಈ ಕತೆಯ ನಾಯಕಿ ಬಚ್ಚಮ್ಮ, ಮದುವೆಯಾಗಿ ಹೋದ ಬದುಕಿನಲ್ಲಿ ತನಗೆ ಬೇಕಾದ ಹಾಗೆ ಉಂಡು, ಉಟ್ಟು ಬದುಕಬೇಕೆಂದು ಕನಸು ಕಂಡಿರುತ್ತಾಳೆ. ಆದರೆ ಬಚ್ಚಮ್ಮನಿಗೆ ಸಿಕ್ಕ ಗಂಡ ಸ್ವಂತವಾಗಿ ದುಡಿದು

ಬದುಕದೆ ಬೇರೆಯವರ ಅಡಿಯಾಳಾಗಿ ಆಕೆಯ ಹಾಗೂ ಮಕ್ಕಳ ಹೊಟ್ಟೆ ಹೊರೆಯಲೂ ಅಶಕ್ತನಾಗಿರುತ್ತಾನೆ. ಹಾಗಾಗಿ ಓದುಬರಹ ಬಾರದ ಬಚ್ಚಮ್ಮ, ಬೇರೆಯವರ ಮನೆ ಕೆಲಸಕ್ಕೆ ಹೋಗುತ್ತಿರುತ್ತಾಳೆ.

ತಾನೆಷ್ಟು ದುಡಿದರೂ ಸಂಸಾರ ಸಾಗಿಸಲು ಕಷ್ಟವಾದಾಗ ಮತ್ತು ತಾನು ಕೆಲಸ ಮಾಡುವ ಮನೆಯವರೆಲ್ಲ ಔದಾರ್ಯ ತೋರದೆ ಜಿಪುಣರಂತೆ ವರ್ತಿಸಿದಾಗ ಕದಿಯುವ ಕೆಲಸಕ್ಕಿಳಿಯುತ್ತಾಳೆ. ಈ ಎಲ್ಲಾ ಕಾರಣಗಳಿಂದ ಸಣ್ಣ ಪುಟ್ಟ ಕಳ್ಳತನ ಮಾಡುವ ಈಕೆ ಊರ ಜನರ ನಡುವೆ ಕಳ್ಳಿ ಎಂಬ ಪಟ್ಟವನ್ನು ಕಟ್ಟಿಸಿಕೊಂಡೇ ಬದುಕು ನಡೆಸುತ್ತಿರುತ್ತಾಳೆ. ಕೊನೆಗೆ ತನ್ನ ಮಗ ಮಂಜುನಾಥ ಯಜ್ಞೇಶನ ಮದುವೆಯಲ್ಲಿ ಬೆಳ್ಳಿ ಪಾತ್ರೆಯನ್ನು ಕದ್ದ ಬಗ್ಗೆ ತಿಳಿದು ಹರಸಿ ಈ ಕೂಡಲೇ ಮನೆ ಬಿಟ್ಟು ಹೋಗುವುದು ಒಳ್ಳೆಯದೆಂದು ಹೇಳಿ ಕುಮ್ಮಕ್ಕು ನೀಡುತ್ತಾಳೆ.

ಈ ಕತೆಯಲ್ಲಿ ವೈದೇಹಿಯವರು ನೈತಿಕ ಪ್ರಶ್ನೆಯನ್ನು ಎತ್ತದೆ, ಹಸಿದವರ ಎದುರು ಉಂಡವರ ತೇಗಿನ ಠೇಂಕಾರವನ್ನು ವಿಮರ್ಶಿಸುತ್ತಾರೆ. ತಿಮ್ಮರಾಯನ ಹೆಂಡತಿ, ಗಜಾನನ ಭಟ್ಟ, ಕಾಮತರು ಇವರೆಲ್ಲರ ಔದಾರ್ಯತೆ ಇಲ್ಲದ ಅಮಾನವೀಯ ವರ್ತನೆಯೇ ಹಸಿದ ಬಚ್ಚಮ್ಮನಂಥವರನ್ನು ಕಳ್ಳಿಯನ್ನಾಗಿ ಮಾರ್ಪಡಿಸುತ್ತದೆ – ಎಂಬುದನ್ನು ವೈದೇಹಿಯವರು ಈ ಕತೆಯಲ್ಲಿ ಸೊಗಸಾಗಿ ವಿವರಿಸಿದ್ದಾರೆ. ಈ ಕತೆಯ ಬಚ್ಚಮ್ಮನಂತೆಯೇ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆಯ ಲಿಲ್ಲಿ ಬಾಯಿಗೂ ಕೂಡಾ ನೈತಿಕತೆಗಿಂತ ಬದುಕಿನ ಅವಶ್ಯಕತೆಗಳೇ ಪ್ರಧಾನವಾಗಿ ಕಾಣುತ್ತದೆ.

ವೈದೇಹಿಯವರ 'ಚಿಕ್ಕನ ಸತ್ಯಾಗ್ರಹ' ಕಥೆಯಲ್ಲಿ ಸುವರ್ಣಮ್ಮ ಎಂಬ ಮನೆಯೊಡತಿಯೊಡನೆ ಚಿಕ್ಕ ಎಂಬ ಕೆಲಸದವಳು ನಡೆಸುವ ಅನುದಿನದ ಸಂಭಾಷಣೆಯ ರೂಪದಲ್ಲಿ ಈ ಕಥೆ ಇದೆ. ಒಂದು ದಿನ ಚಿಕ್ಕನ ಸಪ್ಪೆ ಮುಖದಲ್ಲಿ ಚೂರು ಸಂತೋಷ ಕಾಣುತ್ತಿದೆ. ಮನೆಯೊಡತಿ ಕಾರಣ ಕೇಳಿದೊಡನೆ ಚಿಕ್ಕನ ನಿರೀಕ್ಷೆಗಳ ಕನಸುಗಳ ಕಥೆ ಬಿಚ್ಚಿಕೊಳ್ಳುತ್ತದೆ. ತನ್ನ ಮನೆಯೆದುರು ದೊಡ್ಡ ಮನೆಯೊಂದು ಏಳುತ್ತಿದೆ. ಆ ಶ್ರೀಮಂತರ ಮನೆಯಲ್ಲಿ ತನಗೊಂದು ಕೆಲಸ ಸಿಗಬಹುದು ಎಂಬುದು ಚಿಕ್ಕನ ಕನಸು. ಮೊದಲು ಅವಳಿಗೆ ನಾಲ್ಕು ಸಿಮೆಂಟಿನ ಖಾಲಿ ಚೀಲ, ಒಂದಿಷ್ಟು ಚೂರುಪಾರು ಕಬ್ಬಿಣ ಸಿಗುತ್ತದೆ. ಆ ಸಂತೋಷ ನಿಧಾನವಾಗಿ ಶೋಕಗೀತೆಯಾಗುತ್ತದೆ.

ಸಿಮೆಂಟಿನ ಧೂಳು ತಿಂದು ಮನೆಯವರಿಗೆಲ್ಲ ಕಾಯಿಲೆ, ಎದುರಿಗೆ ದೊಡ್ಡ ಭವನವೆದ್ದು ಮನೆಯೆಲ್ಲ ಕತ್ತಲೆ. ಮನೆಯೊಕ್ಕಲು ಮುಗಿದ ಮಾರನೆಯ ದಿನ ಅವಳ ಮುಖ ಸತ್ತು ಮರಗಟ್ಟಿದ ಹಾಗಿದೆ. ಅವರು ತಿಂದು ಬಿಸುಟ ಎಲೆಗಳೆಲ್ಲ ಇವಳ ಮನೆಯ ಕಡೆಗೆ. ಮಗಳು ಬಿದ್ದ ಎಲೆಗಳನ್ನೆಲ್ಲಾ ಬಾಚಿ ದೂರ ಎಸೆಯುವಾಗ, ಒಂದು ಎಲೆ ಅವರ ಮನೆಯೊಳಗೆ ಬಿದ್ದಿತಂತೆ. ಒಬ್ಬ ಗಂಡಸು ಬಂದು ಬಂದೂಕು ತೋರಿಸಿ ಬೆದರಿಸಿದನಂತೆ. ಅಕ್ಕಪಕ್ಕದವರೆಲ್ಲ ಬಾಯಿ ಮುಚ್ಚಿಕೊಂಡಿರು ಎಂದು ಅವಳಿಗೇ ಎಚ್ಚರಿಕೆ ಹೇಳಿದರು. ರಾತ್ರಿ ಹೊರಗೆ ಹೋಗಲೂ ಭಯ. ಎಷ್ಟೊತ್ತಿಗೆ ಏನು ಹೊಲಸು ಬಂದು ಮೈಮೇಲೆ ಬೀಳುತ್ತದೋ ಎಂದು.

ಬರಬರುತ್ತಾ ಚಿಕ್ಕನ ಶೋಕಗೀತೆ ತಾರಕಕ್ಕೇರಿ ಅರಣ್ಯರೋಧನವಾಗುತ್ತದೆ. ಇಲ್ಲಿಯವರೆಗೆ ಅವಳ ಮಾತು ಕೇಳಿದ ಮನೆಯೊಡತಿ ಈಗ ಎದ್ದು ಅಳು ನಿಲ್ಲಿಸಿ ತಾಯಿ ಮಗಳು ಕೆಲಸ ನೋಡಿ ಎಂದು ಖಚಿತವಾಗಿ ಹೇಳಿ ಬಾಗಿಲು ಹಾಕಿಬಿಡುತ್ತಾರೆ. "ನನ್ನ್ ಬದ್ಕೇ ಬರಿ ಹೆಣ್ಣ್‌ವೇಸೋ ಆಯ್ತುಲಬ್ಬೇ"[೫] ಎಂದು ಬೊಬ್ಬೆ ಹೊಡೆಯುವ ಚಿಕ್ಕನ ಸ್ವರ ತಾರಕಕ್ಕೇರಿ ತಟ್ಟನೆ ನಿಂತು ಬಿಡುತ್ತದೆ. ಮೇಲಿನ ನೀರವತೆ ಆ ರೋದನಕ್ಕಿಂತಲೂ ಶಕ್ತಿಯುತವಾದದ್ದು. ಬಡವರನ್ನು ಶ್ರೀಮಂತರು ಈ ರೀತಿ ಶೋಷಣೆ ಮಾಡುತ್ತಾರೆ. ಚಿಕ್ಕ ಇಲ್ಲಿ ಮೌನವಾಗಿ ಸತ್ಯಾಗ್ರಹವನ್ನು ಮಾಡುವುದರ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ವೈದೇಹಿಯವರ 'ಅವಲಂಬಿತರು' ಕಥೆಯಲ್ಲಿನ ಅಹಲ್ಯೆ, ಮಗು ನೋಡಿಕೊಳ್ಳುವ ಮನೆಕೆಲಸದ ಹುಡುಗಿ. ತನಗೆ ಸರಿಯಾಗಿ ಸಂಬಳ ಕೊಡದೆ ಹಾಲು ತುಪ್ಪ ಅವಿತಿಟ್ಟುಕೊಳ್ಳುವ, ಪೌಡರ್, ಕಾಡಿಗೆ ಮತ್ತು ರಬ್ಬರ್ ಹಾಕಿಕೊಂಡರೆ ಶಾರದಾಗೆ ಕೆಂಡದಂತಹ ಕೋಪ ಬರುತ್ತದೆ. ತನ್ನನ್ನು ಅವಮಾನಿಸುವ ತನ್ನ ಬಗ್ಗೆ ಇಲ್ಲಸಲ್ಲದ ಮಾತನಾಡುವ ಶಾರದಾ ಬಗ್ಗೆ ತನ್ನನ್ನು ಇಲ್ಲಿಗೆ ಕಳುಹಿಸಿದ ತಾಯಿಯ ಬಗ್ಗೆ ಅತಿಯಾದ ಕೋಪ ಅಹಲ್ಯೆಗೆ ಬರುತ್ತದೆ. ಶ್ರಮಕ್ಕೆ ತಕ್ಕ ಪ್ರತಿಫಲವಿಲ್ಲದ ವಾತಾವರಣ ಆಕೆಗೆ ಸಿಟ್ಟು ತರುತ್ತದೆ.

ದುಡಿತಕ್ಕೆ ತಕ್ಕ ಪ್ರತಿಫಲ ನೀಡದ ಗೋಸುಂಬೆ ಮನೆಮಾಲೀಕರ ಬಗೆಗಿನ ಅಸಹನೆ ಆಕೆಯ ಮಾತುಗಳಲ್ಲಿದೆ "ಹೇರ್‌ಬ್ಯಾಂಡ್ ನೀಡದ ಕಥಾ ನಿರೂಪಕಿ ನಾನು ಕೊಟ್ಟಿದ್ದಂತ ಹೇಳಬ್ಯಾಡ, ನಿಮ್ಮಮ್ಮ ಬರುವಾಗ ಕೊಟ್ಟ ಹಣದಿಂದ ತೆಗೆದುಕೊಂಡೆ ಅಂತ ಹೇಳು"[೬] ಎಂದಾಗ ಅಹಲ್ಯೆ ಕೊಡುವ ಉತ್ತರ "ಅದೆಲ್ಲ ಹೇಳಿಕೊಡಬೇಡ ನಂಗೆ. ಹೆಚ್ಚು ಕೇಳಿದರೆ ನಿಮ್ಮ ಗಂಡನ ಕಿಸೆಯಿಂದ ಕದ್ದೆ ಎನ್ನುತ್ತೇನೆ. ನನಗೆ

ದುಡ್ಡು ಕೊಡದೆ ಇವರು ದುಡಿಸಿಕೊಳ್ಳಬಹುದು. ನಾನು ಕದಿಯಬಾರದೇ?"[7] ಎಂಬ ಪ್ರತಿರೋಧ ವ್ಯಕ್ತವಾಗುತ್ತದೆ.

ಕೆಲಸಕ್ಕೆ ತಕ್ಕ ವೇತನ ಎಂಬ ಅರಿವು ಇರುವ ಅಹಲ್ಯಳಿಗೆ ತಾನು ಮೈನರೆದ ನಂತರ ಶಾರದೆ ಹೇಳಿದ ಮಾತು ಅಸಹನೀಯವಾಗುತ್ತದೆ. ಇನ್ನೂ ಇಟ್ಟುಕೊಂಡರೆ ಮನೇಲಿ ಹಾವು ಸಾಕಿದಂತೆ ಎನ್ನುವ ಮಾತುಗಳು ಮಾನಸಿಕ ಯಾತನೆಗೆ ಒಳಮಾಡಿ ಎಲ್ಲ ಬಿಟ್ಟು ಇವರ ಗಂಡನ ಹತ್ತಿರವೇ ಹೋಗಬೇಕಾ ನಾನು? ಹೊಟ್ಟೆಗಿಲ್ಲದಿದ್ದರೂ ಈ ಕೋಡಂಗಿಯ ಹತ್ತಿರ ಹೋಗಲಿಕ್ಕಿಲ್ಲ. ಅವನ ಸೊಡ್ಡು ಕಂಡರೆ ಸಾಕಲ್ಲ"[8] ಎಂದು ಶಾರದೆಯ ಗಂಡನನ್ನು ಆಡಿಕೊಳ್ಳುತ್ತಾಳೆ.

ಮಾರ್ಕ್ಸವಾದ ವ್ಯಕ್ತಿಯ ದುಡಿತ ಹಾಗೂ ಪ್ರತಿಫಲ ರೂಪವಾದ ಕೂಲಿಯ ಕುರಿತು ಚಿಂತನೆ ಮಾಡಿದೆ. ಬಡತನದ ಜೊತೆಗೆ ಶ್ರಮಿಕ ಹೆಣ್ಣು ತನ್ನ ಲೈಂಗಿಕತೆಯ ಶೋಷಣೆಯ ಕಾರಣ ಇನ್ನಿಲ್ಲದ ಅಭದ್ರತೆ, ಅಪಮಾನ, ಅಸೂಯೆ ಹಾಗೂ ತಿರಸ್ಕಾರಗಳನ್ನು ಎದುರಿಸಬೇಕಾಗಿ ಬರುತ್ತದೆಂಬ ಅರಿವನ್ನು ವೈದೇಹಿಯವರ ಈ ಕಥೆ ನೀಡುತ್ತದೆ. ಮಾರ್ಕ್ಸವಾದವನ್ನು ಮಹಿಳಾ ದೃಷ್ಟಿಕೋನದಿಂದ ಪುನರ್‌ವ್ಯಾಖ್ಯಾನಕ್ಕೊಳಪಡಿಸಿ ಸಿದ್ಧಗೊಂಡ ಮಾರ್ಕ್ಸವಾದಿ ಸ್ತ್ರೀವಾದಿ ಚಿಂತನೆಯ ಹೊಳಹುಗಳನ್ನು ಈ ಕಥೆಯಲ್ಲಿ ಕಾಣಬಹುದು.

ಸಾರಾ ಅಬೂಬಕ್ಕರ್‌ರ "ಮಸೀದಿ ಕಟ್ಟುವವರು" ಕತೆಯು ಮುಖ್ಯವಾಗಿ ಬಡತನ ಮತ್ತು ಧರ್ಮಗಳಿಗೆ ಸಂಬಂಧಿಸಿದ್ದಾಗಿದೆ. ಬಡತನವೆಂಬುದು ಮನುಷ್ಯ ಸಮಾಜವನ್ನು ಹಿಂಡುತ್ತಿರುವ ಒಂದು ದೊಡ್ಡ ಶಾಪ. ಅದು ಅವನ ಇಡೀ ಜೀವನವನ್ನೇ ಅಲ್ಲೋಲ ಕಲ್ಲೋಲಗೊಳಿಸಿ ಬಿಡುತ್ತದೆ. ಈ ದೃಷ್ಟಿಯಲ್ಲಿ ಈ ಕತೆಯಲ್ಲಿ ಬರುವ ಮೂಸೆಯ ಪಾತ್ರ ಬಹು ಮುಖ್ಯವಾದುದು.

ಯಾವುದೇ ಒಬ್ಬ ಬಡತನದಲ್ಲಿ ಬೇಯುವ ವ್ಯಕ್ತಿ ಹಣಗಳಿಸಿ ನೆಮ್ಮದಿಯ ಜೀವನ ಸಾಗಿಸಬೇಕೆಂಬ ಬಯಕೆಯನ್ನು ಇಟ್ಟುಕೊಂಡು ಇರುತ್ತಾನೆ. ಅದಕ್ಕಾಗಿ ತನ್ನ ಜೀವನದುದ್ದಕ್ಕೂ ಅನೇಕ ಕಸರತ್ತುಗಳನ್ನು ಮಾಡುತ್ತಾನೆ. ಮೂಸೆಯೂ ಸಹ ತನ್ನ ಅತಿಯಾದ ಬಡತನದಿಂದ ಹೊರ ಬರಲು ಕೊಲ್ಲಿಗೆ ಹೋಗುವ ಕನಸು ಕಾಣುತ್ತಾನೆ. ಕೊಲ್ಲಿಗೆ ಹೋಗಲು ಬೇಕಾಗುವ ಹಣ ಹೊಂದಿಸಲು ಹೆಂಡತಿ ಅಸ್ಮಾಳನ್ನು ಹೊಡೆದು ತಂದೆಯಿಂದ ವರದಕ್ಷಿಣೆ ಹಣವನ್ನು ತರಲು ಒತ್ತಾಯಪಡಿಸುತ್ತಾನೆ.

ವಿದೇಶಕ್ಕೆ ಹೋಗಿ ಹೆಚ್ಚು ಹೆಚ್ಚು ಹಣ ಸಂಪಾದನೆ ಮಾಡಬಹುದು ಎಂಬ ಭ್ರಮೆ ಈಗಲೂ ನಮ್ಮ ಸಮಾಜದಲ್ಲಿ ಸಾಕಷ್ಟಿವೆ. ಕೊಲ್ಲಿಗೆ ಹೋಗುವುದಕೋಸ್ಕರ ಹಣ ಹೊಂದಿಸಲು ಕಷ್ಟದಲ್ಲಿಯೂ ಕಡು ಕಷ್ಟವನ್ನು ಪಡಬೇಕಾಗುತ್ತದೆ. ಬಡವರು ಶ್ರೀಮಂತಿಕೆ ಬಯಸಿ ಹೊರಟರೆ ಮತ್ತಷ್ಟು ಬಡತನಕ್ಕೆ ಕಾರಣವಾಗುತ್ತಾರೆ. ಕೊಲ್ಲಿಗೆ ಹೋಗುವ ಆಸೆಯೇ ಅವರನ್ನು ಮತ್ತೂ ಬಡತನದ ಕೂಪಕ್ಕೆ ತಳ್ಳಲ್ಪಡುತ್ತದೆ. ಕೊಲ್ಲಿ ರಾಷ್ಟ್ರಕ್ಕೆ ಹೋಗಿ ಸಾಕಷ್ಟು ಹಣಗಳಿಸಿ ಬಂದವರೂ ಇರಬಹುದು.

ಆದರೆ ಮೂಸೆಯಂಥ ಬಡವರು ಅಲ್ಲಿಂದ ಸಂಪಾದಿಸಿ ತರುವುದು ಅಷ್ಟರಲ್ಲೇ ಇದೆ. ಅಲ್ಲಿಯ ಮಾಲೀಕರೂ ಸಹ ಇಲ್ಲಿಯ ಶ್ರೀಮಂತರ ಹಾಗೆಯೇ ಶೋಷಣೆ ಮಾಡುವವರೇ ಆಗಿರುತ್ತಾರೆ. ಕೊಲ್ಲಿಯಲ್ಲಿ ಮೂಸೆಗೂ, ಆತ ಕೆಲಸ ಮಾಡುತ್ತಿದ್ದ ಮಾಲೀಕನ ನಡುವೆ ಗಲಾಟೆಯಾಗಿ ಮೂಸೆ ಜೈಲಿಗೆ ಹೋಗಬೇಕಾಗುತ್ತದೆ.

ಬಡವರ, ಕೂಲಿ ಕಾರ್ಮಿಕರ ಶೋಷಣೆ ಯಾವ ದೇಶದಲ್ಲೂ ತಪ್ಪಿದ್ದಲ್ಲ. ಇಲ್ಲಿಯ ಶ್ರೀಮಂತ ವರ್ಗವೂ ಅದರಿಂದ ಹೊರತಲ್ಲ. ಕೊಲ್ಲಿಗೆ ಕಳುಹಿಸಲು ವೀಸಾ, ಪಾಸ್ ಪೋರ್ಟ್‌ಗಳನ್ನು ಕೊಡಿಸುವ ದಲ್ಲಾಳಿಯೂ ಆದ ಶೇಕಾಲಿ ಆಗರ್ಭ ಶ್ರೀಮಂತನಾಗಿದ್ದಾನೆ. ಒಂದು ಕಡೆ ಮೂಸೆ ಮುಂಬೈಯಲ್ಲಿ ಊಟವೂ ಇಲ್ಲದೆ ಒದ್ದಾಡುತ್ತಿದ್ದರೆ ಶೇಕಾಲಿಯ ಹೆಂಡತಿ ತನ್ನ ಮನೆಯವರ ಕ್ಷೇಮ ಸಮಾಚಾರ ವಿಚಾರಿಸಲು ಮಾಡಿದ ದೂರವಾಣಿ ಕರೆಯೇ ಇನ್ನೂರು ರೂಪಾಯಿಯಾಗಿರುತ್ತದೆ. ಈ ದೃಶ್ಯ ಪ್ರಸ್ತುತ ಸಮಾಜದ ಆರ್ಥಿಕ ಅಸಮಾನತೆಯನ್ನು ಬಹಳ ಪರಿಣಾಮಕಾರಿಯಾಗಿ ಸೂಚಿಸುವುದನ್ನು ಸಾರಾರವರ ಈ ಕತೆಯಲ್ಲಿ ಹೇಳಿದ್ದಾರೆ.

ಗಂಗಾಪಾದೇಕಲ್‌ರವರು ತಮ್ಮ ಕಥೆಗಳಲ್ಲಿ ವ್ಯವಸ್ಥೆಯಲ್ಲಿರುವ ಸಾಮಾಜಿಕ ಅಸಮಾನತೆಯನ್ನು ಕಥೆಗಳ ಪಾತ್ರಗಳು ಪ್ರತಿಕ್ರಿಯಿಸುವುದರೊಂದಿಗೆ ಪ್ರತಿರೋಧದ ಸ್ವರೂಪವನ್ನು ಸ್ಪಷ್ಟಪಡಿಸುತ್ತಾರೆ. ಅದು ಬಡವ ಮತ್ತು ಶ್ರೀಮಂತ ಎನ್ನುವ ಅಸಮಾನತೆ ಹಾಗೂ ಗಂಡು ಹೆಣ್ಣು ಎನ್ನುವ ತಾತ್ಸಾರ ಇದ್ದರೂ ಹೆಣ್ಣು ತನ್ನ ದೇಹವನ್ನು ಬಂಡವಾಳವಾಗಿಸಲು ಒಪ್ಪಿಕೊಳ್ಳದೇ ಅದನ್ನು ನಿರಾಕರಿಸುವುದರೊಂದಿಗೆ ಪ್ರತಿರೋಧದ ಧ್ವನಿ ಗೋಚರವಾಗುತ್ತದೆ.

"ಚಿನ್ನದ ಸೂಜಿ" ಕತೆಯಲ್ಲಿ ರಜನಿ ಶ್ರೀಮಂತರ ಮನೆಯ ಸೊಸೆಯಾಗಿ ಅಲ್ಲಿನ ರೀತಿ ರಿವಾಜುಗಳಿಗೆ ಒಗ್ಗಿಕೊಳ್ಳದೇ ಚಡಪಡಿಸುತ್ತಾಳೆ. ಬಂದವರ ಎದುರು ಅತ್ತೆಯ ಮಾತಿನ ದಾಟಿ

ನೋಡಿದಾಗ ಅವಳು ಅಸಹನೆಯಿಂದ ಕುದಿಯುತ್ತಿದ್ದಳು. ಆದರೆ ಎಲ್ಲವನ್ನು ಸಹಿಸಿಕೊಂಡಿದ್ದಳು. ಕೇವಲ ಆರ್ಥಿಕ ಬಲವೊಂದೇ ತನ್ನಲ್ಲಿಲ್ಲದ್ದು, ಮಾನ ಮಾರ್ಯಾದೆ, ವಿದ್ಯೆ, ಗುಣ, ರೂಪಗಳಲ್ಲಿ ತಾನು ಏನೇನೋ ಕಡಿಮೆಯಿಲ್ಲ ಎಂದು ವಾದಿಸುವ ಇಚ್ಛೆಯಾಗುತ್ತಿತ್ತು. ಆದರೆ ಏನೋ ಹಿಂಜರಿಕೆ ಹೀಗೆ ಎನ್ನಲಾಗದ ಅಳುಕು ನೆನೆಸುತ್ತಾ ನಿಟ್ಟುಸುರಿಟ್ಟ ರಜನಿ ಆಮೇಲೆ ತನ್ನಲ್ಲಿಯೇ ಹೇಳಿಕೊಂಡಳು.

ಶ್ರೀಮಂತರಿಗೆ ಬಡತನದ ಬಗ್ಗೆ ಅಸಡ್ಡೆ, ತಿರಸ್ಕಾರ ಇರುವುದನ್ನು ರಜನಿಯ ಅತ್ತೆಯ ಮುಖಾಂತರ ಈ ಕತೆಯಲ್ಲಿ ಕಾಣಬಹುದು. ತನ್ನ ಮಗನಲ್ಲಿ "ಈ ಹೆಣ್ಣು ಬೇಡಪ್ಪಾ ಎಂದು ಕೇಳಿದಿಯಾ" ಅಲ್ಲಪ್ಪಾ ತಿಪ್ಪೆಯಲ್ಲಿರುವುದನ್ನು ತಂದು ಉಪ್ಪರಿಗೆ ಏರಿಸಿದರೂ ಅದು ತಿಪ್ಪೆ ಕಂಡರೆ ಹಾರದೇ ಉಳಿದಿತೇ"?[೮] ಇನ್ನಾದರೂ ಒಂದಷ್ಟು ಮ್ಯಾನರ್ಸ್, ನಮ್ಮಂತಸ್ತಿಗೆ ತಕ್ಕಂತೆ ಕಲಿಯಲಿ ಎಂದಳು.

ಆಗ ಪತಿ ರಘು "ಅಮ್ಮ ಹೇಳಿದ್ದು ತಿಳಿಯಿತಲ್ಲ? ಎಂದಾಗ ಒಳ್ಳೆಯ ಮ್ಯಾನರ್ಸ್ ಅಂತೆ ಮ್ಯಾನರ್ಸ್ ಯಾವುದು ಮ್ಯಾನರ್ಸ್ ? ಅನಾಥಾಶ್ರಮಗಳಿಗೆ ಕಾರಿನಲ್ಲಿ ಹೋಗಿ ನಾಲ್ಕು ಮಕ್ಕಳಿಗೆ ಒಣಗಿದ ಮೂಸಂಬಿ ನೀಡಿ ಫೋಟೋ ಹೊಡೆಸಿಕೊಳ್ಳುವುದಾ? ಅದು ಮ್ಯಾನರ್ಸ್‌ರೀ? ಮನೆ ಕೆಲಸದವಳು ಮಗುವಿಗೆ ಹುಷಾರಿಲ್ಲ ಹೇಳಿ ಎರಡು ದಿನ ರಜೆ ಮಾಡಿದ್ದಕ್ಕೆ ಸಂಬಳ ಕಟ್ ಮಾಡಿದರಲ್ಲ ನಿಮ್ಮಮ್ಮನದು ಅದೇ ಮ್ಯಾನರ್ಸೋ?"[೯] ಎಂದು ಅಬ್ಬರಿಸುತ್ತಾಳೆ. ತನ್ನ ಗಂಡ, ಅತ್ತೆ ಮನುಷ್ಯರಂತೆ, ಮಾನವೀಯತೆ ಇಲ್ಲದ ಹೃದಯ ಹೀನರಂತೆ ವರ್ತಿಸುವುದನ್ನು ಖಂಡಿಸುತ್ತಾಳೆ. ಚಿನ್ನದ ಸೂಜಿಯೆಂದು ಯಾರೂ ಕಣ್ಣಿಗೆ ಚುಚ್ಚಿಕೊಳ್ಳುವುದಿಲ್ಲ ಅಲ್ಲವೇ? ಎಂದು ಪ್ರಶ್ನಿಸುವುದರ ಮೂಲಕ ಪ್ರತಿರೋಧಿಸುತ್ತಾಳೆ.

ಸಾರಾ ಅಬೂಬಕ್ಕರ್ ರವರ 'ಅರಕ್ಷಿತ' ಕತೆಯಲ್ಲಿ ಕೇಂದ್ರ ಪಾತ್ರವಾದ ಕೈಜುಮ್ಮ ತನ್ನ ಬಡತನದ ಕುಟುಂಬವನ್ನು ರಕ್ಷಿಸಲು ಪಡುವ ಪಾಡನ್ನು, ಅನುಭವಿಸುವ ನೋವನ್ನು ಚಿತ್ರಿಸಿದ್ದಾರೆ. ಕೈ ಜುಮ್ಮಳ ಗಂಡ ಉಸ್ಮಾನ್ ದೂರದ ಯಾವುದೋ ವ್ಯಾಪಾರ ಮಾಡುತ್ತಾ ವರ್ಷಕ್ಕೊ ಆರು ತಿಂಗಳಿಗೊ ಒಮ್ಮೆ ಊರಿಗೆ ಬರುತ್ತಾನೆ. ಅಲ್ಪಸ್ವಲ್ಪ ಹಣಕೊಟ್ಟು ಸಮಸ್ಯೆಗಳನ್ನು ಹೇಳುವಷ್ಟರಲ್ಲಿ ಅಲ್ಲಿಂದ ಪರಾರಿಯಾಗಿರುತ್ತಾನೆ.

ಏಳು ಜನ ಮಕ್ಕಳನ್ನು ಸಾಕುತ್ತಾ ಕೈ ಜುಮ್ಮ ಪುಟ್ಟ ಮನೆಯಲ್ಲಿದ್ದವಳು. ದೊಡ್ಡ ಮಗಳ ಮದುವೆ ಮಾಡುವ ಸಲುವಾಗಿ ಕಾಡಿಬೇಡಿ, ಗಂಡನನ್ನು ಪೀಡಿಸಿ ಗುಡಿಸಿಲನ್ನು ಬಿಟ್ಟು ಒಂದೆರಡು ಕೋಣೆಗಳಿರುವ ಸಣ್ಣ ಮನೆಯೊಂದನ್ನು ಆರು ತಿಂಗಳಿಗಾಗಿ ಬಾಡಿಗೆಗೆ ಪಡೆದಿದ್ದಳು. ಎಂಟು ತಿಂಗಳು ಆದರೂ

ಮನೆಯನ್ನು ಬಿಡುವುದಿಲ್ಲ. ಬಾಡಿಗೆಯನ್ನು ತೀರಿಸಲಾರದ ಪರಿಸ್ಥಿತಿ ಜೊತೆಗೆ ಮಗಳು ಗರ್ಭಿಣಿ ಎಂಬ ಸುದ್ದಿ ಬೇರೆ. ಗಂಡನ ಸುಳಿವೇ ಇಲ್ಲ. ಏಕಾಂಗಿ ಕೈಜುಮ್ಮನ ಆರ್ಥಿಕ, ಸಾಮಾಜಿಕ ಬದುಕು ಹೀಗೆ ಚಿತ್ರಿತವಾಗಿದೆ. ಮಗಳ ಮದುವೆಯಾದ ಗಡಿಬಿಡಿಯಲ್ಲಿ ಕೈ ಜುಮ್ಮ ಮನೆ ಬಾಡಿಗೆಯ ವಿಷಯ ಯೋಚಿಸಿಯೇ ಇರಲಿಲ್ಲ ಉಸ್ಮಾನನೂ ಆಕೆಯೊಡನೆ ಆ ವಿಷಯ ಏನೂ ಹೇಳಿರಲಿಲ್ಲ.

ಆದರೆ ಪ್ರತಿ ತಿಂಗಳೂ ಮನೆ ಬಾಡಿಗೆ ಕೊಡಬೇಕೆಂದಾಗ ಆಕೆಗೆ ಅದೊಂದು ಹೊರಲಾರದ ಹೊರೆಯೇ ಆಗುತ್ತದೆ. ಮೂರು ಮಕ್ಕಳು ಬೀಡಿ ಕಟ್ಟುತ್ತಿದ್ದರೂ ಮದುವೆಯ ಸಾಲ, ಚಿನ್ನ ಅಡವಿಟ್ಟು ಬ್ಯಾಂಕಿನ ಬಡ್ಡಿಯನ್ನೇ ಕೊಡಲು ಹೆಣಗಾಡಿದ ಆಕೆ ಮನೆಯನ್ನೂ ಬಿಡಬೇಕೆಂದಾಗ ಕಂಗಾಲಾಗುತ್ತಾಳೆ. ಇನ್ನೂ ನಲ್ವತ್ತು ವರ್ಷವೂ ತುಂಬದ ಆಕೆ "ಯಾ, ಅಲ್ಲಾಹ್ ನನ್ನನ್ನೊಮ್ಮೆ ಈ ಲೋಕದಿಂದ ಕರೆದುಕೊಂಡು ಹೋಗು ಎಂದು ಬೇಡಿಕೊಳ್ಳುವುದು ಸಾಮಾನ್ಯವಾಯಿತು"[೧೦] ಎಂಬ ಮಾತುಗಳಲ್ಲಿ ಬದುಕನ್ನು ನಡೆಸಲು ಹೋರಾಟ ಮಾಡುತ್ತಿರುವ ಹೆಣ್ಣಿನ ನೋವು, ದುಃಖ, ಅಸಹಾಯಕತೆಗಳು ಮಡುಗಟ್ಟಿದೆ.

ಬಾಡಿಗೆ ಮನೆಕೊಟ್ಟ ಯಜಮಾನ ತನ್ನ ಕುಟುಂಬ ಸಮೇತ ಬಂದು ಅಲ್ಲಿಯೇ ಇರತೊಡಗಿದ. ಅಳಿಯ ಬಂದು ಯಾವಾಗ ನಿಮ್ಮ ಮಗಳನ್ನು ಸೀಮಂತ ಮಾಡಿ ಹೆರಿಗೆಗೆ ಕರೆ ತರುವಿರಿ ಎಂದು ಕೇಳುತ್ತಾನೆ. ಇದರಿಂದ ಹತಾಶಳಾಗಿ ತನ್ನ ಹನ್ನೊಂದು ವರ್ಷದ ಮಗ ಹಮೀದ್ ನನ್ನು ಶಾಲೆ ಬಿಡಿಸಿ ಗಂಡನನ್ನು ಹುಡುಕಿ ತರಲು ಕಳುಹಿಸುತ್ತಾಳೆ ಮಗ ಅತ್ತ ಹೋದ ನಂತರ ಈ ಕಡೆಗೆ ಗಂಡ ಬರುತ್ತಾನೆ. ತಾನು ಇದ್ದ ಕಡೆಯಲ್ಲಿ ಹಿಂದೂ ಮುಸ್ಲಿಂ ಗಲಾಟೆ ಇದೆ ಎಂದು ಉಸ್ಮಾನ್ ಹೇಳಿದ್ದರಿಂದ ಭಯ, ಚಿಂತೆ, ನೋವುಗಳಿಂದ ಪರಿತಪಿಸುತ್ತಾ ಹಮೀದ್ ನಿಗಾಗಿ ದಾರಿ ಕಾಯುವ ಪರಿಸ್ಥಿತಿ ಉಂಟಾಗುತ್ತದೆ.

ಸಾರಾ ಅಬೂಬಕ್ಕರ್‌ರವರ 'ಒಂದು ಬದುಕಿನ ಕೆಲವು ಪುಟಗಳು' ಕತೆಯಲ್ಲಿ ನಿರೂಪಕಿಯ ಮನೆಯಲ್ಲಿ ಆಗಾಗ ಕೆಲಸ ಮಾಡಲು ಬರುತ್ತಿದ್ದ ಕದೀಜಾಳ ದುರಂತ ಬದುಕನ್ನು ಕುರಿತ ಕಥೆ ಇದಾಗಿದೆ. ಕದೀಜಾ ತನ್ನ ಬಡತನದ ಬದುಕಿನಿಂದ ಬಿಡುಗಡೆ ಹೊಂದಲು ಸುಲಭವಾಗಿ ಮೋಸ ಹೋಗಿ ಮತಾಂತರವಾಗುವುದು ಇಲ್ಲಿ ಕಂಡುಬರುತ್ತದೆ ಮತ್ತೆ ಮೊದಲ ಧರ್ಮಕ್ಕೆ ಪುನರ್ ಮತಾಂತರಗೊಳ್ಳುವ ಸ್ಥಿತಿ ಕತೆಯಲ್ಲಿ ನಿರೂಪಿತಗೊಂಡಿದೆ.

ಕದೀಜಾಳ ಭಾವ ಮತ್ತು ತಾಯಿ ಸೇರಿ ಮುದುಕನಿಗೆ ಮದುವೆ ಮಾಡಿಕೊಡಲು ಪ್ರಯತ್ನಿಸಿದಾಗ ಅದನ್ನು ನಿರಾಕರಿಸಿ ನಿರೂಪಕಿಯ ಸಹಾಯದಿಂದ ಬೆಂಗಳೂರು ಸೇರುತ್ತಾಳೆ ನಂತರ ಆಕೆ ತಾನು ಸೆಲೀನಾ ಆದ ಕಥೆಯನ್ನು ಹೇಳುತ್ತಾಳೆ. ಆ ನಂತರ ಮಿಲಿಟರಿಯಲ್ಲಿದ್ದ ಗಂಡನ ಸಾವು, ಗಂಡನ ಮಗ ಜೋಸೆಫ್‌ನಿಂದ ಮಗಳು ಫಿಲೋಮಿನಾಳ ಬದುಕು ಹಾಳಾಗಿ ಆತ್ಮಹತ್ಯೆ ಮಾಡಿಕೊಳ್ಳುವುದು, ಕೊನೆಗೆ ಅಪರಿಚಿತರ ಮರುಳುತನದಿಂದ ಸೈಟು ಕಳೆದುಕೊಂಡು ಆಗ ಮನೆಯ ಯಜಮಾನ ಆಕೆಯೊಡನೆ, "ಖಾಲಿ ಸೈಟನ್ನು ಹಾಗೇ ಬಿಟ್ಟರೆ ಸರಕಾರ ಹಿಂತೆಗೆದುಕೊಳ್ಳುತ್ತದೆ. ನಿನ್ನಿಂದ ಅದರಲ್ಲಿ ಮನೆ ಕಟ್ಟಿಸಲು ಸಾಧ್ಯವಿಲ್ಲವಲ್ಲ ? ಅದನ್ನು ನಮಗೇ ಮಾರಿ ಬಿಡು"[೧೧] ಎಂಬ ಮಾತುಗಳಿಂದ ಮೋಸ ಹೋಗಿ ಸೈಟು, ಹಣ ಎಲ್ಲವನ್ನು ಕಳೆದುಕೊಂಡು ನಿರ್ಗತಿಕಳಾಗಿರುವ ಪರಿಯನ್ನು ಕಥೆಗಾರ್ತಿ ನಿರೂಪಿಸಿದ್ದಾರೆ.

"ನಿಯಮ ನಿಯಮಗಳ ನಡುವೆ" ಕತೆಯಲ್ಲಿ ಜೊಹರಾ ಮತ್ತು ಖಾದರ್ ಇಬ್ಬರು ಮಕ್ಕಳಾದ ನಂತರ ಹಣಕಾಸಿನ ತೊಂದರೆಯಾಗುತ್ತದೆ. ಆಗ ಖಾದರ್ ಜೋಹರಾಳ ಕಿವಿಯ ಆಭರಣದ ವಿಷಯವಾಗಿ ಜಗಳವಾಗಿ ತವರಿಗೆ ಕಳುಹಿಸುತ್ತಾನೆ. ಅಷ್ಟರಲ್ಲಿ ಆಕೆ ಮತ್ತೆ ಗರ್ಭಿಣಿಯಾಗಿರುತ್ತಾಳೆ ನಂತರ ಹೆಂಡತಿ ತನಗೆ ಒಡವೆ ಕೊಡಲಿಲ್ಲವೆಂಬ ಕಾರಣಕ್ಕೆ ತಲಾಖ್ ಕೊಡುತ್ತಾನೆ ಇದರಿಂದ ತುಂಬ ನೊಂದುಕೊಂಡು ತವರಿನಲ್ಲಿ ತಾಯಿಯ ತಮ್ಮನ ಬೈಗಳು, ಅಸಡ್ಡೆ, ತಿರಸ್ಕಾರ ಜಿಗುಪ್ಸೆಗಳನ್ನು ಸಹಿಸಿಕೊಂಡು ಗಂಡು ಮಗುವಿಗೆ ಜನ್ಮಕೊಡುತ್ತಾಳೆ.

ಆಗ ದೂರದ ಸಂಬಂಧಿ ಫಾತಿಮ್ಮಳಿಂದ ಮತ್ತೆ ಕಾದರ್ ಮದುವೆಯಾಗುವ ಸಂಗತಿ ಅದರೊಂದಿಗೆ ಕಾದರ್‌ನ ಗುಣ ಹೀಗೆ ವ್ಯಕ್ತವಾಗಿದೆ. ನಿಮ್ಮ ಕಾದರ್ ನನ್ನ ಅಮೀನಳ ಮನೆಗೆ ಬಂದಾಗ ನನ್ನ ಮಗಳಿಗೆ ಎಂತಹ ದುರ್ಗತಿ ತಂದಿತ್ತಾ? ಗರ್ಭಿಣಿ ಇರುವಾಗ ತಲಾಖ್ ನೀಡಿದ್ದು ಅಲ್ಲದೇ ಹೆರಿಗೆಯಾದ ಬಳಿಕ ನಾಲ್ಕು ಕಾಸಾದರೂ ಕಳುಹಿಸಲಿಲ್ಲವಲ್ಲ. ಇಂತಹ ಗಂಡಸರಿಗೆ ಶಿಕ್ಷೆ ಕೊಡುವರಾರು?"[೧೨] ಎನ್ನುತ್ತಾನೆ. ಖಾದರ್ ತನ್ನ ಹೆಂಡತಿಯನ್ನು ಮದುವೆಯಾಗಲು ಸಿದ್ಧನಿರುವುದಕ್ಕಾಗಿ ಇಸ್ಲಾಂ ಧರ್ಮದ ಸಂಪ್ರದಾಯದಂತೆ 'ಒಜ್ಜತ್' (ಒಂದು ದಿನದ ಮದುವೆ) ಮಾಡಲು ಸಿದ್ಧತೆಗಳು ನಡೆಯುತ್ತದೆ.

ಹೆರಿಗೆಯಾದ ನಂತರ ಒಮ್ಮೆಯೂ ಋತುಸ್ರಾವವಾಗದ ಜೊಹರಾಳಿಗೆ ಮಧ್ಯವರ್ತಿ ಫಾತಿಮ್ಮಾಳ ಮಾತುಗಳನ್ನು ಕೇಳಿ ಬದುಕು ಹಸನಾಗಲಿ ಎಂದು ತಾಯಿ ಅಮೀನ ಪ್ರಯತ್ನಿಸುತ್ತಾಳೆ. ಆದರೆ ಧಾರ್ಮಿಕ

ಆಚರಣೆಯನ್ನು ಪುರುಷಪ್ರಧಾನ ಸಂಸ್ಕೃತಿಯನ್ನು ಪಾಲಿಸಲು ಹೋಗಿ ಪ್ರಕೃತಿ ಧರ್ಮದ ವಿರುದ್ಧ ಹೋರಾಡಲು ಸಾಧ್ಯವಾಗದೇ ಜೊಹರಾ ಸಾವನಪ್ಪುವ ದುರಂತ ಬದುಕಿನ ಚಿತ್ರಣ ಇಲ್ಲಿದೆ. ಬಹುತೇಕ ಸಾರಾ ಅವರು ಬಡಕುಟುಂಬಗಳಲ್ಲಿನ ಹೆಣ್ಣು ಮಕ್ಕಳ ಮತ್ತು ತಲಾಖ್ ಪಡೆದ ಮಕ್ಕಳ ತಾಯಂದಿರು ಅನುಭವಿಸುವ ನಂತರ ತಿರಸ್ಕಾರಕ್ಕೆ ಒಳಗಾಗುವ ಹೆಣ್ಣಿನ ಅಂತರಂಗದ ಸಂವೇದನೆ ಮನಕರಗುವಂತೆ ಚಿತ್ರಿತವಾಗಿದೆ.

"ಖೆಡ್ಡಾ" ಸಂಕಲನದ 'ಬಿಸಿಲ್ಗುದುರೆಯ ಬೆನ್ನುಹತ್ತಿ' ಎಂಬ ಕಥೆಯಲ್ಲಿ ಬಡಕುಟುಂಬದ ಇಬ್ಬರು ಹೆಣ್ಣು ಮತ್ತು ಒಬ್ಬ ಗಂಡುಮಗುವಿನ ಪೋಷಣೆಯ ಭಾರದಲ್ಲಿ ಒದ್ದಾಡುತ್ತಾ ಬದುಕು ಸವೆಸುತ್ತಾರೆ. ಕಜ್ಜಮ್ಮ ತನ್ನ ಮಗಳಿಗೆ ಅಡುಗೆಯ ವಿಚಾರವಾಗಿ ಹೇಳುವ ಮಾತುಗಳು ಹೀಗೆ ಚಿತ್ರಿತವಾಗಿದೆ. ನೆಬೀಸಾ ಸಾರಿಗೆ ಬೇಗ ಕಡೆದಿಟ್ಟು ಹಮೀದ್ ಬರುವಾಗ ಮೀನೇನಾದರೂ ತರುತ್ತಾನೆ. ಖತಿಜಮ್ಮ ಕುಳಿತಲ್ಲಿಂದಲೇ ಮಗಳಿಗೆ ಕೂಗಿ ಹೇಳಿದಳು. ಉಳಿದ ಬೀಡಿ ನಾನು ಕಟ್ತೇನೆ.

ಅನ್ನ ನಮಗೆ ಮೂವರಿಗೆ ಮಧ್ಯಾಹ್ನವೇ ಸಾಕು. ನಿನ್ನಮ್ಮ ಮತ್ತು ಹಮೀದ್‌ಗಾಗುವಷ್ಟು ಅಕ್ಕಿ ತೊಳೆದಿಡು ಮೀನಿನ ಬಳಕೆ, ಬೀಡಿ ಕಟ್ಟುವ ಬದುಕು, ಗಂಡಸರಿಗೆ ಕೊಡುವ ಪ್ರಾಮುಖ್ಯತೆಯನ್ನು ಗುರುತಿಸಬಹುದು. ನಂತರ ಮಗ ಬೆಳೆದು ಸ್ವಲ್ಪ ವಿದ್ಯೆಯನ್ನು ಪಡೆದು ಕೊಲ್ಲಿಗೆ ಸಂಪಾದಿಸಲು ಹೋಗುತ್ತಾನೆ. ಅಲ್ಲಿ ಮಾದಕ ದ್ರವ್ಯ ಕಳ್ಳಸಾಗಾಣಿಕೆಯ ಮೋಸದ ಆರೋಪಕ್ಕೆ ಬಲಿಯಾಗಿ ಕೊಲ್ಲಲ್ಪಡುತ್ತಾನೆ.

ಬಡತನದ ಕುರಿತು ಆಗಾಧವಾದ ನೋವು ಕಾಳಜಿ ಉಳ್ಳವರು ಅನುಪಮಾ ಪ್ರಸಾದ್ ಸಮಾಜದಲ್ಲಿ ಅಲ್ಲಲ್ಲಿ ಕಂಡುಬರುವ ಆರ್ಥಿಕ ಅಸಮಾನತೆ ತೊಂದರೆಗಳನ್ನು ಹೆಚ್ಚಿನ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಬಡತನದ ತೀವ್ರತೆ ಓದುಗರ ಮನ ಕಲಕುವಂತೆ 'ಹಸಿವು' ಕಥೆಯಲ್ಲಿ ಮೂಡಿ ಬಂದಿದೆ. ಇಲ್ಲಿ ವಿಧವೆ ತಾಯಿಯೊಬ್ಬಳು ತನ್ನ ಸಂಸಾರ ಮತ್ತು ಮೂರು ಮಕ್ಕಳಿಗಾಗಿ ಪಡುವ ಪಾಡು ಹೇಳತೀರದ್ದು.

ಈ ಕಥೆಯ ನಾಯಕಿಯ ಬದುಕೇ ಒಂದು ದುರಂತ. ಆರ್ಥಿಕವಾಗಿ ಸಂಪುರ್ಣ ಅಧೋಗತಿ ಇಳಿದ ಅಸಹಾಯಕ ಹೆಣ್ಣು ಮಗಳ ದುರಂತ ಕತೆಯೇ 'ಹಸಿವು' ಅವಳು ಮನೆಯ ಆಧಾರ ಎಂದರೆ ಅವಳು ಸಾಕುತ್ತಿದ್ದ ಒಂದು ಆಕಳು. ಅದರ ಹಾಲನ್ನು ಮಾರಿ ಹೇಗೋ ಬಹಳ ಕಷ್ಟದಿಂದ ಮಕ್ಕಳ

ಹೊಟ್ಟೆ ತುಂಬಿಸುತ್ತಿದ್ದ ಆಕೆಯ ಹಸುವಿನ ಹೆಣ. ನಡುವೆ ಆ ಬಡಪಾಯಿ ಹೆಣ್ಣುಮಗಳ ಚಿತ್ರಣ ಎಂತಹವರನ್ನು ಮನಸ್ಸನ್ನು ಕರಗಿಸಿ ಹಸು ಒಂದು ದಿನ ರೋಗದಿಂದ ಸತ್ತೇ ಹೋದಾಗ ಆಕೆ ದಿಕ್ಕೇ ತೋಚದಂತೆ ಅತಂತ್ರಳಾಗಿ ಬಿಡುತ್ತಾಳೆ. ಒಂದೆಡೆ ಹಸಿವಿಗಾಗಿ ಅಳುತ್ತಿರುವ ಮಕ್ಕಳು ಮತ್ತೊಂದೆಡೆ ತನ್ನ ಕುಟುಂಬದ ಆರ್ಥಿಕ ಆಧಾರವಾಗಿದ್ದ ಹಸುವಿನ ಹೆಣ.

ಮಕ್ಕಳ ಹೊಟ್ಟೆ ತುಂಬಿಸುವುದೊಂದೇ ಚಿಂತೆಯಾಗಿದ್ದ ಶಾಂತಮ್ಮ ತನ್ನ ಹೊಟ್ಟೆಯ ಬಗ್ಗೆ ಚಿಂತಿಸಿಯೇ ಇರಲಿಲ್ಲ. ಆ ದಿನ ದನ ಸತ್ತಾಗ ಆಕೆಯ ಮನೋವೇದನೆ ಚಿಂತೆ ಬೇಸರಗಳ ಜೊತೆ ಹೊಟ್ಟೆಯ ಹಸಿವು ಎಲ್ಲವನ್ನೂ ಮೀರಿ ನೂರು ಪಟ್ಟು ಬೆಂಕಿಯ ಜ್ವಾಲೆಯಂತೆ ನಾಲಗೆಯನ್ನು ಹೊರಚಾಚಲಾರಂಭಿಸಿತ್ತು. ಹಸಿವೆ ತಾರಕಕ್ಕೆ ಏರಿದಾಗ ತನಗೆ ಅರಿವಿಲ್ಲದಂತೆಯೇ ಅಕೆ ಸತ್ತ ದನದ ಮಾಂಸವನ್ನು ಕಚ್ಚಿ ತಿನ್ನುತ್ತಾಳೆ. ರಕ್ತವನ್ನು ಹೀರುತ್ತಾಳೆ. ಒಂದೆಡೆ ತನ್ನ ಗಂಡನಿಲ್ಲದೆ ಅತಂತ್ರವಾದ ಸಂಸಾರ. ಬದುಕಿಗೆ ಯಾರೂ ಆಸರೆಯಿಲ್ಲದೆ ಶಾಂತಮ್ಮ ಮೂರು ಮಕ್ಕಳಿಗೆ ಗತಿ ತೋರಿಸುವಲ್ಲಿ ವಿಫಲಳಾಗುತ್ತಾಳೆ. ಮಕ್ಕಳನ್ನು ಸಾಕಿ ಬೆಳೆಸುವುದು ಅಸಾಧ್ಯವೆಂದು ಮನದಟ್ಟಾದಾಗ ಆಕೆ ತೆಗೆದುಕೊಳ್ಳುವ ನಿರ್ಧಾರ ಮನ ಕಲಕುವಂತಹದ್ದು. ಆಕೆ ತನ್ನ ಮೂರು ಮಕ್ಕಳನ್ನು ಕರೆದೊಯ್ದು ಅನಾಥಾಶ್ರಮಕ್ಕೆ ಸೇರಿಸಿ ಬಿಡುತ್ತಾಳೆ. ಕಥೆಯಲ್ಲಿ ಬಡತನ – ಹಸಿವೆಯೇ ಮೂಲ ವಸ್ತು. ಆರ್ಥಿಕವಾಗಿ ಸ್ವತಂತ್ರಳಾಗದ ಹೆಣ್ಣು ಸಂಪೂರ್ಣ ಸೋತು ಹೋಗುವ ದುರಂತವನ್ನು ಈ ಕಥೆಯಲ್ಲಿ ಕಾಣಬಹುದು.

'ಹೋಳಿಗೆ' ಕಥೆಯಲ್ಲಿ ಗೌರಿ ಮತ್ತು ಶೇಖರನ ಕುಟುಂಬದ ಬಡತನದ ಚಿತ್ರಣವನ್ನೇ ಕೊಡುತ್ತದೆ. ಗೌರಿ ಸ್ವಾಭಿಮಾನಿ ಹೆಣ್ಣು ಆರ್ಥಿಕವಾಗಿ ಬಹಳ ಹಿಂದುಳಿದ ಕುಟುಂಬ. ಖಾಯಿಲೆ ಹಿಡಿದು ಹಾಸಿಗೆ ಸೇರಿದ ಅತ್ತೆಯನ್ನು ಸರಿಯಾಗಿ ಔಷಧಿ ಕೊಡಿಸಿ ಬದುಕಿಸಲು ಅಸಾಧ್ಯವಾಗುತ್ತದೆ. ಶೇಖರನ ತಾಯಿ ಗೌರಿಯ ಅತ್ತೆ ಇಹಲೋಕ ತ್ಯಜಿಸುತ್ತಾಳೆ. ಶೇಖರನ ಸಹೋದರಿಯರಿಗೆ ತಾಯಿಯ ಅಂತ್ಯಕ್ರಿಯೆಗಾಗಿ ಕರೆ ಕಳುಹಿಸಲಾಗುತ್ತದೆ. ಇಬ್ಬರೂ ಸಹೋದರಿಯರು ಆಗಮಿಸಿ ಹೇಗೋ ತಾಯಿಗೆ ಶ್ರಾದ್ಧ ಕರ್ಮಗಳನ್ನು ಮುಗಿಸುತ್ತಾರೆ.

ತಾಯಿಯ ಶ್ರಾದ್ಧ ಕರ್ಮಗಳನ್ನು ಮುಗಿಸಿ ಮರುದಿನ ಅಕ್ಕತಂಗಿಯರು ಹೊರಟು ನಿಂತಾಗ ಶೇಖರ 'ಹೋಳಿಗೆ' ಕಟ್ಟಿ ಅವರವರ ಚೀಲದಲ್ಲಿರಿಸಿದ. ಶೇಖರ ಅದರಲ್ಲಿ ಉಳಿದಿರುವುದೇ ಏಳೆಂಟು ಹೋಳಿಗೆ, ಕಾರ್ಯದ ಮರುದಿನ ಯಾರಾದರೂ ಬರುತ್ತಾರೆ. ಆಗ ಏನೂ ಇಲ್ಲದಿದ್ರೆ ಸರಿಯಾಗುವುದಿಲ್ಲ.

ಅದೂ ಅಲ್ಲದೆ ನಿನ್ನ ಮಗುವಿಗೆ ಏನೂ ಉಳಿದಿಲ್ಲ ಎಂದು ಒಂದು ಕಟ್ಟನ್ನು ಚೀಲದಿಂದ ಹೊರಗಿಟ್ಟಾಗ ಇನ್ನು ಬರುವವರು ಯಾರೂ ಇಲ್ಲ ಅತ್ತಿಗೆ ಹೆಣ್ಣುಮಕ್ಕಳು ತವರು ಮನೆಯಿಂದ ಹಾಗೆ ಬರಿಗೈಯಲ್ಲಿ ಹೋದರೆ ಗಂಡನ ಮನೆಯವರೆದುರು ಸಣ್ಣವರಾಗುತ್ತಾರೆ. ಪುಟ್ಟನಿಗೆ ಎರಡು ಹೋಳಿಗೆ ಇದೆಯಲ್ಲ ಸಾಕು ಎನ್ನುತ್ತಾ ಗೌರಿ ಕಟ್ಟುಗಳನ್ನು ಮತ್ತೆ ಅವರ ಚೀಲದೊಳಗೆ ಇರಿಸುತ್ತಾಳೆ.

ಬಡತನದಲ್ಲೂ ಗೌರಿಯದು ದಿಟ್ಟ ಸ್ವಾಭಿಮಾನ. ತನ್ನ ಮಗು ತನಗೆ ಎರಡು ಹೋಳಿಗೆ ಸಾಕಾಗುವುದಿಲ್ಲ ಎಂದು ಕುಸುಕುಸು ಮಾಡಿದರೂ ಆಕೆ ಮಾತು ಬದಲಿಸಿ ಮಗುವನ್ನು ಹೊರಗೆ ಕರೆದೊಯ್ಯುತ್ತಾಳೆ. ಮಗುವಿಗೆ ತಿನ್ನುವ ಆಸೆ. ಇಂತಹ ಪರಿಸ್ಥಿತಿಗಳು ಬಡ ಕುಟುಂಬಗಳಲ್ಲಿ ಸರ್ವೇ ಸಾಮಾನ್ಯವಾಗಿ ಕಂಡು ಬರುವಂತಹದು. ಈ ಕಥೆಯ ವಸ್ತು ನಮ್ಮ ಸುತ್ತಮುತ್ತಲ ಪರಿಸರದ್ದು ನಾವು ಎಲ್ಲೋ ಕಂಡುಕೊಂಡದ್ದು ಎಂಬಂತೆ ಭಾಸವಾಗುತ್ತದೆ. ತನ್ನ ತಂದೆ ಶೇಖರ ಹುಷಾರಿಲ್ಲದೆ ಹೋದಾಗ ತನ್ನ ಅಜ್ಜಿ ಸತ್ತಂತೆ ಸಾಯಬಹುದು.

ಅವನ ಶ್ರಾದ್ಧ ಕರ್ಮಕ್ಕೆ ಹೋಳಿಗೆ ಮಾಡಿಸಬಹುದು ಎಂದು ಭಾವಿಸಿದ ಮಗುವಿನ ಮುಗ್ಧ ಮನಸ್ಸು ಎಂತಹವರ ಮನಸ್ಸನ್ನು ಕೂಡ ತಟ್ಟುತ್ತದೆ. ಮಗು ಅಮ್ಮನ ಜೊತೆ "ಅಮ್ಮ ಅಪ್ಪ ಸ್ವರ್ಗಕ್ಕೆ ಹೋಗ್ತಾರಲ್ಲ ಆಮೇಲೆ ನಾವು ಹೋಳಿಗೆ ಮಾಡ್ತೇವಲ್ಲ, ಆವಾಗ ಅತ್ತೆಗೆ ಎಲ್ಲ ಹೋಳಿಗೆ ಕೊಡಬೇಡ ನನಗೆ ತುಂಬ ಬೇಕು"[೧೩] ಎನ್ನುವ ಮಾತು ಹೆತ್ತವರ ಬಡತನವನ್ನು ಅಣಕಿಸುವಂತೆ ಕಾಣುತ್ತದೆ.

'ಚೇತನಾ' ಕಥಾ ಸಂಕಲನದ "ದೇವರೇ ನನ್ನನ್ನು ಕ್ಷಮಿಸು" ಕಥೆ ಆರ್ಥಿಕತೆಯ ಸವಾಲನ್ನು ಎತ್ತಿ ಹಿಡಿಯುತ್ತದೆ. ಈ ಯುಗದಲ್ಲಿ ಮನುಷ್ಯ ಎಷ್ಟೇ ಜಾಗ್ರತೆ ವಹಿಸಿದರೂ ಒಂದಲ್ಲ ಒಂದು ರೀತಿಯ ಖಾಯಿಲೆಯ ಬಾಧೆಗೆ ಒಳಪಡುವುದು ಸಾಮಾನ್ಯವಾಗಿದೆ.

ಕೆಲವೊಂದು ಖಾಯಿಲೆಗಳು ಶಸ್ತ್ರಚಿಕಿತ್ಸೆಗೆ ಮಾತ್ರ ಬಗ್ಗುವಂತಹವುಗಳು. ಶ್ರೀಮಂತರಾದರೋ ಇದೆಲ್ಲಾ ಅವರಿಗೆ ದೊಡ್ಡ ವಿಚಾರವಲ್ಲ. ಆದರೆ ಮಾಧ್ಯಮ ಬಡವರ್ಗದ ಜನ ಇಂತಹ ಖಾಯಿಲೆಗಳು ಎದುರಾದಾಗ ದಿಕ್ಕೇ ತೋಚದಂತಾಗುತ್ತಾರೆ. ವೈದ್ಯಕೀಯ ಲೋಕದ ಆವಿಷ್ಕಾರಗಳು ಹೆಚ್ಚಾದಂತೆ ಅವುಗಳು ದುಬಾರಿಯಾಗುತ್ತಲೇ ಹೋದದ್ದು ಮಧ್ಯಮ ವರ್ಗದ ಜನರಿಗೆ ಕಾಡುವ ಅತಿ ದೊಡ್ಡ ಸಮಸ್ಯೆ ಮತ್ತು ಸವಾಲು.

"ದೇವರೇ ನನ್ನನ್ನು ಕ್ಷಮಿಸು" ಕತೆಯಲ್ಲಿ ಬಡ– ಮಧ್ಯಮ ವರ್ಗದ ಜನರ ಸರ್ವೇ ಸಾಮಾನ್ಯವಾದ ಸಮಸ್ಯೆ ಮನೆಯ ಸದಸ್ಯನೊಬ್ಬ ಯಾವುದೋ ಶಸ್ತ್ರ ಚಿಕಿತ್ಸೆಗೊಳಪಡಬೇಕಾದ ರೋಗಕ್ಕೆ ಈಡಾದರೆ ಮನೆ ಮಂದಿ ಹಣ ಹೊಂದಿಸುವುದಕ್ಕಾಗಿ ಪಡುವ ಪಾಡು ಹೇಳತೀರದು. ಈ ಕಥೆಯಲ್ಲೂ ಆಂಜಿಕ್ಯನದು ಅದೇ ಪರಿ. ತನ್ನ ತಂದೆಯ ಚಿಕಿತ್ಸೆಗಾಗಿ ಆತ ಹಣ ಹೊಂದಿಸುವುದಕ್ಕಾಗಿ ಎಲ್ಲಿಲ್ಲದ ಪಾಡು ಪಡುತ್ತಾನೆ.

ಆಂಜಿಕ್ಯ ಮನೆಯ ಸಮಸ್ಯೆಯಂತೆಯೇ ಅದಕ್ಕಿಂತಲೂ ಇನ್ನೂ ದೊಡ್ಡದು ಎನ್ನಬಹುದಾದ ಸಮಸ್ಯೆ ಅವನ ಹಿತೈಷಿ ಶ್ರೀಧರ ಮಾಸ್ತರ ಮನೆಯದ್ದು ಇನ್ನೂ ಮೂವತ್ತು ವರ್ಷವಷ್ಟೇ ವಯಸ್ಸಿನ ಶ್ರೀಧರ ಮಾಸ್ತರ ಹೆಂಡತಿ ಖಾಯಿಲೆ ಬಿದ್ದಿದ್ದಾಳೆ. ಅವಳಿಗೂ ಶಸ್ತ್ರಚಿಕಿತ್ಸೆ ಸಿಗಬೇಕಿದೆ. ಅವಳ ಮಗು ಇನ್ನೂ ಹಸುಗೂಸು. ತಾಯಿ ಬದುಕದೆ ಹೋದರೆ ಶ್ರೀಧರ ಮಾಸ್ತರರ ಮಗು ತಬ್ಬಲಿ. ಶ್ರೀಧರ ಮಾಸ್ತರರ ಹೆಂಡತಿಗೆ ಚಿಕಿತ್ಸೆ ಕೊಡಿಸಲು ಹಣವಿಲ್ಲದೆ ಕೈಚೆಲ್ಲಿ ಕೂತಿದ್ದಾರೆ ಈ ದೃಶ್ಯವನ್ನು ನೆನೆದು ಆಂಜಿಕ್ಯನ ಮನಸ್ಸೇ ಪರಿವರ್ತನೆಯಾಗಿ ಬಿಡುತ್ತದೆ.

ತನ್ನ ತಂದೆಗಿಂತಲೂ ಈ ಪರಿಸ್ಥಿತಿಯಲ್ಲಿ ವನಜಳ ಜೀವಕ್ಕೆ ಬೆಲೆ ಜಾಸ್ತಿ ಅನಿಸಿಬಿಡುತ್ತದೆ. ತನ್ನ ತಂದೆಗೆ ವಯಸ್ಸಾಗಿದೆ. ಆದರೆ ಶ್ರೀಧರ ಮಾಸ್ತರರ ಹೆಂಡತಿ ಬದುಕಬೇಕು. ಆ ಮಗುವಿಗೆ ತಾಯಿ ಬೇಕು. ವನಜಳಿಗೆ ಶಸ್ತ್ರಚಿಕಿತ್ಸೆಯಾಗಿ ಅವಳು ಬದುಕಬೇಕು. ಆಂಜಿಕ್ಯ ತನ್ನ ಹೆಂಡತಿ ಸರಿತಾ ಮತ್ತು ತನ್ನ ಮಗುವನ್ನು ಕಳ್ಪಿಸಿಕೊಂಡ. ತಕ್ಷಣವೇ ತನ್ನ ತಂದೆಯ ಚಿಕಿತ್ಸೆಗಾಗಿ ಕೂಡಿಟ್ಟಿದ್ದ ೨೦ ಸಾವಿರ ರೂಪಾಯಿಗಳನ್ನು ಶ್ರೀಧರ ಮಾಸ್ತರ ಕೈಗೆ ಕೊಟ್ಟು ತನ್ನ ತಾಯಿಯ ನೆನಪಾಗಿ ದೇವರೇ ನನ್ನನ್ನು ಕ್ಷಮಿಸು ಎಂದು ಬಿಡುತ್ತಾನೆ. ಇದು ಮಾನವೀಯತೆ ಅನುಕಂಪದ ಅಂತಃಕರಣದ ವ್ಯಕ್ತಿತ್ವವನ್ನು ತೆರೆದಿಡುವ ಕಥೆ. ಜೊತೆ ಆರ್ಥಿಕ ಸವಾಲನ್ನು ಮುಂದಿಡುತ್ತದೆ.

"ಅಗೋಚರ ವಿಪ್ಲವಗಳು" ರಾಜಕೀಯ ವಿಷಯವನ್ನೊಳಗೊಂಡ ಕಥೆ. ಕಥೆಯಲ್ಲಿ ಪ್ರಾಧ್ಯಾಪಕ ಜಯರಾಮನ್ ಸದ್ದು ಮುಖ್ಯ ಪಾತ್ರವಾದರೂ ಕತೆಯಲ್ಲಿ ಮುಖ್ಯವಾಗುವುದು. ರಾಜಕೀಯ ಕಾರಣಗಳಿಗಾಗಿ ಕೊಲೆಯಾದ ರಾಜೀವಲೋಚನ ಪಾತ್ರ ತಲೆ ಹೊರೆ ಕೂಲಿ ಕೆಲಸ ಮಾಡುವವ. ಆತ ಮಿಲಿಟೆಂಡ್ ಎಡ ಕಾರ್ಮಿಕ ಸಂಘಟನೆಯೊಂದಕ್ಕೆ ಸೇರಿದ ಕೂಲಿಗಳಿಂದ ಹತ್ಯೆಗೀಡಾಗುತ್ತಾನೆ.

ರಾಜೀವಲೋಚನ ಮತ್ತು ಆ ಸಂಘಟನೆಗೆ ಸೇರಿದ ಕೂಲಿಗಳಿಗೆ ಅವನ ಚಿಕ್ಕಪ್ಪನ ಪಾರ್ಸೆಲ್ ವಿಷಯದಲ್ಲಿ ಜಗಳವಾಗಿರುತ್ತದೆ. ಪಾರ್ಸೆಲ್ ಅವರ ಕೈಗೆ ಒಪ್ಪಿಸದೆ ತಾನೇ ಒಯ್ಯುತ್ತೇನೆ ಎಂದು ರಾಜೀವಲೋಚನ ಹಠ ಹಿಡಿಯುತ್ತಾನೆ. ಆಗ ಕೂಲಿಯಾಳುಗಳು ಅವನನ್ನು ಕೊಂದೇ ಹಾಕುತ್ತಾರೆ. ಈ ಕತೆಯಲ್ಲಿ ಅನುಪಮಾ ಪ್ರಸಾದ್ ಕೇರಳದಲ್ಲಿ ಪ್ರಚಲಿತ ರಾಜಕೀಯ ವಿದ್ಯಮಾನವೊಂದರ ಪರಿಚಯ ನೀಡಿದ್ದಾರೆ. ಕೇರಳದಲ್ಲಿ ಒಂದು ಕಾಲದಲ್ಲಿ ತಲೆಹೊರೆ ಕಾರ್ಮಿಕರ ಸಂಘಟನೆ ಬಹಳ ಪ್ರಬಲವಾಗಿತ್ತು.

ಅದರ ಕಾರ್ಯಗಳು ಅಷ್ಟೇ ಕೆಟ್ಟದಾಗಿತ್ತು. ಆರ್ಥಿಕವಾಗಿ ಆ ಕೂಲಿ ಕಾರ್ಮಿಕರು ಕೆಳವರ್ಗದಿಂದ ಬಂದವರಾದರೂ ತಮ್ಮ ಸಂಖ್ಯಾ ಬಲದಿಂದ ಸವಾರಿ ಮಾಡುತ್ತಿದ್ದರು. ರಾಜೀವಲೋಚನನ ಚಿಕ್ಕಪ್ಪ ಬಲಪಂಥೀಯನೆಂಬ ಕಾರಣ ಕೂಡ ಅವನ ಕೊಲೆಗೆ ಒಂದು ನೆಪವಾಗುತ್ತದೆ. ಕಥೆಯಲ್ಲಿ ಬರುವ ಪ್ರಾಧ್ಯಾಪಕ ಜಯರಾಜನ್ ಕೂಡ ಎಡಪಂಥೀಯ ರಾಜಕೀಯದ ಕಡೆಗೆ ಒಲವು ಇರುವವರು.

ಜಯರಾಜನ್ ಸಮಾಜವಾದ ಮತ್ತು ಮಾನವೀಯ ಅಂತಃಕರಣಗಳು ಒಂದನ್ನು ಬಿಟ್ಟು ಇನ್ನೊಂದು ಇರಲಾರದು ಎಂದು ಸತ್ಯವಾಗಿ ನಂಬಿದವರು ಹಾಗೆ. ಬಾಳಿದವರು ರಾಜೀವಲೋಚನ ಕೊಲೆಯಾದಾಗ ಅವನ ಕೊಲೆಗೆ ಕಾರಣವನ್ನು ಹೇಳುತ್ತಾ ಒಂದು ದೊಡ್ಡ ಹೇಳಿಕೆಯನ್ನೇ ಕೊಟ್ಟುಬಿಡುತ್ತಾರೆ. ಕತೆಯ ಕೊನೆಯಲ್ಲಿ ಅವರ ಆಪ್ತ ನಂಬಿಕಸ್ಥ ಕೊಲೆಯಾಗುತ್ತದೆ. ಒಂದು ರಾಜಕೀಯ ಕೊಲೆಯಿಂದ ಪ್ರಾರಂಭವಾಗುವ ಈ ಕಥೆ ಕೇರಳಕ್ಕೆ ಇನ್ನಷ್ಟು ಕೊಲೆ ಮತ್ತು ಉಗ್ರವಾದಿತ್ವ ಕಾದಿರುವುದರ ಸೂಚನೆಯೊಂದಿಗೆ ಮುಗಿಯುತ್ತದೆ.

ಕಥೆ ಕೇರಳದ ಸಮಕಾಲೀನ ವಿದ್ಯಮಾನಗಳ ವಿವರ ನೀಡುತ್ತೆ ಆದರೆ ಅಲ್ಲೆಲ್ಲೂ ರಾಜಕೀಯ ದೃಷ್ಟಿಕೋನವಿಲ್ಲ. ಜಯರಾಜನ್ ಸ್ವವಿಮರ್ಶೆ, ಆತ್ಮಶೋಧನೆ ಕೇರಳಕ್ಕೆ ಈಗ ಅವಶ್ಯ ಬೇಕಿದೆ. ಅವರೊಂದು ನಿರ್ಗತಿಕ ಮಕ್ಕಳಿಗೆ ಶಾಲೆಯೊಂದನ್ನು ತೆರೆದರೆ ಅದು ಅಲ್ಲಿನ ಅಸಮಾನತೆಯನ್ನು ದೂರ ಮಾಡುತ್ತದೆ ಎಂಬುದು ನಂಬುವ ವಿಷಯವಲ್ಲ.

ಶೋಷಣೆ ಈ ಸಮಾಜದಲ್ಲಿ ಈಗಾಗಲೇ ಗಟ್ಟಿಯಾಗಿ ಬೀಡುಬೀಡುವ ಸೂಚನೆ ಗೋಚರವಾಗುತ್ತಿದೆ. ಹಾಗಂತ ಇದಕ್ಕೆ ದಾನ – ಧರ್ಮಗಳು ಪರಿಹಾರವಾಗಲಾರವು. ಇಲ್ಲಿನ ದಬ್ಬಾಳಿಕೆ ದೌರ್ಜನ್ಯಗಳನ್ನು ಎದುರಿಸುತ್ತಲೇ ಇಲ್ಲಿ ಅಸಮಾನತೆ ಮತ್ತು ಶೋಷಣೆಗಳ ವಿರುದ್ಧ ಹೋರಾಡಬೇಕಾದ ಅನಿವಾರ್ಯತೆಯಿದೆ ಎಂಬುದನ್ನು ಕತೆಗಾರ್ತಿ ಕಂಡುಕೊಂಡಿದ್ದಾರೆ. ಒಟ್ಟಾರೆ ಹೇಳುವುದಾದರೆ ಇದು

ಲೇಖಕಿಯ ಶಕ್ತಿಯುತ ಕತೆ. ಸಮಕಾಲೀನ ರಾಜಕೀಯ ಸ್ಥಿತಿಯ ದುರಂತವನ್ನು ಅದು ನಿರೂಪಿಸುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ.

ಅನುಪಮಾ ಪ್ರಸಾದ್‌ರವರ 'ದೂರ ತೀರ' ಕತೆಯ ನಾಯಕ ಶ್ರೀನಿವಾಸ. ಆತ ಅಪರಿಚಿತ ಊರಾದ ಗೋವಾದ ಹೋಟೇಲೊಂದರಲ್ಲಿ ದುಡಿಯುತ್ತಿರುತ್ತಾನೆ. ಆದರೆ ಆತನ ಮನಸ್ಸು ಪೂರ್ತಿ ತಾನು ಹುಟ್ಟಿ ಬೆಳೆದ ಬಾಲ್ಯವನ್ನು ಕಳೆದ ತನ್ನ ಹುಟ್ಟೂರನ್ನು ನೆನಪಿಸುತ್ತಿರುತ್ತದೆ.

ಅವನು ಎಳೆಯದರಲ್ಲಿ ಒಂದು ಚಿಲ್ಲರೆ ಕಳ್ಳತನಕ್ಕೆ ಹೋಗಿ ಅವನ ಅಪ್ಪನ ದರ್ಪಾವತಾರ ನೋಡಿ ಹೆದರಿ ಮನೆಬಿಟ್ಟು ಓಡಿ ಹೋಗುತ್ತಾನೆ. ಇವನು ಬ್ರಾಹ್ಮಣ ಹುಡುಗ. ಈಗ ಅಪರಿಚಿತ ಊರು, ಹೊಸಕೆಲಸ, ಜೊತೆ ಅವನಲ್ಲಿ ತಾನಾಗಿಯೇ ಒಲಿದಿರುವ ಹಾಡುಗಾರಿಕೆಯಿಂದ ಅವನಲ್ಲಿ ಸ್ವಲ್ಪ ಆತ್ಮವಿಶ್ವಾಸ ಮೂಡಿದೆ. ಯಾಕೋ ಅವನಿಗೆ ತನ್ನ ಹುಟ್ಟೂರಿಗೆ ಆಗಮಿಸುವಾಗ ಮನಸ್ಸು ಅತಂತ್ರವಾಗುತ್ತದೆ. ತನ್ನ ಮೇಲಿರುವ ಕಳ್ಳತನದ ಆರೋಪದಿಂದ ಅವನಿಗೆ ಕಳಚಿಕೊಳ್ಳುವುದಕ್ಕೆ ಅಸಾಧ್ಯವಾಗುತ್ತದೆ. ಈ ಕಥೆಯಲ್ಲಿ ಬಡಬ್ರಾಹ್ಮಣರ ಕಷ್ಟದ ಬದುಕಿನ ಚಿತ್ರಣ, ಕರಾವಳಿ ಮತ್ತು ಒಳನಾಡಿನ ಭೌಗೋಳಿಕ ಮೇಲ್ಮೈ ವಿವರಣೆಗಳು ವಾತಾವರದ ಸರಳ ಚಿತ್ರಣವಿದೆ.

ಅನುಪಮಾ ಪ್ರಸಾದ್ ಅವರ ಕಥೆಗಳನ್ನು ಸುಲಭವಾಗಿ ಗಮನಿಸಿದಾಗ ನಮ್ಮೂರು ನಮ್ಮ ಮನೆ ಕಾಲ ದೇಶ ಎಲ್ಲಾ ಸಂದರ್ಭ ಸನ್ನಿವೇಶ ನಮ್ಮ ಸುತ್ತಲ ಘಟನೆ, ವಾಸ್ತವಗಳ ಧುತ್ತನೆ ಬಂದು ಕಣ್ಣೆದುರು ನಿಂತಂತೆ ಕಾಣುತ್ತದೆ. ಯಾವ ಸಂಗತಿಯನ್ನಾಗಲೀ ಯಾವ ವಿಚಾರವನ್ನಾಗಲೀ ಲೇಖಕಿ ಮುಚ್ಚು ಮರೆಯಿಲ್ಲದೆ ಪ್ರಾಮಾಣಿಕವಾಗಿ ತೆರೆದಿಡುತ್ತಾರೆ. ವಾಸ್ತವ ಸಂಗತಿಗಳನ್ನು ಅದೂ ಹೆಣ್ಣಿನ ವಿಷಯದಲ್ಲಿಯೂ ಇರುವಂತೆಯೇ ನಿರ್ಭಿತಿಯಿಂದ ಕತೆಗಳಲ್ಲಿ ಹೊಂದಿಸಿಕೊಂಡ ಕತೆಗಳನ್ನು ವಿಶಿಷ್ಟವಾಗಿ ಬರೆಯುತ್ತಾರೆ.

ಅನುಪಮಾ ಪ್ರಸಾದ್‌ರವರ "ಜೋಗತಿ ಜೋಳಿಗೆ"ಯ ಯಮುನಕ್ಕನಿಗೆ ಎರಡು ರೀತಿಯ ಬಡತನ, ಒಂದೆಡೆ ವೈಧವ್ಯದಿಂದಾದ ದೇಹದ ಬಯಕೆಯ ಹಸಿವು. ಇನ್ನೊಂದೆಡೆ ನಾಲ್ಕು ಮಕ್ಕಳ ಮತ್ತು ತನ್ನ ಹೊಟ್ಟೆಗೆ ತನ್ನ ಗಂಡನ ಮನೆಯವರು ಸರಿಯಾಗಿ ಕೂಳು ಹಾಕದ ಕಾರಣಕ್ಕೆ ಹಸಿವು. ಇದರ ಜೊತೆಗೆ ಮನೆಯ ಪ್ರತಿಯೊಬ್ಬರಿಂದಲೂ ಅವಮಾನ ಚುಚ್ಚುಮಾತು. ತನ್ನಂತೆಯೇ ವಿಧವೆಯಾದರೂ ನಾದಿನಿ ಕೂಡ ಆಕೆಯನ್ನು ಚುಚ್ಚಿ ನುಡಿಯುತ್ತಾಳೆ.

ಅನೈತಿಕ ಸಂಬಂಧವನ್ನು ಕಣ್ಣಾರೆ ನೋಡಿದ ಯಮುನೆ ಇದಕ್ಕಿಂತ ಒಳ್ಳೆಯ ಅವಕಾಶ ತನಗಿಲ್ಲ ಎಂದುಕೊಳ್ಳುತ್ತಾಳೆ. ಆದರೆ ಅದು ಅವಳಿಗೆ ಬೇಕಾಗಿಲ್ಲ. ವಿವೇಕವಿರುವ ಹೆಂಗಸು ಆಕೆ ದೇಹದ ಬಯಕೆಯ ಕುರಿತು ಅವಳಿಗೆ ಅನುಕಂಪವಿದೆ. ಅದರ ಅರಿವು ಅನುಭವವು ಅವಳಿಗಾಗಿದೆ. ಪ್ರಕೃತಿ ಸಹಜ ಬಯಕೆಗೆ ಶಾಸ್ತ್ರಗಳ ಕಟ್ಟುಪಾಡು ಹಾಕಿದ ಸಂಪ್ರದಾಯಸ್ಥ ಜನರ ಬಗ್ಗೆ ಯಮುನೆಗೆ ರೋಷ ಉಕ್ಕಿ ಬರುತ್ತದೆ. ಹೊರತು ಇದನ್ನು ನರ್ಮದೆಯ ವಿರುದ್ಧ ಸೇಡು ತೀರಿಸಿಕೊಳ್ಳಲು ಆಕೆ ಬಳಸಿಕೊಳ್ಳುವುದೇ ಇಲ್ಲ. ಎಲ್ಲ ಗೊತ್ತಿದ್ದು ಮೈದುನ ಅವಮಾನಿಸಿದಾಗಲೂ ಅವಳು ಮನೆ ಬಿಟ್ಟು ಹೋಗುತ್ತಾಳೆಯೇ ಹೊರತು ಅವನ ವಿಚಾರವನ್ನು ಬಹಿರಂಗಪಡಿಸುವುದಿಲ್ಲ.

ಸುಳ್ಳು ಲೋಕವನ್ನು ಸತ್ಯದ ದಾರಿಯ ಮೂಲಕ ಎದುರಿಸಬೇಕೆಂಬ ಸ್ಪಷ್ಟತೆಯಿರುವವಳು ಯಮುನಕ್ಕ ಮುಂದೆ ತನ್ನ ಹೊಲಿಗೆಯ ಮೂಲಕ ತನ್ನ ಮಕ್ಕಳಿಗೆ ಭದ್ರನೆಲೆ ಒದಗಿಸಿದ ಯಮುನಕ್ಕ ಸ್ವತಃ ತಾನು ಕೂಡ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಅವಳನ್ನು ನಿರ್ಲಕ್ಷ್ಯದಿಂದ ಕಾಣುವ ಸಮಾಜದ ಕುರಿತು ಅವಳಿಗೆ ದ್ವೇಷ ಇಲ್ಲ. ತಾನು ಕಟ್ಟಿಕೊಂಡ ಸ್ವಾವಲಂಬಿ ಬದುಕು ಅವಳಿಗೆ ಧೈರ್ಯ ಕೊಡುತ್ತದೆ.

ಎಚ್. ನಾಗವೇಣಿಯವರ 'ಇನಾಮು' ಕಥೆಯು ಕಾಸಿಬೊಗ್ಗರ ಮತ್ತು ತುಂಗ ಎಂಬ ಬಡ ಕುಟುಂಬದ ಚಿತ್ರಣವನ್ನು ಹೊಂದಿದೆ. ಇವರ ಮಗ ಗಂಗಯ್ಯನು ಶಾಲೆಯಿಂದ ಪಡೆಯುತ್ತಿದ್ದ ಇನಾಮಿನ ಸುತ್ತಲೇ ಕಥೆ ಚಿತ್ರಿತಗೊಳ್ಳುತ್ತದೆ. ಆತ ಪಡೆಯುತ್ತಿದ್ದ ಇನಾಮು ಪುಸ್ತಕ. ಆದರೆ ತಾಯಿ ತುಂಗಾಳಿಗೆ ಈ ವಿಷಯವಾಗಿ ಅಸಮದಾನ. ತನ್ನ ಮಗ ಕೆಲಸಕ್ಕೆ ಬಾರದ ಈ ಪುಸ್ತಕವನ್ನು ತರುತ್ತಾನಲ್ಲ ಎಂದು ಬೇಸರ. ಆಕೆಯ ಬಡತನ ಅವಳನ್ನು ಕಾಡುತ್ತಿತ್ತು. ತನ್ನ ಮಗನಿಗೆ ಪುಸ್ತಕದ ಬದಲು ಬೇರೆ ಏನನ್ನಾದರೂ ಇನಾಮು ಕೊಡುವುದಕ್ಕೆ ಏನು? ಎಂದು ಆಕೆ ಮೇಸ್ಟ್ರನ್ನು ಬೈಯ್ದುಕೊಳ್ಳುತ್ತಿದ್ದಳು. ತುಂಗಾಳ ಅಸಮಾಧಾನವಿದ್ದದ್ದು ಆಕೆಯ ಸ್ಥಿತಿಯ ಬಗ್ಗೆ. ತನ್ನ ಮನೆಯಲ್ಲಿದ್ದ ಬಡತನದ ಮೇಲೆ. ಆದರೆ ತನ್ನ ಮಗನ ಇನಾಮಿನ ಮೂಲಕವೇ ತನ್ನ ಮನೆಯ ಗುಡಿಸಲಿನ ಮಾಡು ಸರಿಹೋಗುವುದರ ಮೂಲಕ ಕಥೆ ಅಂತ್ಯಗೊಳ್ಳುತ್ತದೆ. ಹೀಗೆ ಕಥೆಯು ಬಡತನ ಹಾಗೂ ಶಿಕ್ಷಣಪಡೆಯುತ್ತಿರುವ ತಳಸಮುದಾಯದ ಸಮಾಜವನ್ನು ಚಿತ್ರಿಸುತ್ತದೆ.

'ಧಣಿಗಳ ಬೆಳ್ಳಿ ಲೋಟ' ಬಡತನದ ದಾರಿದ್ರ್ಯ ಬೆನ್ನುಹತ್ತಿದಾಗ ಸಮಾಜದಲ್ಲಿ ಅಸಮಾನತೆ ಬೆಲೆಯೂರಿದಾಗ ಕೆಳವರ್ಗದವರ ಮೇಲೆ ಕಳ್ಳತನದ ಆರೋಪ ಮಾಡುವುದನ್ನು ಈ ಕತೆಯಲ್ಲಿ

ಕಾಣಬಹುದು. ಬೆಳ್ಳಿಲೋಟ ಧನಿಗಳ ಹೆಂಡತಿಗೆ ಅವಳ ಮದುವೆಯ ಪ್ರಣಯ ಸುಖದ ಸಂಕೇತವಾಗಿ ಕಂಡು ಬಂದರೆ, ಚೆನ್ನಮ್ಮನಿಗೆ ಇಡೀ ಜೀವನವನ್ನೇ ಪಡಿ ಇಲ್ಲವೆ ಒತ್ತೆ ಇಡುವುದಕ್ಕೆ ಕಾರಣವಾಗುತ್ತದೆ. ಇಲ್ಲಿ ಅನ್ನಕ್ಕಾಗಿ ದುಡಿಯುವ ಜನರನ್ನು ಬಿಟ್ಟಿಯಾಗಿ ಕೆಲಸ ಮಾಡಿಸಿಕೊಳ್ಳುವ ಚಿತ್ರಣವಿದೆ.

## ೪.೨ ಶಿಕ್ಷಣ ಮತ್ತು ಅರಿವಿನ ಪ್ರಶ್ನೆಗಳು :-

ಹೆಣ್ಣು ಗಂಡು ಎಂಬ ಲಿಂಗಭೇದವನ್ನು ಧಿಕ್ಕರಿಸಿ ಹೆಣ್ಣು - ಗಂಡು ಸಮಾನತೆಯ ತತ್ವದಲ್ಲಿ ನೋಡುವ ಹೆಣ್ಣೊಬ್ಬಳು ತನ್ನ ಮಗಳನ್ನು ಬೆಳೆಸುವ ವಿಶಿಷ್ಟವಾದ ರೀತಿ ಹೋಳಿ ಕತೆಯಲ್ಲಿದೆ. ಮಗಳಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿ ಬೆಳೆಸುವ ತಾಯಿ, ಆಕೆಗೆ ಸ್ವಾತಂತ್ರ್ಯ ನೀಡಲು ಹೋಗಿ ಆಕೆಯನ್ನು ದುಷ್ಟರ ಕೈಗೆ ಸಿಕ್ಕಿ ನರಳುವಂತೆ ಮಾಡಲು ಕಾರಣಳಾಗುತ್ತಾಳೆ. ಹೆಣ್ಣು - ಗಂಡು ತಾರತಮ್ಯವನ್ನು ಧಿಕ್ಕರಿಸಿ ಮೆಟ್ಟಿನಿಂತು ಸ್ವಾತಂತ್ರ್ಯ ದಾರಿ ಹಿಡಿಯಲು ಹೋಗಿ ಕಂಗಲಾದ ಹೆಣ್ಣೊಬ್ಬಳ ಕಥೆ 'ಹೋಳಿ'ಯಲ್ಲಿದೆ. ಇನ್ನೊಂದು ಕತೆ 'ಕರವೀರದ ಗಿಡ'ದಲ್ಲಿಯೂ ನಾಯಕಿ ಲೈಂಗಿಕ ಶೋಷಣೆಗೆ ಒಳಗಾಗಿ ಗರ್ಭದರಿಸಿ ಮಗುವನ್ನು ಹೆತ್ತವಳು. ದಿಟ್ಟತನದಿಂದ ಬದುಕನ್ನು ಎದುರಿಸಿ ಮಗುವನ್ನು ಬೆಳೆಸುತ್ತಾ ಅಪ್ಪನ ಕುಟುಂಬವನ್ನೇ ಎತ್ತಿ ನಿಲ್ಲಿಸುತ್ತಾಳೆ. ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಯ ವಿಷಯಗಳು ಅನುಪಮಾ ಅವರ ಕಥೆಗಳಲ್ಲಿ ನಮಗೆ ಮತ್ತೆ ಮತ್ತೆ ಕಂಡುಬರುತ್ತದೆ.

ಕರಾವಳಿ ಲೇಖಕಿಯರು ವಿದ್ಯಾಭ್ಯಾಸದ ಅತ್ಯಗತ್ಯದ ಬಗ್ಗೆ ತಮ್ಮ ಕತೆಗಳಲ್ಲಿ ಒತ್ತಿ ಹೇಳುತ್ತಾರೆ.ವೈದೇಹಿಯವರ 'ಅಂತರಂಗದ ಪುಟಗಳು' ಕತೆಯ ಅಚಲ ತನಗೆ ಬೇಕಾದ ವರನನ್ನು ತಾನೇ ಹುಡುಕಿಕೊಳ್ಳುತ್ತೇನೆ ಎನ್ನುತ್ತಾ ನೋಡಲು ಬಂದ ಹುಡುಗರನ್ನೆಲ್ಲಾ ತಿರಸ್ಕಾರ ಮಾಡುವುದಕ್ಕೆ ಸಾಧ್ಯವಾಗುವುದು ಆಕೆ ಪಡೆದ ಶಿಕ್ಷಣದಿಂದಾಗಿ ಎನ್ನುವುದು ಮನದಟ್ಟಾಗುತ್ತದೆ. ಹೆಣ್ಣು ಶಿಕ್ಷಣ ಪಡೆದು ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವ ಧೈರ್ಯ ತಂದುಕೊಂಡಾಗಲೂ ಅದಕ್ಕೆ ಕುಟುಂಬದಿಂದ ಸಮಾಜದಿಂದ ವಿರೋಧ ಬಂದೇ ಬರುತ್ತದೆ. ಆಕೆ ಎಲ್ಲರ ಎದುರು 'ಗಂಡುಬೀರಿ' ಎಂಬ ಪಟ್ಟವನ್ನು ಗಿಟ್ಟಿಸಿಕೊಳ್ಳಬೇಕಾಗುತ್ತದೆ.

ಅಮಾಯಕ, ಅಸಹಾಯಕ ಹೆಣ್ಣು ಮಕ್ಕಳೇ ಹೆಚ್ಚು ಶೋಷಣೆಗೆ ಒಳಗಾಗುತ್ತಾರೆ. ಆದರೆ ಈ ಶೋಷಣೆಯ ಕತೆಗಳನ್ನು ನಿರೂಪಿಸುವಾಗ ಕಥೆಗಾರ್ತಿ ಅನುಸರಿಸುವ ವಿಧಾನ ಸಾಮಾನ್ಯವಾದ ಸರಳ ಗ್ರಹಿಕೆಯ ವಿಧಾನವಲ್ಲ. ಶೋಷಣೆಗೆ ಒಳಗಾಗದವರಲ್ಲಿನ ದಿಟ್ಟತನ, ಬದುಕುವ ಛಲ, ಪ್ರಬುದ್ಧತೆ ಎಂಥ ಸಂದರ್ಭದಲ್ಲಿಯೂ ಮುರುಟಿ ಹೋಗದ ಮಾನವೀಯತೆ – ಇವುಗಳ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ.

'ಕರವೀರದ ಗಿಡ' ಕತೆಯ ನಾಯಕಿ ತನ್ನನ್ನು ಕಾಮಾಸಕ್ತಿಗಾಗಿ ಬಳಸಿಕೊಂಡ ಗಂಡನನ್ನು ದೂಷಿಸುವುದಿಲ್ಲ. ಅವನಿಗೆ ಮದುವೆಯಾಗಿತ್ತು ಎನ್ನುವ ವಿಚಾರ ತನಗೆ ತಿಳಿದಿತ್ತು ಎನ್ನುತ್ತಾಳೆ. ಅವನೇನೂ ತನ್ನನ್ನು ಮದುವೆಯಾಗುತ್ತೇನೆಂದು ಭರವಸೆಯೂ ಕೊಟ್ಟಿರಲಿಲ್ಲ ಎಂಬುದನ್ನು ಜ್ಞಾಪಿಸಿಕೊಳ್ಳುತ್ತಾಳೆ. ಈ ಲೈಂಗಿಕ ಕ್ರಿಯೆ ತನ್ನ ಮೇಲೆ ನಡೆದ ದೌರ್ಜನ್ಯವಲ್ಲ ಇದರಲ್ಲಿ ತನ್ನ ತಪ್ಪಿನ ಪಾಲೂ ಇದೆ ಎಂಬ ಅರಿವು ಕಥಾನಾಯಕಿಗೆ ಇದೆ.

ತಿಳುವಳಿಕೆಯೇ ಕಥೆಗೆ ಇನ್ನೊಂದು ಬದಲಾವಣೆಯನ್ನು ತಂದುಕೊಡುವುದು. ಬಸುರಿಯಾಗಿ ಮಗುವನ್ನು ಹೆರುವುದು ಮತ್ತು ಬೆಳೆಸುವುದರ ಹಿಂದೆ ಹೆಣ್ಣು ಅನುಭವಿಸಬೇಕಾದ ಸಂಕಷ್ಟದ, ಛಲದ ಚಿತ್ರಣವನ್ನು ಈ ಕಥೆ ನಿರೂಪಿಸುತ್ತದೆ. ಈ ಕಥಾ ನಾಯಕಿಯಲ್ಲಿ ಅತ್ಯಂತ ಪ್ರಬುದ್ಧತೆಯಿದೆ. ಹೀಗಾಗಿ ಅವಳು ಬದುಕುವ ಕ್ರಮವನ್ನೇ ಅದು ಬದಲಿಸುತ್ತದೆ. ಮನಸ್ಸಲ್ಲಿ ಆಕ್ರೋಶ ಹುಟ್ಟಬಹುದಾದ ಸಂದರ್ಭವನ್ನು ತಪ್ಪಿಸಿ, ಅಲ್ಲಿ ಅದು ಸಮಚಿತ್ತವನ್ನು ಮೂಡಿಸುತ್ತದೆ. ಈಕೆಯ ಸಮಚಿತ್ತತೆ ಬದುಕಿನ ಬಗೆಗೆ ಹೊಸ ಭರವಸೆಯನ್ನು ಮೂಡಿಸಿ ಬೇರೆಯೇ ದಾರಿಯಲ್ಲಿ ಮುನ್ನಡೆಸುತ್ತದೆ.

ಸ್ತ್ರೀ ಸ್ವಾತಂತ್ರ್ಯದ ವಿಷಯ ಬಂದಾಗ, ಅನುಪಮಾ ಅವರಲ್ಲಿ ನೇರವಾಗಿ ಮನಮುಟ್ಟಬಲ್ಲ ಯಾವುದನ್ನೂ ಬಚ್ಚಿಟ್ಟುಕೊಳ್ಳದೆ ತೋಡಿಕೊಳ್ಳುವ ಸರಳತೆಯ ಶೈಲಿ ಇದೆ. ಸಾಮಾಜಿಕ ಜೀವನದ ವಾಸ್ತವಿಕ ಸ್ವರೂಪವನ್ನು, ನಿಜಜೀವನದ ಸತ್ಯ ಸತ್ಯತೆಗಳನ್ನು ಸಮರ್ಥವಾಗಿ, ಸಮರ್ಪಕವಾಗಿ, ಲೇಖನಿಯಲ್ಲಿ ಹಿಡಿದಿಡುವ ಕಲೆ ಕಥೆಗಾರ್ತಿಗೆ ಇದೆ.

ಸರಳ ನಿರೂಪಣೆಯಿಂದ ಭಾವುಕತೆಯಲ್ಲಿ ತೇಲಿಹೋಗದೆ ತನ್ನ ಶೈಲಿಯ ಇತಿಮಿತಿಗಳನ್ನು ಅರ್ಥೈಸಿಕೊಂಡ ಅವರ ರಚನೆಗಳನ್ನು ಕಥೆಯಿಂದ ಕಥೆಗೆ ಕೊಂಡಿಯಂತೆ ಬೆಸೆಯುತ್ತಾ ಮುಂದೆ ಬೆಳೆದು ನಿಂತಿದೆ ಎನ್ನಬಹುದು. ಹಲವೆಡೆಗಳಲ್ಲಿ ನಡೆದ ನೈಜ ಘಟನೆಗಳು ಅನುಪಮಾ ಅವರ ಲೇಖನಿಯ ಮೂಲಕ ಕಥೆಯಾಗಿ ಬಿಟ್ಟಿದೆ ಎನ್ನುವಂತೆ ಭಾಸವಾಗುತ್ತದೆ.

ಅವರ ಕೆಲವೊಂದು ಕಥೆಗಳನ್ನು ಓದಿದಾಗ ಈ ಘಟನೆ ಇಲ್ಲೇ ಎಲ್ಲೋ ನಮ್ಮ ಪಕ್ಕದಲ್ಲೇ ನಡೆದಿದೆಯಲ್ಲಾ ಎನಿಸಿಬಿಡುತ್ತದೆ. ಇಂದಿನ ಸ್ವಪ್ರತಿಷ್ಠೆಯ ಕಾಲದಲ್ಲಿ ಬೆಳೆಯುವ ಮಕ್ಕಳ ಪ್ರತಿಭೆ ಹೇಗೆ ಮುರುಟಿಹೋಗುತ್ತಿದೆ ಎನ್ನುವುದು 'ಮುರುಟಿದ ಚಿಗುರು' ಕಥೆಯಲ್ಲಿ ಚಿತ್ರಿತವಾಗಿದೆ. ತನ್ನದಲ್ಲದ ತಪ್ಪಿನಿಂದ ಏಡ್ಸ್ ರೋಗಕ್ಕೆ ತುತ್ತಾದ ಚೇತನಾಳ ಬದುಕುವ ಆಸೆ ಆದರೆ ಸಾವೇ ಪರಿಹಾರ ಎನ್ನುವ ಚಿತ್ರಣ ಓದುಗನನ್ನು ಮನಮಿಡಿಯುವಂತೆ ಮಾಡುತ್ತದೆ. ಚೇತನಾ ನಮ್ಮ ಪಕ್ಕದಲ್ಲೇ ಇರುವ ಸ್ನೇಹಿತೆಯೋ ಸಹೋದರಿಯೋ ನೆರೆಮನೆಯವಳೋ ಆಗಿ ನಮ್ಮ ಮನಸ್ಸನ್ನು ತುಂಬಿ ಕಲಕಿ ಬಿಡುತ್ತಾಳೆ. ಬದುಕು ಸಂಕುಚಿತಗೊಳ್ಳದೆ ವಿಶಾಲ ಮನೋಭಾವದಿಂದ ಮಾನವೀನ ಮೌಲ್ಯಗಳನ್ನು ತುಂಬಿಕೊಳ್ಳಬೇಕಾಗಿದೆ ಎಂಬ ಸಾರ್ವಕಾಲಿಕ ಸತ್ಯವನ್ನು ಅವರ ಹೆಚ್ಚಿನ ಕಥೆಗಳಲ್ಲಿ ಕಾಣಬಹುದು.

ಗಂಗಾಪಾದೇಕಲ್‌ರವರ "ನಮ್ಮಲ್ಲಿ ಒಬ್ಬಳು ಅಲೀಮ" ಕತೆಯಲ್ಲಿ ಅಲೀಮಳನ್ನು ಆಕೆಯ ಇಷ್ಟಾನಿಷ್ಟಗಳನ್ನು ವಿಚಾರಿಸದೆ ದುಬೈಯ ವರನಿಗೆ ಮದುವೆ ಮಾಡಿಕೊಟ್ಟ ಪರಿಣಾಮ, ಆಕೆ ಬಸುರಿಯಾಗಿ ಮೈಯಿಳಿಸಿಕೊಂಡದ್ದು, ರೋಗ ತಗಲಿಸಿಕೊಂಡು ನರಳಿದ್ದು, ಇತ್ಯಾದಿ ಸಂಗತಿಗಳು ಮನಮಿಡಿಯುತ್ತವೆ. ತನ್ನ ಸಮಾಜದ ಮಹಿಳೆಯರ ಸ್ಥಿತಿಗತಿಗಳನ್ನು ಕಂಡುನೊಂದ ಸಲ್ಮಾ ಎಂಬ ಹೆಣ್ಣುಮಗಳು ವಿದ್ಯೆಯ ಅಭಾವವು ಹೆಣ್ಣುಮಕ್ಕಳ ಬಾಳಿಗೆ ಮುಳುವಾಗಿರುವುದನ್ನು ಅರಿತು ಒಂದು ಶಾಲೆ ತೆರೆದರೆ ಸಂಪ್ರದಾಯ ಶರಣರು ಅಸಹಕಾರವನ್ನು ತೋರಿ ಇನ್ನೇನು ಅದು ಮುಚ್ಚುಗಡೆ ಯಾಗುವುದರಲ್ಲಿತ್ತು. ಶಾಲೆಗೆ ಪ್ರವೇಶ ಪಡೆಯಬಯಸಿದ ಅಲೀಮಾಳಿಂದಾಗಿ ಶಾಲೆ ಉಳಿಯುತ್ತದೆ. ಶಾಲೆಯಿಂದಾಗಿ ಅಲೀಮಾ ಉಳಿಯುತ್ತಾಳೆ. ಅಲೀಮಾ ಶಾಲೆಗೆ ಸೇರುವುದೇ ಇಲ್ಲಿ ಪ್ರತಿರೋಧದ ಒಂದು ದಿಟ್ಟ ಹೆಜ್ಜೆ.

'ನೆನಪದೇ ಇದ್ದದ್ದು' ಈ ಕಥೆಯಲ್ಲಿ ಸರಳ ಕಪ್ಪಾಗಿರುವ ಕಾರಣ ತನ್ನ ತಂದೆಯ ವ್ಯಂಗ್ಯ ಮಾತುಗಳಿಗೆ ಗುರಿಯಾಗಿ ಮನಸ್ಸಿಗೆ ನೋವಾದರೂ ಕನಸಿನ ಲೋಕದಲ್ಲಿ ಮುಳುಗುತ್ತಾಳೆ. ತನಗೆ ಬೇಕಾದ ಬಾಳ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವುದಕ್ಕೆ ಆಕೆಗೆ ಆಗದೆ ಸಂಕಟ ಪಡುತ್ತಾಳೆ. ಸಮಾಜದಲ್ಲಿ ಹೆಣ್ಣಿನ ಸ್ವಾತಂತ್ರ್ಯಕ್ಕೆ ಹಾಗೂ ನಿರ್ಧಾರಕ್ಕೆ ಬೆಲೆಯಿಲ್ಲ ಎಂಬುದು ಗೊತ್ತಾಗುತ್ತದೆ. ಶ್ರೀಧರನ ಪ್ರೀತಿಯಲ್ಲಿ ಬಿದ್ದು ಮದುವೆಯಾಗಲು ಸಾಧ್ಯವಾಗದೇ ಚಡಪಡಿಸುತ್ತಿದ್ದ ಸರಳಳ ಪಾಲಿಗೆ ಬಂದದ್ದನ್ನು

ಒಪ್ಪಿಕೊಂಡು ಬದುಕುವ ಹೆಣ್ಣು ತನ್ನ ಸ್ವತಂತ್ರ ನಿರ್ಧಾರಗಳಿಗೆ ಅವಕಾಶ ದೊರಕದೇ ಇದ್ದಾಗ ವ್ಯವಸ್ಥೆಯ ಬಗ್ಗೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

'ಸುಕನ್ಯಳ ಹುಟ್ಟುಹಬ್ಬ' ಕಥೆಯಲ್ಲಿ ಸುಕನ್ಯಾಳು ಮದುವೆಯಾಗಲು ಬಂದ ವರರನ್ನೆಲ್ಲ ವರದಕ್ಷಿಣೆಯ ಹಿನ್ನೆಲೆಯಲ್ಲಿ ತಿರಸ್ಕರಿಸುತ್ತಿದ್ದಳು. ತಂದೆ ತೋಟ ಮಾರಿ ಆಕೆಯ ಮದುವೆಯನ್ನು ಮಾಡಲು ಹೊರಟಾಗ ತಂದೆಯನ್ನು ತಡೆದು ಇದರಿಂದ ತೊಂದರೆಯಾಗುತ್ತದೆ. ತಮ್ಮಂದಿರ ಶಿಕ್ಷಣವನ್ನು ಮುಂದುವರೆಸಲು ತುಂಬಾ ಕಷ್ಟ ಪಡಬೇಕಾಗುತ್ತದೆ ಎಂದು ತಂದೆಯನ್ನು ಸಮಾಧಾನಪಡಿಸಿ ತನ್ನ ಬದುಕನ್ನು ತಾನೇ ಕಟ್ಟಿಕೊಳ್ಳುತ್ತಾ ಮದುವೆಯಾಗದೇ ತಮ್ಮಂದಿರ ವಿದ್ಯಾಭ್ಯಾಸಕ್ಕಾಗಿ ತನ್ನ ಜೀವನವನ್ನು ತ್ಯಾಗ ಮಾಡುತ್ತಾಳೆ. ಈ ನಿರ್ಧಾರ ಅವಳ ಹುಟ್ಟುಹಬ್ಬದ ಆಚರಣೆಗೂ ಒಂದು ಅರ್ಥವನ್ನು ಕಲ್ಪಿಸುತ್ತದೆ.

ಗಂಗಾಪಾದೇಕಲ್‌ರವರ 'ದಿಕ್ಸೂಚಿ' ಕಥೆಯಲ್ಲಿ ಸರಸ ಮದುವೆಯಾಗಿ ಗಂಡನ ಸುಖ ಕಾಣದವಳು. ಹಳ್ಳಿಯವರು ಆಕೆಯ ನಡತೆಯ ಮೇಲೆ ಸಂಶಯದಿಂದ ಕಥೆ ಕಟ್ಟುವರು. ಆದರೆ ಆಕೆ ಸಮಸ್ಯೆಗೆ ತಾನೇ ಪರಿಹಾರ ಕಂಡುಕೊಳ್ಳುವಂತೆ ರೋಗಿಷ್ಟ ಮಾವನನ್ನು ಮೈಸೂರಿಗೆ ಕರೆದುಕೊಂಡು ಹೋಗಿ ಆರೈಕೆ ಮಾಡುತ್ತಾ ತಾನು ನರ್ಸಿಂಗ್ ಟ್ರೈನಿಂಗ್ ಮಾಡುವುದಾಗಿ ನಿರ್ಧರಿಸುತ್ತಾಳೆ.

ತನ್ನ ಬದುಕಿನ ದಾರಿಯನ್ನು ತಾನೇ ಕಂಡುಕೊಳ್ಳುವ ಸಂದರ್ಭದಲ್ಲಿ ಅನೇಕ ಎಡರು ತೊಡರುಗಳನ್ನು ಅನುಭವಿಸುತ್ತಾಳೆ. ಸರಸ ಪುರುಷನ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಸರಳ ತೆಗೆದುಕೊಳ್ಳುವ ಸ್ವತಂತ್ರ ನಿರ್ಧಾರ ಕೂಡ ಆಕೆ ಪಡೆದ ಶಿಕ್ಷಣದಿಂದ ಸಾಧ್ಯವಾಗುತ್ತದೆ.

'ಅಂತ್ಯವಲ್ಲ ಆರಂಭ" ಕತೆಯಲ್ಲಿ ಗಿರಿಜಮ್ಮ ಊರಿನ ಮುಖಂಡ ಗೋವಿಂದಪ್ಪ ಮಾಡಿದ ಅನ್ಯಾಯಕ್ಕೆ ಪ್ರತಿಕಾರವಾಗಿ ಹೊಸ ಮನೆಯನ್ನು ಕಟ್ಟಲು ಧೈರ್ಯ ಆಕೆ ಪಡೆದ ಶಿಕ್ಷಣದಿಂದಾಗಿಯೇ ಹೆಣ್ಣು ವಿದ್ಯಾವಂತಳಾದರೆ ಇಡೀ ಕುಟುಂಬವೇ ಶಿಕ್ಷಣ ಪಡೆದಂತೆ ಎಂಬ ಮಾತಿನಂತೆ ಗಿರಿಜಮ್ಮನ ಪಾತ್ರ ಚಿತ್ರಣವಿದೆ. ಶಿಕ್ಷಣ ಪಡೆದು ಸ್ವತಂತ್ರ ನಿರ್ಧಾರ ಕೈಗೊಳ್ಳುವ ಪಾತ್ರಗಳನ್ನು ಸಾರಾ ಅಬೂಬಕ್ಕರ್‌ರವರು ಚಿತ್ರಿಸಿದ್ದಾರೆ.

'ಹೊಸ ದಿಕ್ಕು' ಕತೆಯ ನಾಯಕಿ ಶಾಹಿನಾಳ ಬದುಕು ರಫೀನಾಳದಕ್ಕಿಂತ ಭಿನ್ನವಾಗಿಲ್ಲ. ಕೊಲ್ಲಿಯಲ್ಲಿ ಉದ್ಯೋಗಸ್ಥನಾದ ಯುವಕನಿಗೆ ಆತನ ಸ್ಥಾನಮಾನಗಳಿಗೆ ಆಕರ್ಷಿತರಾಗಿ, ಗಗನಸಖಿಯಾಗಿದ್ದ ಮಗಳನ್ನು ನೌಕರಿಯಿಂದ ಬಿಡಿಸಿ, ಮದುವೆಗೆ ಒತ್ತಾಯಿಸುತ್ತಾರೆ. ಆದರೆ ಆ ವರನಿಂದ ತಮ್ಮ ಮಗಳು 'ಸೋಶಿಯಲ್' ಅಲ್ಲ ಎಂಬ ಕಾರಣಕ್ಕೆ ಅಪಮಾನಕ್ಕೆ ಒಳಗಾಗಿ ನಿರಾಕರಿಸಲ್ಪಟ್ಟಾಗ ತಮ್ಮ ದುಡುಕಿಗೆ ಪರಿತಪಿಸಿ ಮಗಳಿಗೆ "ನೀನು ನಿನಗಿಷ್ಟವಾದ ನಿಶ್ಚಿತಾರ್ಥ ಮಾಡಿಕೊಳ್ಳುವಂತಹ ಸುಸಂಸ್ಕೃತನಾದ ಗಂಡಸೊಬ್ಬನನ್ನು ಕರೆದುಕೊಂಡು ಬಾ, ಆತನಿಗೆ ನಿನ್ನನ್ನು ಸಂತೋಷದಿಂದ ಮದುವೆ ಮಾಡಿಕೊಡುತ್ತೇವೆ"[೧೪] ಎಂದು ಅಂತಿಮವಾಗಿ ಮಗಳ ಆಯ್ಕೆಗೆ ಅವಕಾಶ ನೀಡುವುದು 'ಹೊಸ ದಿಕ್ಕಿ'ನ ಸೂಚನೆಯಾಗುತ್ತದೆ.

'ಬೇಟೆ' ಕತೆಯ ನಾಯಕಿ ರಫೀನಾಳ ಬದುಕು ಶೋಚನೀಯವಾದುದು. ರಫೀನಾಳ ತಾಯಿ ತನ್ನ ಮಗಳಿಗೆ ಒಳ್ಳೆಯ ಶಿಕ್ಷಣ ನೀಡಿ ಉದ್ಯೋಗಸ್ಥನಿಗೆ ಮದುವೆ ಮಾಡಬೇಕು ಎಂದು ಹಠ ಹಿಡಿದು ತನ್ನ ಸಹೋದರರಿಗೆ ಹೇಳಿ ಮಗಳನ್ನು ಕಾಲೇಜಿಗೆ ಕಳುಹಿಸುತ್ತಾಳೆ. ಆದರೆ ಒಳ್ಳೆಯ ವರ ಸಿಕ್ಕನೆಂದು ಆಕೆ ಮಗಳನ್ನು ಮದುವೆಗೆ ಒತ್ತಾಯಿಸುತ್ತಾಳೆ. ಕಾಲೇಜು ಶಿಕ್ಷಣ ಅರ್ಧದಲ್ಲಿ ಬಿಟ್ಟು ಮದುವೆಗೆ ರೆಡಿಯಾಗುತ್ತಾಳೆ. ಮದುವೆ ನಂತರ ವಿದೇಶಕ್ಕೆ ಹೋದ ರಫೀನಾಳ ಬದುಕು ನರಕವಾಗುತ್ತದೆ. ವಿದ್ಯಾವಂತ ಇಂಜಿನಿಯರ್ ಗಂಡ ತನ್ನ ಹೆಂಡತಿಯನ್ನು ಅವಮಾನ ಮಾಡುತ್ತಾ, ಸಂಶಯ ವ್ಯಕ್ತಪಡಿಸುತ್ತಾ ಇರುತ್ತಾನೆ. ಇದನ್ನು ಅರಿತ ರಫೀನಾ ಪ್ರತಿರೋಧ ವ್ಯಕ್ತಪಡಿಸಿದಾಗ ಹಿಂಸೆಯನ್ನು ಮಾಡುತ್ತಾನೆ. ಅಲ್ಲದೆ ತನ್ನ ಸ್ನೇಹಿತೆಯ ಗಂಡನೊಟ್ಟಿಗೆ ಸ್ನೇಹಿತನಂತೆ ನಾಟಕವಾಡಿ ಮನೆಗೆ ಬರಲು ಹೇಳಿ, ನಂತರ ಪೋಲೀಸ್ ಕಂಪ್ಲೇಟ್ ಮಾಡಿ ಇಬ್ಬರನ್ನು (ರಫೀನಾ ಮತ್ತು ಹಮೀದ್) ಜೈಲಿಗಟ್ಟುತ್ತಾನೆ.

ಏನೂ ತಪ್ಪೇ ಮಾಡದ ರಫೀನಾಳಿಗೆ ತುಂಬಾ ನೋವಾಗುತ್ತದೆ. ನಂತರ ಜೈಲಿನಿಂದ ಬಿಡುಗಡೆಗೊಂಡು ಊರಿಗೆ ಬಂದು ತನ್ನ ಶಿಕ್ಷಣವನ್ನು ಮುಂದುವರೆಸುತ್ತಾಳೆ. ಸಾರಾ ಅಬೂಬಕ್ಕರ್ ಹೆಣ್ಣಿಗೆ ಶಿಕ್ಷಣ ಎಷ್ಟು ಅತ್ಯಗತ್ಯ ಎಂಬುದನ್ನು ಈ ಕತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಗಂಗಾಪಾದೇಕಲ್‌ರವರ "ಆಳ" ಕತೆಯ ನಾಯಕಿ ಕುಸುಮ ತನ್ನ ಬಾಳಿನಲ್ಲಿ ಎದುರಾದ ಒಂದು ಮಹತ್ವದ ಸನ್ನಿವೇಶದಲ್ಲಿ ಕೃಷಿಕ ರಾಜಣ್ಣನನ್ನು ತನ್ನ ಬಾಳಿನ ಸಂಗಾತಿಯಾಗಿ ಆಯ್ಕೆಮಾಡುವಲ್ಲಿ ಅವಳ ಜೀವನಾನುಭವ ಕಲಿಸಿದ ಪಾಠದ ಹಿನ್ನೆಲೆ ಇದೆ. ಮೂರ್ತಿಯ ಸ್ವಾರ್ಥಪ್ರೇರಿತ ವ್ಯಾವಹಾರಿಕ ಜಾಣ್ಮೆಯ

ಸುಳಿಹುವನ್ನರಿತ ಕುಸುಮ ಅವನನ್ನು ನಿರಾಕರಿಸುವ ಮೂಲಕ ಸ್ವಂತ ವ್ಯಕ್ತಿತ್ವವನ್ನು ಮೆರೆಯುತ್ತಾಳೆ. ಇಷ್ಟು ದಿನಗಳು ನನ್ನ ಒಡಹುಟ್ಟಿದವರಿಗಾಗಿ ದುಡಿದೆ. ಅವರಿಗಾಗಿ ಬದುಕಿದೆ. ಇನ್ನಾದರೂ ನಾನು ನನ್ನ, ಕೇವಲ ನನ್ನದೇ ಆದ ಬದುಕನ್ನು ಬಾಳಬೇಕು.

ಅದಕ್ಕಾಗಿಯೇ ರಾಜುವಿನೊಂದಿಗೆ ನನ್ನ ಬದುಕಿನ ಬೇರನ್ನರಸಿ ಹೊನ್ನಳ್ಳಿಗೆ ಹೋಗುತ್ತಿದ್ದೇನೆ ಎಂಬ ಅವಳ ನಿರ್ಧಾರ ತನ್ನ ಬದುಕನ್ನು ಅರ್ಥೈಸಿಕೊಂಡ ಬಗೆಯಿಂದ ಮೂಡಿದುದು. ತನ್ನ ಬದುಕು ಹೇಗಿರಬೇಕೆಂಬ ನಿರ್ಧಾರಾವು ತನಗೆ ಸೇರಿದ್ದು ಎಂಬ ನಿಲುವೂ ಇಲ್ಲಿದೆ. ಇದು ಆವೇಶದಿಂದಲೋ ಕ್ಷಣಿಕವಾದ ಆದರ್ಶದಿಂದಲೋ ಹುಟ್ಟಿಕೊಳ್ಳದೆ ಸರಿಯಾದ ಆಲೋಚನೆಯಿಂದ, ವಿವೇಕದಿಂದ ಮಾಡಿದ ತೀರ್ಮಾನ, ಹಾಗಾಗಿಯೇ ಅದು ಸೂಕ್ಷ್ಮವಾದ ಆದರೆ ಗಟ್ಟಿಯಾದ ಪ್ರತಿರೋಧದ ಸ್ವರೂಪವನ್ನು ಪಡೆದುಕೊಳ್ಳುತ್ತದೆ.

ಗಂಗಾಪಾದೇಕಲ್‌ರವರ 'ಚಕ್ರ' ಕತೆಯ ವಸುಧ ಪತಿಯ ಅನ್ಯಾಯಕ್ಕೆ ಬಲಿಯಾದರೂ ಸ್ವಾಭಿಮಾನದ, ಆತ್ಮವಿಶ್ವಾಸದ ದಿಟ್ಟ ನಿರ್ಧಾರದಿಂದ ಬದುಕನ್ನು ರೂಪಿಸುವುದು ಪ್ರತಿರೋಧದ ಒಂದು ನೆಲೆಯಾದರೆ ಕ್ಷಮೆ ಬೇಡುವ ನೆಪದಲ್ಲಿ ಬಂದು ಮರಳಿ ತನ್ನ ಸಂಸಾರಕ್ಕೆ ಸೇರಬೇಕು, ತಾಯಿಯನ್ನು ಕಳೆದುಕೊಂಡ ತನ್ನ ತಬ್ಬಲಿ ಮಕ್ಕಳನ್ನು ನೋಡಿಕೊಳ್ಳಬೇಕು –ಎಂಬ ಪತಿಯ ಬೇಡಿಕೆಗೆ ತಿರಸ್ಕಾರವನ್ನು ತೋರುವುದು ಮತ್ತಷ್ಟು ಸ್ಪಷ್ಟವಾದ ವಾಚ್ಯದ ನೆಲೆ, ಕತೆಗಾರ್ತಿಯ ಸೂಕ್ಷ್ಮ ಸಂವೇದನೆ ಗಮನಿಸುವಂತೆ ಹಿಂದೆ ಅವಳ ಬಸಿರಿಗೆ ಒದೆದು ತಾಯ್ತನಕ್ಕೆ ಕೊಳ್ಳಿ ಇಟ್ಟ ನೆನಪು ಆರದ ಗಾಯವಾಗಿರುತ್ತದೆ. ಪತಿಯ ಕರೆಯನ್ನು ಸ್ವೀಕರಿಸುವುದು ಆಕೆಗೆ ಸಾಧ್ಯವಾಗದು. ಥೂ ನಾಯಿ ಜನ್ಮ ಎಂಬ ಪ್ರಶಸ್ತಿ ಪತ್ರದೊಂದಿಗೆ ಆತ ಮರಳುವಂತಾಗುತ್ತದೆ.

ಮಿತ್ರಾ ವೆಂಕಟ್ರಾಜ್‌ರವರ 'ಮಗಳು ಬಂದಳು' ಕತೆಯ ಲಕ್ಷ್ಮೀದೇವಿ ಸಣ್ಣ ವಯಸ್ಸಿಗೆ ಮದುವೆಯಾಗಿ ಬಂದವಳು. ತಾನು ಹುಟ್ಟಿ ಬೆಳೆದ ಮನೆಯ ಸ್ವಚ್ಛಂದ ವಾತಾವರಣಕ್ಕೂ ಗಂಡನ ಮನೆಯ ಪರಿಸರಕ್ಕೂ ತುಂಬಾ ವ್ಯತ್ಯಾಸ ಇರುತ್ತದೆ.

ತಂದೆಯ ಮನೆಯ ಸ್ವಾತಂತ್ರ್ಯ, ಗಂಡನ ಮನೆಯಲ್ಲಿ ಇದ್ದಾಗಲೂ ತವರಿನ ಮನೆಯ ಸ್ವತಂತ್ರ ನಿರ್ಧಾರ ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಆದರೂ ಲಕ್ಷ್ಮೀದೇವಿ ತನ್ನ ತಂದೆಗಾಗಿ ಗಂಡನ

ಮನೆಯಿಂದ ಬೊಂಡ ತೆಗೆದುಕೊಂಡು ಹೋಗುವ ನಿರ್ಧಾರ ಮಾಡುವುದು ಅವಳಿಗಿದ್ದ ಸ್ವಾತಂತ್ರ್ಯವನ್ನು ದೃಢಪಡಿಸುತ್ತದೆ.

'ಹಕ್ಕಿ ಮತ್ತು ಅವಳು' ಕಥೆಯಲ್ಲಿ ಅಡುಗೆಮನೆಯ ಕಿಟಕಿಯಲ್ಲಿ ಕುಳಿತು ಹೊರಗೆ ಕರೆಯುತ್ತಿದ್ದ ಹಕ್ಕಿಯ ಮಾತುಗಳು ಆಕೆಗೆ ಕೋಪ ತರಿಸುತ್ತಿತ್ತು. ಮನೆಯೆಂಬ ಪಂಜರದೊಳಗೆ ತಾನು ಸುಖವಾಗಿದ್ದೇನೆ ಎಂದು ಅನಿಸುತ್ತಿತ್ತು. ನಿನ್ನ ಮನೆಯ ಬೆಚ್ಚಗಿನ ವಾತವರಣ ನನ್ನ ಮಟ್ಟಿಗೆ ಗರ್ಮಿಯಾದೀತು. ಬೇಡ ನಾನಿಲ್ಲೇ ಇರುವೆ ಎಂಬ ಹಕ್ಕಿಯ ಧ್ವನಿ ಅಕೆಯನ್ನು ಬಂಧನದಿಂದ ಹೊರಗೆ ಬರುವಂತೆ ಪ್ರೇರೇಪಿಸುತ್ತದೆ. ಇಲ್ಲಿ ಚಪಾತಿ ಕರಟಿದ್ದು ಮಾತ್ರವಲ್ಲ, ಆಕೆಯ ಸಾಂಸರಿಕ ಬದುಕು ಕೂಡಾ ಕರಟಿ ಹೋಗಿರುತ್ತದೆ. ಮನೆಯೆಂಬ ಬಂಧನದಿಂದ ಹೊರಗೆ ಕಾಲಿಡದ ಹೊರತು ಹೆಣ್ಣಿಗೆ ಸ್ವಾತಂತ್ರ್ಯ ಎಂಬುದು ಕನಸಿನ ಮಾತು ಎಂಬುದನ್ನು ಈ ಕತೆ ಧ್ವನಿಸುತ್ತದೆ.

'ಇಲ್ಲೊಬ್ಬಳು ಸೀತೆ' ಕಥೆಯ ನಾಯಕಿ ಕೆಮ್ಮಡಿಯ ಮನೆತನದಲ್ಲಿ ಸೊಸೆಯಾಗಿ ಬಂದ ಸೀತೆ ವಿದ್ಯಾವಂತೆ ಮಾತ್ರವಲ್ಲ ಕವಿತೆಗಳನ್ನು ರಚಿಸುತ್ತಿದ್ದ ಭಾವನಾ ಜೀವಿ. ಕೆಮ್ಮಡಿಯಲ್ಲಿ ಸೀತೆಯದು ನಿಂತರೆ ತಪ್ಪು, ಕುಳಿತರೆ ತಪ್ಪು ಎನ್ನುವ ಬದುಕು. ಓದಲು ಬರೆಯಲು ಬಿಡದ ಮನೆಯಿಂದ ಹೊರಗೆ ಕಾಲಿಡಲು ಬಿಡದೇ ಇರುವುದು ಆಕೆಯನ್ನು ಉಸಿರುಗಟ್ಟಿಸುವ ವಾತಾವರಣ ನಿರ್ಮಾಣ ಮಾಡಿದ್ದಾರೆ. ಆಕೆಗೆ ಕೆಮ್ಮಡಿ ಮನೆಯ ಹಿಂದಿನ ಪಾದೆಗುಡ್ಡೆ, ಮರಗಿಡ, ಹಸಿರು–ಆಕಾಶ ನೋಡುವ ಹುಚ್ಚು.

ಅವುಗಳನ್ನೆಲ್ಲ ಕವಿತೆಗಳನ್ನಾಗಿಸುವ ಹಂಬಲ. ಆಗಿನ ಕಾಲದ ಎಲ್ಲಾ ಹೆಂಗಸರಂತೆಯೇ ಅವಳ ಬಾಳು ಇತ್ತು, ಗಂಡನ ವೈಭವದ ಮನೆಯಲ್ಲಿ ಉಳಿದವರು ಹೇಳುವಂತೆ ಸೀತೆ ರಾಣಿಯಂತೆ ಬದುಕಬಹುದಿತ್ತು. "ಆಗೆಲ್ಲ ಗಂಡ ಅಂದೋನು ಹೆಂಡ್ತಿ ಕೈಲಿ ಮಾತಾಡುದಾಯ್ಲಿ ಕಾಂಬ್ದ್, ಕೇಂಬ್ದ್ ಆಯ್ಲಿ ಕ್ರಮ ಇಲ್ಲ. ಈಗಿನ ಹಾಂಗಾ? ಅದರಲ್ಲಿ ತಪ್ಪೇನು?"[೧೫] ಗಂಡನ ಉಪೇಕ್ಷೆ ಮತ್ತು ನಿರ್ಲಕ್ಷ್ಯ ಧೋರಣೆಗಳಿಂದ ಬೇಸತ್ತ ಆಕೆ ಆತ್ಮಹತ್ಯೆಯ ಪ್ರಯತ್ನವನ್ನು ಮಾಡಿ ಸೋಲುತ್ತಾಳೆ. ಇಲ್ಲಿಯ ಸೀತೆ ಪುರಾಣದ ಸೀತೆಯಂತೆ ಆದರ್ಶ ಪತ್ನಿಯಾಗಿ ಬಾಳಲಿಲ್ಲ. ಅಷ್ಟು ದೊಡ್ಡ ಮನೆ, ಗಂಡ, ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು ಒಟ್ಟಿನಲ್ಲಿ ತನಗಿಷ್ಟವಿಲ್ಲದ ಬಾಳನ್ನು ತ್ಯಜಿಸಿ ಅಪರಿಚಿತ ಸನ್ಯಾಸಿಯೊಡನೆ ತಾನಾಗಿ ವಾತಾವರಣದಿಂದ ಬಿಡುಗಡೆ ಹೊಂದುತ್ತಾಳೆ.

ಹೇಳಿ ಅವನನ್ನು ಹೊಡೆದು ಸಾಯಿಸುತ್ತಾಳೆ. (ಇದನ್ನು ಎಲ್ಲರಲ್ಲಿ ಹೇಳಿ ನಗುತ್ತಾಳೆ.) ಮಿತಿಮೀರಿದ ಮಾತು ಕೇಳಿದ ವಾಸು ಚಿಕ್ಕಪ್ಪಯ್ಯ ಅವಳನ್ನು ಹೊಡೆಯುವಾಗ ಬಿಡಿಸಲು ಯಾರು ಬರದಿದ್ದರೂ, ಅಕ್ಕುವಿನ ಮಾತು ಮಾತ್ರ ನಿಲ್ಲುವುದಿಲ್ಲ. ಕೊನೆಗೆ ಕೋಣೆಯಲ್ಲಿ ಕೂಡಿ ಹಾಕಿದ್ದಕ್ಕೆ ಕಿಟಕಿಯ ಬಾಗಿಲು ತೆರೆದು ಅಬ್ಬರಿಸುತ್ತಾ ಆತ "ತಮ್ಮಣ್ಣಯ್ಯನ್ ಹೆಂಡ್ತಿ ಕಾಯ್ ಓಡು ಓಡ್ ಬೇಗ, ಮಾರ್ಯಾದೆ ಸತ್ತವ್ನೆ, ಈಗ ಹೋಡೀ ಬಾ ಕಾಂಬ ......[೧೮] ಎನ್ನುತ್ತಾಳೆ. ಆ ಮೂಲಕ ಚಿಕ್ಕಪ್ಪಯ್ಯನ ಗುಟ್ಟೊಂದನ್ನು ಎಲ್ಲರಿಗೂ ಗೊತ್ತಾಗುವ ಹಾಗೇ ಮಾಡುತ್ತಾಳೆ. ಈ ರೀತಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಾಳೆ.

## ೪.೩ ಜಾತಿ ಮತ್ತು ಧರ್ಮದ ಪ್ರಶ್ನೆಗಳು

ಮಹಿಳೆಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಜಾತಿ ಮತ್ತು ಧರ್ಮಗಳು ಪ್ರಮುಖ ಪಾತ್ರ ವಹಿಸುತ್ತವೆ. ಬಹುತೇಕ ಧರ್ಮಗಳಲ್ಲಿ ಹೆಣ್ಣು ಅಧೀನ ನೆಲೆಯ ಜೀವಿಯಾಗಿ ಪರಿಗಣಿಸಲ್ಪಟ್ಟಿದ್ದಾಳೆ. ಜೀವರಾಶಿಗಳಲ್ಲಿಯೇ ಪುರುಷ ಶ್ರೇಷ್ಠ ಎಂಬ ನಂಬಿಕೆಯಿಂದ ಆತ್ಮ ಜ್ಞಾನಕ್ಕೆ ಧರ್ಮ, ಆಧ್ಯಾತ್ಮ, ಮೋಕ್ಷ ಪ್ರಾಪ್ತಿಗಳಿಗೆ ಪುರುಷ ಮಾತ್ರ ಅರ್ಹ. ಹೆಣ್ಣು ಆತನ ಧರ್ಮ ಸಾಧನೆಯ ಹಾದಿಯಲ್ಲಿ ವಿಪತ್ತಾಗಿದ್ದಾಳೆ. ಭೋಗ ಲಾಲಸೆಗೆ ಎಳೆಯುವ ಚಂಚಲೆಯಾಗಿ ಮಾಯಾ ಶಕ್ತಿಯಾಗಿದ್ದಾಳೆ. ನಿಸರ್ಗ ಸಹಜವಾದ ಮಹಿಳೆಯ ಒಳ್ಳೆಯ ಗುಣಗಳನ್ನು ಮರೆ ಮಾಡಿ, ನಿಷೇಧಾತ್ಮಕ ನೆಲೆಯಲ್ಲಿಯೇ ಹೆಣ್ಣಿನ ವ್ಯಕ್ತಿತ್ವವನ್ನು ಬಿಂಬಿಸುತ್ತಾ ಬಂದಿವೆ. ತಾಯಿಯಾಗಿ ಹೆಚ್ಚಿನ ಧರ್ಮಗಳಲ್ಲಿ ಮನ್ನಣೆ ಪಡೆದುಕೊಂಡಿರುವ ಮಹಿಳೆ ಉಳಿದ ಪಾತ್ರಗಳಲ್ಲಿ ತಿರಸ್ಕಾರ ಅಪನಂಬಿಕೆ, ಅವಹೇಳನಕ್ಕೆ ಗುರಿಯಾಗಿದ್ದಾಳೆ. ಧರ್ಮ ಸಂಪ್ರದಾಯಗಳ ಹೆಸರಿನಲ್ಲಿ ಮಹಿಳೆ ನಲುಗುತ್ತಿರುವುದು ಯಾವುದೇ ಒಂದು ಧರ್ಮಕ್ಕೆ ಸೀಮಿತವಲ್ಲ.

ಇಡೀ ಮನುಕುಲವೇ ಆಕೆಯನ್ನು ಹಾಗೇ ನಡೆಸಿಕೊಳ್ಳುತ್ತಿದೆ. ಧರ್ಮ ಎಂಬುದು ಪುರುಷ ಚಿಂತನೆಯಲ್ಲಿಯೇ ಉಗಮವಾಗಿದೆ. ಪುರುಷ ನಿಯಂತ್ರಣದಲ್ಲಿಯೇ ಬೆಳೆದು ಬಂದಿರುವಂತಹ ಧಾರ್ಮಿಕ ವ್ಯವಸ್ಥೆ, ಧರ್ಮ ಗ್ರಂಥಗಳ ರಚನಕಾರರು ಅವುಗಳನ್ನು ಅರ್ಥೈಸಿ ವಿಶ್ಲೇಷಿಸುವವರು. ಈ ವ್ಯವಸ್ಥೆಯಲ್ಲಿ ಸ್ತ್ರೀಗಿರುವ ಸ್ಥಾನ ಗೌಣ. ಹೆಣ್ಣು ಮಕ್ಕಳಿಗೆ ಜವಾಬ್ದರಿಯನ್ನು ಮಾತ್ರ ವಿಧಿಸಿ, ಅಧಿಕಾರವನ್ನು

ನೀಡದಿರುವುದು, ಪ್ರಶ್ನೆಗಳನ್ನು ಕೇಳುವ ಹಾಗೂ ಪ್ರತಿರೋಧವನ್ನು ವ್ಯಕ್ತಪಡಿಸುವ ಹಕ್ಕು ಮಹಿಳೆಯರಿಗೆ ಇಲ್ಲವೆಂಬ ತತ್ವವನ್ನು ಎಲ್ಲಾ ಧರ್ಮಗಳು ಒಂದಲ್ಲ ಒಂದು ರೀತಿಯಲ್ಲಿ ಬೋಧಿಸುತ್ತವೆ.

ಪುರೋಹಿತಶಾಹಿ ಇಂದಿನ ಧರ್ಮವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿದೆ. ಧರ್ಮದ ಹೆಸರಿನಲ್ಲಿ ಮಹಿಳಾ ಸ್ವಾತಂತ್ರ್ಯ ದಮನ ಮಾಡಿ ಭಯೋತ್ಪಾದನೆಯ ಸಂಸ್ಕೃತಿಯನ್ನು ಹುಟ್ಟು ಹಾಕಿದೆ ಈ ನಮ್ಮ ಪುರೋಹಿತಶಾಹಿ ವರ್ಗ ಹಾಗೂ ಎಲ್ಲಾ ಧರ್ಮಗಳು ಮಹಿಳೆಯನ್ನು ಎರಡನೇ ದರ್ಜೆಯ ಪ್ರಜೆಯಂತೆ ನಡೆಸಿಕೊಳ್ಳುತ್ತವೆ.

ಶತಮಾನಗಳಿಂದಲೂ ಧರ್ಮ ಮಹಿಳಾ ಪ್ರಗತಿಗೆ ಅಡ್ಡಿಯನ್ನುಂಟುಮಾಡುತ್ತಾ ಬಂದಿರುವುದು ಮಹಿಳೆಗೆ ಇಂದಿಗೂ ಸವಾಲಾಗಿದೆ. ಸ್ತ್ರೀಯರ ಪಾತಿವ್ರತ್ಯವನ್ನು ವೈಭವೀಕರಿಸಿದ ಧರ್ಮಗ್ರಂಥಗಳು ಇಂದಿಗೂ ಪುರುಷಪರ ಪ್ರವೃತ್ತಿಗಳು ಬೆಳೆದು ಧರ್ಮ ಬೆಂಬಲಿತವಾಗಿ ಮಾನ್ಯತೆಯನ್ನು ಪಡೆದು ಅನೇಕ ಹೆಣ್ಣು ಮಕ್ಕಳ ಶೋಷಣೆಯನ್ನು ಮಾಡುತ್ತಿವೆ. ಇಸ್ಲಾಂ ಧರ್ಮವು ಬಹು ಪತ್ನಿತ್ವ ಲಿಂಗ ತಾರತಮ್ಯ, ಪರದಾ ಪದ್ಧತಿ, ತಲಾಖ್, ಆಸ್ತಿಯ ಹಕ್ಕಿಲ್ಲದಿರುವುದು ಮುಂತಾದ ಸ್ತ್ರೀ ವಿರೋಧಿ ಧೋರಣೆಗಳಿಂದ ಮಹಿಳೆಯರ ಬದುಕು ಶೋಚನೀಯವಾಗಿದೆ.

ಸಾರಾ ಅಬೂಬಕ್ಕರ್‌ರವರು ಇಸ್ಲಾಂ ಧರ್ಮದ ಅಡಿಯಲ್ಲಿ ಸಿಕ್ಕಿ ನರಳುತ್ತಿರುವ ಅಸಹಾಯಕ ಸ್ಥಿತಿಯನ್ನು ತಮ್ಮ ಕೃತಿಗಳ ಮೂಲಕ ಮುಸ್ಲಿಂ ಸಮುದಾಯದ ಜಗತ್ತನ್ನು ಅನಾವರಣ ಮಾಡುತ್ತಿದ್ದಾರೆ. ಮುಸ್ಲಿಂ ಧಾರ್ಮಿಕ ಗ್ರಂಥಗಳು ಪಿತೃ ಪ್ರಧಾನತೆಯನ್ನು ಒಪ್ಪಿಕೊಂಡು ಪೋಷಿಸಿಕೊಂಡು ಹೇಗೆ ಬಂದಿವೆ ಎಂಬುದನ್ನು ಕತೆಗಳಲ್ಲಿ ಚಿತ್ರಿಸಿದ್ದಾರೆ.

ಪ್ರತಿಯೊಬ್ಬ ಮುಸಲ್ಮಾನನಿಗೂ ಮಸೀದಿ, ಅದರ ಜಮಾಅತ್ ಕಮಿಟಿಯ ನಿರ್ಧಾರಗಳು ನಿರ್ಣಾಯಕವಾಗಿರುತ್ತವೆ. ಸಾರಾರವರು 'ಧರ್ಮ ಬಲೆ ಬೀಸಿದಾಗ' ಕಥೆಯಲ್ಲಿ ಕರೀಂ ಸಾಬಿ ಮತ್ತು ಆತನ ಹೆಂಡತಿ ಖತೀಜಾಬಿ ಊರಿನ ಮಸೀದಿಯ ಜಮಾತ್ ತೀರ್ಪನ್ನು ಉಲ್ಲಂಘಿಸಿದರೆಂದು ಆಕೆಯ ಕುಟುಂಬವನ್ನು ಬಹಿಷ್ಕರಿಸಲಾಗಿದೆ. ಕರೀಂ ಸಾಬಿ ಬೊಂಬಾಯಿಯಲ್ಲಿ ದುಡಿಯುತ್ತಿದ್ದರೆ ಖತೀಜಾಬಿ ಕುಟುಂಬವನ್ನು ನಿಭಾಯಿಸಿಕೊಂದು ನೆಮ್ಮದಿಯಿಂದ ಬದುಕುತ್ತಿರುವವಳು. ಆದರೆ ಜಮಾತಿನ ಅಧ್ಯಕ್ಷ ಇಬ್ರಾಹಿಂ ಹಾಜಿ ಖತೀಜಾಬಿಯ ಮಗಳ ಮೇಲೆ ಕಣ್ಣಿಟ್ಟಿದ್ದ. ಆಕೆಯನ್ನು ಮದುವೆಯಾಗಲು ಕೇಳಿದಾಗ ಖತೀಜಾಬಿ ನಿರಾಕರಿಸುತ್ತಾಳೆ.

ಇದರಿಂದ ಅವಮಾನವಾಗಿ ಸೇಡು ತೀರಿಸಿಕೊಳ್ಳುವ ಸಲುವಾಗಿ ಕುಡಿತ ವೇಶ್ಯಾವಾಟಿಕೆಯ ಆರೋಪಗಳನ್ನು ಆಕೆಯ ಮೇಲೆ ಹೊರಿಸಿ ಮಸೀದಿಯ ಜಮಾತ್‌ನ ಸಭೆಯಲ್ಲಿ ಬಹಿಷ್ಕಾರವನ್ನು ವಿಧಿಸಲಾಗುತ್ತದೆ. ಕರೀಂ ಸಾಬಿ ಕೂಡಾ ಬಹಿಷ್ಕಾರಕ್ಕೆ ಹೆದರಿ ಹೆಂಡತಿಗೆ ಹೀಗೆ ಹೇಳುತ್ತಾನೆ "ಜಮಾತನ್ನು ಎದುರಿಸಿ ನಾವು ಈ ಊರಿನಲ್ಲಿ ಬದುಕುವ ಹಾಗಿಲ್ಲ. ಮನೆಯ ಮದುವೆ, ಮರಣ ಮುಂತಾದ ಕಾರ್ಯಗಳಿಗೆ ಮಸೀದಿಯ ಮೌಲ್ವಿಗಳೂ ಇತರ ನೆರೆಕರೆಯವರೂ ನಮಗೆ ಬೇಕೇ ಬೇಕಾಗುತ್ತಾರೆ. ಬೇರೆಯವರು ಪ್ರತಿಭಟಿಸದೇ ಶಿಕ್ಷೆ ಅನುಭವಿಸಲಿಲ್ಲವೇ? ಎಲ್ಲರಂತೆ ನೀನೂ ಶಿಕ್ಷೆ ಅನುಭವಿಸಿ ಬಂದು ಬಿಡು"[೧೯] ಎಂದು ಹೇಳುತ್ತಾನೆ.

ಆದರೆ ಖತೀಜಾಬಿ ಮಾಡದ ತಪ್ಪಿಗೆ ಭಯಪಡದೆ ಗಂಡನಿಗೂ ಧೈರ್ಯ ತುಂಬಿ ವಕೀಲರನ್ನು ಸಂಪರ್ಕಿಸಿ ಪೋಲೀಸ್ ಠಾಣೆಯಲ್ಲಿ ದೂರನ್ನು ದಾಖಲಿಸುತ್ತಾರೆ. ಕಾನೂನಿನ ಪ್ರಕಾರ ಧರ್ಮ ಶಿಕ್ಷೆ ವಿಧಿಸುವುದು ತಪ್ಪು ಎಂದು ಅರಿವಾದ ತಕ್ಷಣ ಜಮಾತ್ ಸದಸ್ಯರೆಲ್ಲಾ ತನಿಖೆಗೆ ಹೆದರಿ ಕರೀಂ ಸಾಬಿಯನ್ನು ಕರೆದು ಮೌಲ್ವಿಗಳ ಮೂಲಕ ರಾಜಿ ಪಂಚಾಯಿತಿಕೆ ಮಾಡುತ್ತಾರೆ. ಖತೀಜಾಬಿ ತಾನು ತಪ್ಪು ಮಾಡದೇ ಶಿಕ್ಷೆಯನ್ನು ಅನುಭವಿಸದೇ ಜಮಾತ್‌ನ ಬಹಿಷ್ಕಾರವನ್ನು ಧಿಕ್ಕರಿಸಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

'ಧ್ವನಿಯಿಲ್ಲದ ನೋವುಗಳು' ಕಥೆಯಲ್ಲಿ ಜರೀನಾಳನ್ನು ಆಕೆಯ ಅಣ್ಣ ತುಂಬಾ ಕಷ್ಟಪಟ್ಟು ಮುಸ್ತಾಫಾ ಎಂಬ ಯುವಕನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಸೋಮಾರಿಯಾಗಿದ್ದ ಮುಸ್ತಾಫಾ ಹೆಂಡತಿಯ ಮನೆಯಲ್ಲಿಯೇ ತಳವೂರುತ್ತಾನೆ. ಆಗ ತನ್ನ ತಂಗಿಯ ಬದುಕು ನೆಲೆ ಕಾಣಲಿ ಎಂದು ಪರಿಚಯದವರೊಂದಿಗೆ ವಿಚಾರಿಸಿ ಹಣ ಹೊಂದಿಸಿ ಕೊಲ್ಲಿ ದೇಶಕ್ಕೆ ಕಳುಹಿಸಿಕೊಡುತ್ತಾನೆ. ಆದರೆ ಆತ ಅಲ್ಲಿಯೇ ದುಡಿಯುತ್ತಿದ್ದು ನಂತರ ವಿನಾಕಾರಣವಾಗಿ ಜರಿನಾಳಿಗೆ ತಲಾಖ್ ಕೊಡುತ್ತಾನೆ.

ಬಡತನದಿಂದ ಬದುಕು ಸಾಗಿಸುತ್ತಿರುವ ಜರೀನಾಳಿಗೆ ಮುಸ್ತಾಫಾ ತಲಾಖ್ ಕೊಟ್ಟ ಸುದ್ದಿಯನ್ನು ಪತ್ರದ ಮೂಲಕ ತಿಳಿಸಿರುತ್ತಾರೆ. ಅನಕ್ಷರಸ್ಥೆಯಾದ ಜರೀನಾ ತನ್ನ ಗಂಡ ಬರುತ್ತಾನೆಂಬ ವಾರ್ತೆಯನ್ನು ಹೊತ್ತು ತರುವ ಅಂಚೆ ಪೇದೆಗಾಗಿ ಕಾಯುತ್ತಿದ್ದವಳಿಗೆ ಎರಡು ಪತ್ರಗಳು ಬರುತ್ತವೆ. ಒಂದು ಜರೀನಾಳಿಗೆ ಸಾಕ್ಷಿಗಳ ಸಮ್ಮುಖದಲ್ಲಿ ಕೊಟ್ಟಿರುವ ತಲಾಖ್ ಮತ್ತೊಂದು ಆಕೆಯ ಅಣ್ಣನಿಗೆ ಬರೆದಿರುವ ಪತ್ರ. ಅಬ್ದುಲ್

ಖಾದರ್ ಅವರ ಮಗಳು ಜರೀನಾಳ ಮೂರು ತಲಾಖ್‌ಗಳನ್ನು ನಾನು ಕಳುಹಿಸಿರುತ್ತೇನೆ. ಸಹಿ 'ಮುಸ್ತಫಾ'.[೨೦] ಬೇರೆ ಬೇರೆ ನಾಲ್ಕು ಸಾಕ್ಷಿದಾರರ ಹೆಸರುಗಳು ಆ ಕಾಗದದಲ್ಲಿ ಬರೆಯಲ್ಪಟ್ಟಿದ್ದವು.

ಮುಸ್ಲಿಂ ಪುರುಷ ತನಗೆ ಹೆಂಡತಿ ಬೇಡವೆನಿಸಿದರೆ ಎಲ್ಲಿದ್ದರೂ ಅಲ್ಲಿಂದ ತಲಾಖ್ ನೀಡುತ್ತಿದ್ದೇನೆಂದು ಪತ್ರ ಕಳುಹಿಸಿದರೆ ಗಂಡ ಹೆಂಡತಿಯ ನಡುವಿನ ಬಾಂಧವ್ಯ ಬಿದ್ದು ಹೋಗುತ್ತದೆ.

ಮುಸ್ತಾಫಾ ಜರೀನಾಳ ಅಣ್ಣನಿಗೆ ಕಳುಹಿಸಿದ ಪತ್ರದಲ್ಲಿ "ಪ್ರೀತಿಯ ಭಾವ, ಅಸ್ಸಲಾಂ ಅಲೈಕುಂ. ಈ ಪತ್ರವನ್ನು ನೋಡಿ ನಿಮ್ಗೆ ಬೇಸರವಾಗಬಹುದು. ಏಕೆ ಎಂದು ಕೇಳಬೇಡಿ. ನಿಮ್ಮ ತಂಗಿಗೆ ಬೇರೆ ಕಡೆ ಗಂಡು ನೋಡಿ ಮದುವೆ ಮಾಡಿ. ಇನ್ನೊಬ್ಬನಿಗೆ ವರದಕ್ಷಿಣೆ ಕೊಡಲು ಅಗತ್ಯ ಬಿದ್ದರೆ ನಾನು ಸಾವಿರ ರೂಪಾಯಿಗಳನ್ನು ಕಳುಹಿಸಿ ಕೊಡುತ್ತೇನೆ. ಇಂತಿ ಸಲಾಂ".[೨೧] ಇಲ್ಲಿ ಗಂಡನೇ ತನ್ನ ಹೆಂಡತಿಗೆ ಇನ್ನೊಂದು ಮದುವೆ ಮಾಡಬೇಕಾದರೆ ಹಣ ಕಳುಹಿಸುತ್ತೇನೆಂದು ಹೇಳುವುದು ವೈಪರೀತ್ಯ.

ಇಸ್ಲಾಂ ಧರ್ಮದಲ್ಲಿನ ಹೆಣ್ಣುಗಳನ್ನು ಶೋಷಣೆಗೆ ಒಳಪಡಿಸುವ ಧರ್ಮಾಚರಣೆ ತಲಾಖ್. ಇದು ಹೆಣ್ಣಿನ ಯಾವುದೇ ತಪ್ಪಿಲ್ಲದೇ ಇದ್ದರೂ ತಲಾಖ್ ಎಂಬ ಪದವನ್ನು ಮೂರು ಬಾರಿ ಉಚ್ಚರಿಸಿದರೆ ವಿಚ್ಛೇದನವಾಗುತ್ತದೆ. ಇಸ್ಲಾಂ ಧರ್ಮದ ಸಂಸ್ಕೃತಿಯ ಆಚರಣೆಯಲ್ಲಿ ಅನುಭವಿಸುವ ವೇದನೆಯನ್ನು ಸಾರಾ ಅಬೂಬಕ್ಕರ್ ಅಭಿವ್ಯಕ್ತಿಸಿದ್ದಾರೆ.

'ನಿಯಮ ನಿಯಮಗಳ ನಡುವೆ' ಕಥೆಯಲ್ಲಿ ಜೊಹರಾ ಮತ್ತು ಖಾದರ್ ನಡುವೆ ಕಿವಿಯ ಆಭರಣಕ್ಕಾಗಿ ಜಗಳವಾಗಿ ತವರಿಗೆ ಹೋಗಬೇಕಾದ ಸಂದರ್ಭ ಬರುತ್ತದೆ. ನಂತರ ಆಕೆಗೆ ತಲಾಖ್ ನೀಡಿದ್ದು, ನಂತರ ಮದುವೆಯಾಗಲು ಸಿದ್ಧನಿರುವುದಕ್ಕಾಗಿ ಇಸ್ಲಾಂ ಧರ್ಮದ ಸಂಪ್ರದಾಯದಂತೆ 'ಒಜ್ಜತ್' (ಒಂದು ದಿನದ ಮದುವೆ) ಮಾಡಲು ಸಿದ್ಧತೆಗಳು ನಡೆಯುತ್ತವೆ. ಒಮ್ಮೆ ತಲಾಖ್‌ಗೆ ಬಲಿಯದ ಹೆಂಗಸನ್ನು ಅವಳ ಗಂಡ ತಿರುಗಿ ಮದುವೆಯಾಗಬೇಕಾದರೆ ಒಂದು ದಿನದ ಮಟ್ಟಿಗಾದರೂ ಆಕೆ ಬೇರೊಬ್ಬ ಗಂಡನೊಡನೆ ಮದುವೆಯಾಗಿ ಆ ಗಂಡಿನಿಂದ ತಲಾಖ್ ಪಡೆಯಬೇಕಾಗುತ್ತದೆ.

ಧಾರ್ಮಿಕ ಆಚರಣೆಯನ್ನು ಪುರುಷ ಪ್ರಧಾನ ಸಂಸ್ಕೃತಿಯನ್ನು ಅನುಸರಿಸಲು ಹೋಗಿ ಪ್ರಕೃತಿಯ ವಿರುದ್ಧ ಹೋರಾಡಲು ಸಾಧ್ಯವಾಗದೆ ಜೊಹರಾ ಸಾವನ್ನಪ್ಪುತ್ತಾಳೆ. ಸಾರಾ ಅಬೂಬಕ್ಕರ್‌ರವರು ಮಹಿಳೆಯರು ತಲಾಖ್ ಪಡೆದು ಅನುಭವಿಸುವ ಶೋಷಣೆ, ದೌರ್ಜನ್ಯ, ಅಸಹಾಯಕತೆ, ದುಃಖ, ಕಷ್ಟ

ಮೊದಲಾದ ಸಮಸ್ಯೆಗಳನ್ನು ಚಿತ್ರಿಸುತ್ತಾ ಧರ್ಮದ ಆಚರಣೆಗಳ ಬಗ್ಗೆ ಕೆಲವೊಂದು ಪಾತ್ರಗಳ ಬಗ್ಗೆ ಪ್ರಶ್ನಿಸುತ್ತಾರೆ.

'ಸಾರಾಂಶ' ಕಥೆಯಲ್ಲಿ ಶಬಾನಳ ಮನೆಗೆ ಗಂಡನಿಂದ ಮೋಸಕೊಳ್ಳಗಾದ ಯಮುನ ಸಹಾಯವನ್ನು ಅಪೇಕ್ಷಿಸಿ ಬರುತ್ತಾಳೆ. ಆಕೆಗೆ ಸಹಾಯ ಮಾಡಲು ಮುಂದಾದ ಶಬಾನ ತನ್ನ ಮನೆ ಕೆಲಸ ಮಾಡಲು ಹೇಳುತ್ತಾಳೆ. ಆದರೆ ಯಮುನಳನ್ನು ಅವಳ ಗಂಡ ತನ್ನ ಸ್ನೇಹಿತ ರಂಗಪ್ಪನ ಮನೆಯಲ್ಲಿಡುತ್ತಾನೆ. ಅಲ್ಲಿಯೂ ಆತನ ಹೆಂದತಿಯ ಹಿಂಸೆಯಿಂದ ದಿಕ್ಕು ತೋಚದೆ ವಾಪಸು ಬಂದು ಅಸಹಾಯಕ ಸ್ಥಿತಿಯ ಬಗ್ಗೆ ಶಬಾನಳಲ್ಲಿ ಹೇಳುತ್ತಾಳೆ.

ಆಗ ಶಬಾನ ತನ್ನ ಗಂಡನಲ್ಲಿ ಲಾಯರ ಬಳಿಗೆ ಕರೆದುಕೊಂಡು ನ್ಯಾಯ ಕೊಡಿಸಿ ಎಂದು ಕೇಳಿಕೊಳ್ಳುತ್ತಾಳೆ. ಈ ವಿಷಯ ಹಿಂದು ಮತ್ತು ಮುಸ್ಲಿಂರವರಿಗೆ ತಿಳಿದು ಮತಾಂತರ ಮಾಡುತ್ತಾರೆ ಎಂದು ಸುದ್ದಿ ಹರಡುವುದನ್ನು ತಿಳಿದು ಯಮುನಳನ್ನು ಶಬಾನಳ ಗಂಡ ಹೊರಗೆ ಹಾಕುತ್ತಾನೆ. ಪುರುಷ ಪ್ರಧಾನ ಸಮಾಜದಲ್ಲಿ ನೊಂದ ಹೆಣ್ಣಿಗೆ ಸಮಾಧಾನ, ಸಾಂತ್ವನಕ್ಕೆ ಬದಲು ಮತ್ತಷ್ಟು ಶೋಷಣೆ ಮಾಡುವುದನ್ನು ಕಾಣಬಹುದು.

ಇಲ್ಲಿ ಅನ್ಯ ಧರ್ಮದ ಹೆಣ್ಣಿಗೆ ಸಹಾಯ ಮಾಡಲು ಬಯಸುವ ಶಬಾನಳ ಮಾತುಗಳಲ್ಲಿ "ನೋಡಿ ನಾಳೆ ನಾನು ಆಕೆಯನ್ನು ಯಾರಾದರೂ ಲಾಯರ ಬಳಿಗೆ ಕರೆದೊಯ್ಯಲೇ?"[೨೨] ಎಂದು ಗಂಡನಲ್ಲಿ ಕೇಳುವಲ್ಲಿ ಹಿಂದು ಧರ್ಮದ ಮಹಿಳೆಗೆ ನ್ಯಾಯ ಕೊಡಬೇಕೆಂಬ ಸ್ತ್ರೀಪರ ಕಾಳಜಿಯನ್ನು ಕಾಣಬಹುದು. ಧರ್ಮ ಸಹಿಷ್ಣುತೆಯ ಸಂವೇದನೆಯನ್ನು ಹೊಂದಿರುವುದನ್ನು ಈ ಕಥೆ ಧ್ವನಿಸುತ್ತದೆ.

'ತಲಾಖ್' ಕಥೆಯಲ್ಲಿ ಸಲೀಂ ಹಣದಾಸೆಗಾಗಿ ಮೆಹರುನ್ನೀಸಾಳನ್ನು ಮದುವೆಯಾಗಿ ಮಾವನಿಂದ ಹಣ ಪಡೆದು ಕೆಲಸಕ್ಕೆ ಸೇರಿದ ನಂತರ ತಲಾಖ್ ನೀಡುತ್ತಾನೆ. ಆಗ ಮೆಹರುನ್ನೀಸಾ ತಲಾಖ್ ಬಗ್ಗೆ ಈ ರೀತಿ ಪ್ರತಿರೋಧ ವ್ಯಕ್ತಪಡಿಸುತ್ತಾಳೆ "ತಲಾಖ್ ಹೇಳುವವನು ನಿಕಾ ಯಾಕೆ ಮಾಡಿಕೊಂಡೆ?" "ನಿನ್ನ ಜಾಬಿಗೆ ಹಣ ಬೇಕಾಗಿತ್ತು ಅದಕ್ಕಾಗಿ ನಿಕಾಹ್ ಮಾಡಿಕೊಂಡೆ, ಪ್ರಚಂಡ ಬುದ್ಧಿವಂತ ನೀನು; ಮೋಸ ಮಾಡುವುದನ್ನು ನಿನ್ನಿಂದಲೇ ಕಲಿತುಕೊಳ್ಳಬೇಕು".[೨೩] ನಿಕಾಹ್ ಎಂದರೆ ಮಕ್ಕಳಾಟವೆಂದು ತಿಳಿದಿರುವವನು.

ಅದರ ಉದ್ದೇಶವಾದರೂ ತಿಳಿದಿರುವುದೇ ಅವನಿಗೆ? ಹೆಂಗಸರನ್ನು ಹೆದರಿಸಲು ತಲಾಖ್ ಒಂದು ಅಸ್ತ್ರವಾಗಿ ಬಿಟ್ಟಿದೆ ಈ ಪುರುಷರಿಗೆ. ಹೆಣ್ಣು ಜೀವಕ್ಕೆ ಬೆಲೆ ಕೊಡಲಾಗದ, ಬದುಕಿಸಲಾಗದ ನಾಮರ್ದರು. ತುಟಿ ಬಿಚ್ಚಿದರೆ ತಲಾಖ್ ಎನ್ನುತ್ತಾರೆ. ಹೆಣ್ಣಿಗೆ ಮಕ್ಕಳಾಗಲಿಲ್ಲವೆಂದರೂ ತಲಾಖ್, ಬರಿ ಹೆಣ್ಣು ಹೆತ್ತರೂ ತಲಾಖ್. ಒಂದು ಮಾತು ಹೆಚ್ಚು ಕಮ್ಮಿಯಾದರೂ ತಲಾಖ್. "ಅವಳು ಮನುಷ್ಯಳಲ್ಲವೇ? ಆಸೆ ಆಕಾಂಕ್ಷೆಗಳಿಲ್ಲವೇ?"[೨೪] ಎನ್ನುವಲ್ಲಿ ಮುಸ್ಲಿಂ ಧರ್ಮ ಸ್ತ್ರೀಯರಿಗೆ ಮುಳ್ಳಿನಂತೆ ಚುಚ್ಚಿ ಶೋಷಣೆ ಮಾಡುತ್ತಿರುವ ತಲಾಖ್ ವ್ಯವಸ್ಥೆಯ ಕುರಿತು ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ತನ್ನ ಗಂಡ ತಲಾಖ್ ಕೊಟ್ಟ ಎಂದು ಸುಮ್ಮನೆ ದುಃಖಪಟ್ಟುಕೊಳ್ಳುತ್ತಾ ಕೂರದೆ ಕೆಲಸಕ್ಕೆ ಸೇರಿ ಸ್ವಾವಲಂಬಿಯಾಗಿ ಬದುಕುತ್ತಾಳೆ.

ಗಂಗಾಪಾದೇಕಲ್‌ರ ಪುಲಪೇಡಿ ಕಥೆಯಲ್ಲಿ 'ಪುಲಪೇಡಿ' ಎನ್ನುವುದು ಕೇರಳದಲ್ಲಿ ರಾಜಪ್ರಭುತ್ವದಲ್ಲಿ ಕೆಳವರ್ಗದವರಿಗೆ ಸ್ವಾತಂತ್ರ್ಯ ನೀಡುವ ವಿಚಿತ್ರ ಪದ್ಧತಿ. ಅಲ್ಲಿನ ಕೆಳವರ್ಗದ ಜನ ವರ್ಷದ ನಿರ್ದಿಷ್ಟ ದಿನದಂದು ಧಾರ್ಮಿಕ ಹಾಗೂ ಸಾಮಾಜಿಕ ಸ್ವಾತಂತ್ರ್ಯ ಹೊಂದುತ್ತಾರೆ. ಅದೇ ಕಾಲಕ್ಕೆ ಮೇಲ್ಜಾತಿಯ ಹೆಣ್ಣು ಮಕ್ಕಳು ಒಂಟಿಯಾಗಿ ಮನೆಯಿಂದ ಹೊರಗೆ ಬರುವಂತಿಲ್ಲ. ಹೊರಗೆ ಬಂದಲ್ಲಿ ಅವರನ್ನು ಕೀಳ್ಜಾತಿಯ ಯಾವುದೇ ಗಂಡು ಮುಟ್ಟಿದಲ್ಲಿ ಆ ಹೆಣ್ಣು ಅವನೊಂದಿಗೆ ಮುಂದೆ ಸಂಸಾರ ಮಾಡಬೇಕಾಗುತ್ತದೆ.

ಪುಲಪೇಡೀಯ ಪದ್ಧತಿಯಂತೆ ಲಲಿತೆ ಪರಯನೊಬ್ಬನಿಂದ ಮುಟ್ಟಿಸಿಕೊಂಡ ಹೆಣ್ಣು ಮಗಳು. ನಾಯರ್ ಕುಟುಂಬದ ಲಲಿತೆಯು ರಾಮನ್ ನಂಬೂದಿರಿ ಎಂಬಾತನನ್ನು ವಿವಾಹವಾಗಿದ್ದರೂ ಆತನ ಎರಡನೇ ಪತ್ನಿಯಾಗಿರಬೇಕಿತ್ತು. ಕಣ್ಣ ಎಂಬ ಪರಯನಿಗೆ ಲಲಿತೆಯ ಬಗ್ಗೆ ಪ್ರೀತಿಯಿದ್ದು ಪುಲಪೇಡಿಯ ಸಂದರ್ಭದಲ್ಲಿ ಒಂಟಿಯಾಗಿ ಒಂಟಿಯಾಗಿ ಹೊರಟ ಲಲಿತೆಯನ್ನು ಆತ ಮುಟ್ಟುತ್ತಾನೆ.

ಆದರೆ ಲಲಿತೆ ಆ ಸಂದರ್ಭದಲ್ಲಿ ಗರ್ಭಿಣಿಯಾಗಿದ್ದರಿಂದ ತಕ್ಷಣ ಪರಯನೊಂದಿಗೆ ಹೋಗಬೇಕಾದ ಅನಿವಾರ್ಯತೆ ಇರಲಿಲ್ಲ. ಹೆರಿಗೆಯ ತನಕ ತಂದೆಯ ಮನೆಯಲ್ಲಿದ್ದು, ಗಂಡು ಮಗುವನ್ನು ಹೆತ್ತರೆ ಅದರ ತಂದೆಗೆ ಒಪ್ಪಿಸಿ ಕಣ್ಣನ ಬಳಿ ಹೋಗಬೇಕಾಗುತ್ತದೆ. ನಂಬೂದಿರಿಗೆ ಲಲಿತೆಯ ಮೇಲೆ ಪ್ರೀತಿ ಇರಲಿಲ್ಲ, ಅವಳ ಸೌಂದರ್ಯ ಅಕರ್ಷಣೆಗೆ ಕಾರಣವಾಗಿತ್ತು. ಮುಂದೆ ದೇವಸ್ಥಾನದ

ಆನೆಯೊಂದು ಮದವೇರಿ ಲಲಿತೆಯನ್ನು ಅಟ್ಟಿಸಿಕೊಂಡು ಬಂದಾಗ ನಂಬೂದಿರಿ ಆತ್ಮರಕ್ಷಣೆಗಾಗಿ ಮರವೇರಿ ಕುಳಿತರೆ, ಕಣ್ಣ ತನ್ನ ಜೀವವನ್ನು ಪಣಕ್ಕಿಟ್ಟು ಲಲಿತೆಯನ್ನು ರಕ್ಷಿಸುತ್ತಾನೆ.

ಆಗ ಲಲಿತೆ ಗಂಡನ ಬಗ್ಗೆ ಇರುವ ವಿಶ್ವಾಸವನ್ನು ತೊರೆದು ಪ್ರತಿರೋಧವನ್ನು ತೋರಿ ಕಣ್ಣನ ಬಳಿ ಹೋಗುತ್ತಾಳೆ. ಲಲಿತೆಯನ್ನು ಕಂಡ ಕಣ್ಣ ಸಂತೋಷದಿಂದ ಎದೆಯೊಡೆದು ಸಾಯುತ್ತಾನೆ. ಸಾಮಾಜಿಕವಾಗಿರುವ ಜಾತಿಪದ್ಧತಿಯನ್ನು ಧಿಕ್ಕರಿಸುವ ಪುಲಪೇಡಿ ಪದ್ಧತಿಯನ್ನು ಒಪ್ಪಿಕೊಂಡು ಹೋಗುವ ಲಲಿತೆಯ ಬದುಕು ಅಲ್ಲಿಗೆ ನಿಂತು ಬಿಡುತ್ತದೆ. ಕಣ್ಣನ ಸಾವು ಜಾತಿಪದ್ಧತಿಯನ್ನು ಬಲಪಡಿಸುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯು ಉದ್ದೇಶಿತವಾಗಿ ಸಂಪ್ರದಾಯದ ಹೆಸರಿನಲ್ಲಿ ಜೈವಿಕ ಸ್ವರೂಪವನ್ನು ಆಧಾರವಾಗಿಟ್ಟುಕೊಂಡು ಸ್ತ್ರೀ ಪುರುಷರ ನಡುವೆ ಅಸಮಾನತೆಯನ್ನು ಉಂಟು ಮಾಡಿರುವ ಬಗ್ಗೆ ವಿಮರ್ಶಿಸುತ್ತಾರೆ. ವೈದೇಹಿಯವರ 'ಒಂದು ಬಾಗಿಲ ಸದ್ದು' ಕತೆಯಲ್ಲಿ ಬ್ರಾಹ್ಮಣ ಕುಟುಂಬ ಒಂದರಲ್ಲಿ ಜನಿಸಿದ ನಿರೂಪಕಿ ಸಾಲಿಗ್ರಾಮವನ್ನು ಮುಟ್ಟಬಾರದು ಎನ್ನುವ ಸಂಪ್ರದಾಯವನ್ನು ವೈಚಾರಿಕ ನಿಲುವಿನಿಂದ ನೋಡಿ ಸಾಲಿಗ್ರಾಮವನ್ನು ಮುಟ್ಟುವ ಮೂಲಕ ತನ್ನ ಚಿಕ್ಕಂದಿನ ಆಸೆಯನ್ನು ಈಡೇರಿಸಿಕೊಂಡು ಪೊಳ್ಳು ಸಂಪ್ರದಾಯವನ್ನು ಧಿಕ್ಕರಿಸಿ ಹಗುರಾಗುತ್ತಾಳೆ. "ಸುತ್ತ ಥಾನು ಥಾನು ನಂಬಿಕೆಯ ಸುರುಳಿ, ಯಾರು ಇದನ್ನೆಲ್ಲ ನೇಯುವವರು. ಹೊತ್ತು ತಂದು ಹೆಣ್ಣು ಮಕ್ಕಳನ್ನು ಹುಡುಕಿ ಹುಡುಕಿ ಸುತ್ತುವವರು"[೨೫] ಎಂದು ಪ್ರಶ್ನಿಸಿಕೊಳ್ಳುವ ನಿರೂಪಕಿಯಲ್ಲಿ ಪುರುಷ ಶ್ರೇಷ್ಠ ಸ್ತ್ರೀ ಕೀಳೆಂಬ ಶ್ರೇಣೀಕೃತ ವ್ಯವಸ್ಥೆಯ ಬಗ್ಗೆ ಪ್ರತಿರೋಧವನ್ನು ವ್ಯಕ್ತಪಡಿಸುವುದನ್ನು ಕಾಣಬಹುದು.

ಸಾರಾ ಅಬೂಬಕ್ಕರ್ 'ಖೆಡ್ಡಾ' ಸಂಕಲನದ ಖೆಡ್ಡಾ ಕಥೆಯಲ್ಲಿ ನರಸಿಂಹಯ್ಯ ತನ್ನ ಮಗಳು ಶೈಲಿನಿಯನ್ನು ಸ್ನೇಹಿತ ಸುಬ್ಬಣ್ಣನ ಮನೆಯಲ್ಲಿ ಬಿ.ಎಡ್. ಓದಲು ಇರಿಸಿ ಆತನ ಅಂಗವಿಕಲ ಮಗ ಸುಹಾಸನಿಂದ ಮೋಸ ಹೋಗುತ್ತಾನೆ. ಸುಹಾಸನು ವಿಕೃತ ಮನಸ್ಸಿನವನಾಗಿದ್ದು ಶೈಲಿನಿಯನ್ನು ಮದುವೆಯಾಗಲು ಹಂಬಲಿಸಿ ಒಪ್ಪಿಸುವ ಪ್ರಯತ್ನದಲ್ಲಿ ವಿಫಲನಾದಾಗ ತಾನು ಮದುವೆಯಾಗಿದ್ದೇನೆ, ಆಕೆ ತನ್ನ ಹೆಂಡತಿ ಎಂದು ಕೇಸನ್ನು ಹಾಕುತ್ತಾನೆ. ಕೋರ್ಟ್‌ನಲ್ಲಿ ಹಲವಾರು ವರ್ಷಗಳು ಕೇಸ್ ನಡೆದು ಕೊನೆಗೆ ಜಯ ಸಿಗುತ್ತದೆ.

ಅಷ್ಟೊತ್ತಿಗೆ ಶೈಲಿನಿಯ ಅಣ್ಣ ಶ್ರೀನಿವಾಸ ಪದ್ಮವೇಣಿಯನ್ನು ಅಂತರ್ಜಾತಿ ವಿವಾಹವಾಗುತ್ತಾನೆ. ನರಸಿಂಹಯ್ಯನಿಗೆ ತನ್ನ ಮಗಳ ಮದುವೆ ಮಾಡುವುದು ಬಹಳ ಕಷ್ಟವಾಗಿ ಚಿಂತೆ ಕಾಡುತ್ತಿರುತ್ತದೆ. ಆಗ ಗುಣವಂತನಾದ ಪದ್ಮವೇಣಿಯ ಅಣ್ಣ ಶೈಲಿನಿಯನ್ನು ಇಷ್ಟಪಟ್ಟದ್ದರಿಂದ ನರಸಿಂಹಯ್ಯನೂ ಸಂತೋಷವಾಗಿ ಒಪ್ಪಿ ತನ್ನ ಮಗಳಿಗೂ ಸಹ ಅಂತರ್ಜಾತಿ ವಿವಾಹವನ್ನು ಮಾಡಿಸಲು ಮುಂದಾಗುತ್ತಾನೆ. ದೇವರು, ಧರ್ಮ, ಪೂಜೆ, ಪುನಸ್ಕಾರ, ಜಾತಕ, ಸಂಪ್ರದಾಯ ಎಂದೆಲ್ಲಾ ಮುಳುಗಿದ ನರಸಿಂಹಯ್ಯನವರು ಅವುಗಳನ್ನೆಲ್ಲಾ ವಿರೋಧಿಸಿ ಮಾನವೀಯತೆಯತ್ತ ಹೆಜ್ಜೆ ಹಾಕುತ್ತಾರೆ.

"ಹೂಂ, ಹೌದು ಮಗೂ, ಮನುಷ್ಯತ್ವವೆನ್ನುವುದು ಜಾತಿಯಲ್ಲಿಲ್ಲ. ಮನುಷ್ಯನ ಹೃದಯದಲ್ಲಿದೆ ಎಂಬುದು ಈಗ ತಾನೇ ನನಗರ್ಥವಾಗುತ್ತಾ ಇದೆ. ಅವನೊಪ್ಪುವುದಾದರೆ ನಾವೇ ನಿಂತು ಮದುವೆ ಮಾಡಿಸುವ ನಿರ್ಧಾರವೊಂದು ಅವರ ಮುಖದಲ್ಲಿ ಒಡಮೂಡಿತ್ತು. ವ್ಯವಸ್ಥೆಯೊಡನೆ ರಾಜಿ ಮಾಡಿಕೊಂಡು ಅವರಿಗೆ ಸಾಕಾಗಿತ್ತು"[೨೬] ಎಂಬ ಮಾತುಗಳಲ್ಲಿ ಅಮಾನವೀಯವಾದ ಮತ್ತು ಹೃದಯವಂತಿಕೆಯಿಲ್ಲದ, ಬದುಕಿಗೆ ದಾರಿ ತೋರದ ಧರ್ಮ, ಜನರನ್ನು ವಿರೋಧಿಸುತಾನೆ. ಹಾಗಾಗಿ ಧರ್ಮ, ಜಾತಿ, ಸಂಪ್ರದಾಯಗಳಿಗಿಂತ ಮನುಷ್ಯನಿಗೆ ಬದುಕು ಮುಖ್ಯ ಎಂಬುದನ್ನು ಕಥೆ ಸ್ಪಷ್ಟಪಡಿಸುತ್ತದೆ

ಎಚ್. ನಾಗವೇಣಿಯವರ 'ಕಸಬರಿಕೆ ಕಥೆ' ಜಾತಿ ಸಮಸ್ಯೆ ಸಂಪ್ರದಾಯ ಹೆಣ್ಣಿನ ಸ್ವಾಭಿಮಾನ ಇವನ್ನು ಎತ್ತಿ ಹಿಡಿಯುವ ಕಥೆ. ಬ್ರಾಹ್ಮಣ ಜಾತಿಯ ಹೆಂಗಸು ತನ್ನ ಮನೆಗೆ ಕೂಲಿ ಕೆಲಸಕ್ಕೆಂದು ಬರುವ ಕೆಳಜಾತಿಯ ಹೆಣ್ಣು ಮಗಳನ್ನು ಸದಾ ಚುಚ್ಚುಮಾತಿನಿಂದ ಹಂಗಿಸುವ ಟೀಕಿಸುವ ಅವಮಾನಿಸುವ ಪ್ರಸಂಗ ಈ ಕಥೆಯಲ್ಲಿ ಕಂಡುಬರುತ್ತದೆ.

ಚಂದು ಪ್ರೀತಿಸುವ ಗಂಡಿನಿಂದ ಹಿಡಿದು ಆಕೆಯ ಹಾವಭಾವ ಭಂಗಿ, ವೇಷ ಭೂಷಣ, ನಡತೆ ಎಲ್ಲವನ್ನೂ ಮುಲಾಜಿಲ್ಲದೆ 'ಕಸಬರಿಕೆ' ಕಥೆಯ ಬ್ರಾಹ್ಮಣ್ತಿ ಅಮ್ಮಣ್ಣಿಯಮ್ಮ ಹೀಯಾಳಿಸುತ್ತಾ ಇರುತ್ತಾಳೆ. ಇದರಿಂದ ನೊಂದ ಆಕೆ ಒಂದು ದಿನ ಇದ್ದಕ್ಕಿದ್ದಂತೆ ಕಸಬರಿಕೆ ಹಿಡಿದು ಬ್ರಾಹ್ಮಣ ಹೆಂಗಸನ್ನು ಚೆನ್ನಾಗಿ ಬಡಿಯುವ ಪ್ರಸಂಗ ಈ ಕಥೆಯಲ್ಲಿ ಚಿತ್ರಿತಗೊಂಡಿದೆ. ಆ ಘಟನೆ ಹೀಗಿತ್ತು. "ಒಂದು ದಿನ ಬ್ರಾಹ್ಮಣ್ತಿ ತನ್ನ ಮನೆಯಂಗಳದ ತುಳಸಿ ಕಟ್ಟೆಯ ಮುಂದೆ ಸುಂದರವಾದ ರಂಗೋಲಿ ಇಟ್ಟಿದ್ದಳು. ಆ ರಂಗೋಲಿ ಬಹಳ ಆಕರ್ಷಣೀಯವಾಗಿತ್ತು. ಅದರ ಸೌಂದರ್ಯವನ್ನು ಬ್ರಾಹ್ಮಣ್ತಿಯ ಮೇಲಿನ ಸಿಟ್ಟನ್ನೆಲ್ಲಾ ಮರೆತು ಮೈಯೆಲ್ಲಾ ಕಣ್ಣಾಗಿ ವೀಕ್ಷಿಸುತ್ತಿದ್ದ ಹುಡುಗಿಯನ್ನು ನೋಡಿ ಬ್ರಾಹ್ಮಣ್ತಿಗೆ ಪಿತ್ತ ನೆತ್ತಿಗೇರುತ್ತದೆ. ಈ

ಕೆಳಜಾತಿಯ ಹೆಣ್ಣು ನನ್ನ ಮನೆಯ ತುಳಸಿಕಟ್ಟೆಯ ಸುತ್ತ ತಾನೇ ರಂಗೋಲಿ ಗೀಚಲಾರಂಭಿಸಿದರೆ ತನ್ನ ಮನೆಗೆ ಮೈಲಿಗೆಯಲ್ಲವೇ ಎಂದು ಭಾವಿಸಿದ ಆ ಬ್ರಾಹ್ಮಣ್ತಿ ಆತಂಕದಿಂದ ಹುಡುಗಿಯನ್ನು ಕೆಟ್ಟ ಭಾಷೆಗಳಿಂದ ಬೈಯ್ದು ರಂಗೋಲಿಯನ್ನು ಹಾಳು ಮಾಡಿ ಹಾಕುತ್ತಾಳೆ".[೨೭] ಇದು ಆ ಹುಡುಗಿಯನ್ನು ಅವಮಾನಕ್ಕೆ ಈಡುಮಾಡುತ್ತದೆ. ಅವಮಾನ ಸಿಟ್ಟು ಪ್ರತಿಭಟನೆಯ ರೂಪ ತಾಳುತ್ತದೆ. ಬ್ರಾಹ್ಮಣ್ತಿಯ ಅಂಗಳ ಗುಡಿಸಲೆಂದೇ ಕೈಯ್ಯಲ್ಲಿ ಕಸಬರಿಕೆ ಹಿಡಿದಿದ್ದು ಹುಡುಗಿ ಅದೇ ಕಸಬರಿಕೆಯಿಂದ ಆ ಬ್ರಾಹ್ಮಣ್ತಿಯ ಜುಟ್ಟು ಬಗ್ಗಿಸಿ ತಿರುಗಿಸಿ ತಿರುಗಿಸಿ ಬಾರಿಸುತ್ತಾಳೆ.

ಆಗ ಅಮ್ಮಣ್ಣಿಯಮ್ಮ ಶಾಪ ಹಾಕುತ್ತಾಳೆ ಇದನ್ನು ಕೇಳಿದ ಚಂದು ತಟ್ಟನೆ ಅಬ್ಬರಿಸಿ "ಬಾಯ್ಮುಚ್ಚು ಬಿಕನಾಸಿ ಬ್ರಾಹ್ಮಣ್ತಿ; ಬಾಯೆತ್ತಿದ್ರೆ ಮತ್ತೆ ಕಾಲಮೆಟ್ಟಲ್ಲಿ ಹೊಡೆದು ಬಿಟ್ಟೇನು"[೨೮] ಎಂದು ಎಚ್ಚರಿಕೆ ಕೊಡುತ್ತಾಳೆ. ನಿಜಕ್ಕೂ ಆಕೆಯ ಧೈರ್ಯ ಮೆಚ್ಚುವಂತಹದ್ದೇ. ತನ್ನನ್ನು ಕಸಬರಿಕೆಗಿಂತ ಕಡೆಯಾಗಿ ಕಂಡ ಮೇಲ್ಜಾತಿಯ ಹೆಂಗಸನ್ನೂ ಆಕೆ ಅದೇ ಕಸಬರಿಕೆಯಿಂದ ಹೊಡೆಯುವುದರ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಸಂಪ್ರದಾಯವನ್ನು ಮೆಟ್ಟಿ ಸ್ವಾಭಿಮಾನವನ್ನು ಮೆರೆದ ಹೆಣ್ಣಿನ ಪಾತ್ರ ತನ್ನ ಆಸ್ತಿತ್ವವನ್ನು ಗಟ್ಟಿಗೊಳಿಸುವುದನ್ನು ಇಲ್ಲಿ ಗಮನಿಸಬಹುದು.

'ಮೀಯುವ ಆಟ' ಕಥೆ ಮಳೆಗಾಲದಲ್ಲಿ ಹಳ್ಳಿ ಜನ ಬದುಕು ಕಟ್ಟಿಕೊಳ್ಳುವ ಆತಂಕದ ದಿನಗಳನ್ನು ಅತ್ಯಂತ ಮಾರ್ಮಿಕವಾಗಿ ಬಿಂಬಿಸುತ್ತದೆ. ಬಡ ಮತ್ತು ಮಧ್ಯಮ ವರ್ಗದ ಜನ ಇಲ್ಲಿ ಊಟ ತಿಂಡಿಗಿಂತಲೂ ಮಳೆಗಾಲದಲ್ಲಿ ಮೀಯುವ ಬಿಸಿನೀರಿಗೆ ಹೆಚ್ಚು ಹಪಹಪಿಸುತ್ತಾರೆ, ಹಂಬಲಿಸುತ್ತಾರೆ. ಈ ಕಥೆಯಲ್ಲಿ ಬರುವ ಮುಖ್ಯ ಪಾತ್ರ ಖಾದ್ರಿ ಬ್ಯಾರಿ. ವಾತ ರೋಗದಿಂದ ಬಳಲುತ್ತಿರುವ ಬಡ ಮಧ್ಯಮ ವರ್ಗದ ವಯಸ್ಕ ವ್ಯಕ್ತಿ. ಮೂರು ಹೊತ್ತು ಸರಿ ಹೊಟ್ಟೆಗಿಲ್ಲದಿದ್ದರೂ ಮೈಗೆ ಬಿಸಿ ನೀರು ಹೊಯ್ದುಕೊಂಡು ಸ್ನಾನ ಮಾಡುವ ಆಸೆ ಹೊತ್ತುಕೊಂಡ ಹಿರಿ ಜೀವ. ಹೆಂಡತಿಯನ್ನು ಕಳೆದುಕೊಂಡು ಸೊಸೆಯ ಹಂಗಿನಲ್ಲಿ ಬದುಕುವ ಈ ಹಿರಿಜೀವಕ್ಕೆ ಒಂಚೂರು ಬಿಸಿ ನೀರು ಕಾಯಿಸಿ ಕೊಡದೆ ವಾತದ ರೋಗಿ ಮಾವನನ್ನು ಹೀನಾಯವಾಗಿ ಕಾಣುವ ಸೊಸೆ.

ವೆಂಕಪ್ಪ ಶೆಟ್ರು ಮಗಳು ಬಾಣಂತಿಗೆ ಬಿಸಿನೀರು ಕಾಯಿಸಿಕೊಡುವ ಕೆಲಸಕ್ಕೆ ಕರೆದಾಗ ಖಾದ್ರಿ ಬ್ಯಾರಿ ಒಪ್ಪಿಕೊಂಡದ್ದೇ ಬಿಸಿನೀರು ಮೀಯುವ ಆಸೆಗಾಗಿ. ಆದರೆ ವೆಂಕಪ್ಪ ಶೆಟ್ಟರ ಹೆಂಡತಿ ಉಮ್ಮಕ್ಕೆ ಶೆಡ್ತಿಯ ಅತಿ ಆಸೆ ಅವರ ಬಿಸಿ ನೀರ ಸ್ನಾನದ ಆಸೆಯನ್ನು ಎಂದೂ ಪೂರೈಸಲೇ ಇಲ್ಲ. ದಿನಾ ಅವರ

ಮಗಳಿಗೆ ಸ್ನಾನಕ್ಕೆ ನೀರು ಕಾಯಿಸಿ ಕೊಡುವ ಖಾದ್ರಿ ಬ್ಯಾರಿ ಬಾಣಂತಿಯ ಸ್ನಾನದ ಬಳಿಕ ತಾನು ಮೀಯಬಹುದೆಂದು ನಿರೀಕ್ಷೆಯಿಂದ ಇರುತ್ತಾರೆಯೇ ಹೊರತು ಅವರ ಆಸೆ ಎಂದೂ ಈಡೇರುವುದೇ ಇಲ್ಲ.

ಉಮ್ಮಕ್ಕೆ ಶೆಡ್ತಿ ಎಲ್ಲಾ ನೀರನ್ನು ಮಗಳಿಗೆ ಮೀಯಿಸಿ ಕೊನೆಗೆ ಕಾಲಿಗೆ ಎರೆದುಕೊಳ್ಳುವಷ್ಟು ನೀರನ್ನು ಮಾತ್ರ ಅವರಿಗೆ ಉಳಿಸುತ್ತಾರೆ. ವಾತ ರೋಗಿ ಖಾದ್ರಿ ಬ್ಯಾರಿಗೆ ತನ್ನ ಸೊಸೆಯ ಕಾಟದಿಂದ ಅವರ ಮನೆಯಲ್ಲೂ ಬಿಸಿ ನೀರಿಲ್ಲ, ಕೆಲಸಕ್ಕೆ ಸೇರಿದ ಮನೆಯವರೂ ಅವರನ್ನು ಅರ್ಥ ಮಾಡಿಕೊಂಡಿಲ್ಲ.

ಉಮ್ಮಕ್ಕೆ ಹೆಂಗ್ಸಿಗೆ ಖಾದ್ರಿ ಬ್ಯಾರಿಯ ಮೇಲೆ ಯಾವುದೇ ದ್ವೇಷವಿಲ್ಲದಿದ್ದರೂ ಮಳೆಗಾಲದಲ್ಲಿ ಬಿಸಿನೀರು ಕಾಯಿಸಲೆಂದು ತೆಗೆದಿರಿಸಿದ ಕಟ್ಟಿಗೆ ಮಡಲು ಎಲ್ಲವನ್ನೂ ಮುಗಿಸಿ ಹಾಕುತ್ತಾರೆ ಎನ್ನುವ ಆತಂಕ. ಮಗಳಿಗೆ ಬಾಣಂತನಕ್ಕೆ ಸರಿಯಾಗಿ ಬಿಸಿನೀರು ಕಡಿಮೆಯಾಗಬಹುದೆಂಬ ತಾಯಿ ಹೃದಯದ ಸಹಜ ಕಾಳಜಿ ಈ ಕಥೆಯಲ್ಲಿ ವ್ಯಕ್ತವಾಗುವುದನ್ನು ಕಾಣಬಹುದು.

ಬಾಣಂತಿ ಮಗಳಾದರೂ ಹೆಣ್ಣು ಸಹೃದಯದಿಂದ ತಂದೆ ವಯಸ್ಕನಾದ ಖಾದ್ರಿ ಬ್ಯಾರಿಯ ಮೇಲೆ ಅನುಕಂಪ ತೋರುತ್ತಾಳೆ. "ಏನೋ ಆ ಮುದಿವಾತದ ಜೀವ ನಾಕು ಚೊಂಬು ಬಿಸಿ ನೀರಿಗಾಗಿ ಇನ್ನಿಲ್ಲದಂತೆ ಜೀವ ಬಿಡುತ್ತದೆ. ಅವ್ರೇನು ನಮ್ಮಿಂದ ಉಣ್ಣುವ ಅನ್ನ ಕೇಳ್ತಾರಾ ಅಥವಾ ಉಡುವ ಬಟ್ಟೆ ಕೇಳ್ತಾರಾ? ಬರೀ ಹೊಯ್ದುಕೊಳ್ಳಲು ಒಂದಷ್ಟು ಬಿಸಿ ನೀರು ಬಯಸುತ್ತಿದ್ದಾರೆ ಅಷ್ಟೇ"[೨೯] ಎಂದು ಮಗಳು ಸುಮತಿ ಅಮ್ಮನಿಗೆ ತಾಕೀತು ಮಾಡುತ್ತಾಳೆ. ಮಗಳ ಮಾತಿನಿಂದ ಉಮ್ಮಕ್ಕೆಯ ವಿಕ್ಷಿಪ್ತ ಅರಿವು ತಿಳಿಯಾಗುತ್ತದೆ. ಮಗು ಮೀಯಿಸುವ ನೀರನ್ನು ಹದಗೊಳಿಸುತ್ತಿದ್ದ ಅವರು ಮಗಳಾಡಿದ ಮಾತುಗಳನ್ನು ಅತ್ಯಂತ ಪರಿತಾಪದಿಂದಲೇ ಮನನ ಮಾಡಿಕೊಳ್ಳುತ್ತಿದ್ದಂತೆ ಅವರಿಗೆ ಮನದ ಭಾವದ ಬಗ್ಗೆ ಪಶ್ಚಾತ್ತಾಪ ಹುಟ್ಟುತ್ತಿತ್ತು.

ನೀರನ್ನು ಕಾಯಿಸುವಾಗ ಖಾದ್ರಿ ಬ್ಯಾರಿ ಹೆಣ ಮೀಯಿಸಲು ನೀರು ಕಾಯಿಸುವಂತೆ ಕಾಯಿಸಿ ಮಡಲು ಸೌದೆ ಕಟ್ಟಿಗೆ ಉರುವಲು ಮುಗಿಸುತ್ತಿದ್ದಾರೆಂದು ಚುಚ್ಚಿ ಚುಚ್ಚಿ ಮಾತನಾಡಿದ್ದು–ಬೈದದ್ದು ನೆನಪಾಗಿ ಇನ್ನೂ ಪಶ್ಚಾತ್ತಾಪ ಹುಟ್ಟುತ್ತಿತ್ತು. ಅವರಿಗೂ ಖಾದ್ರಿ ಬ್ಯಾರಿಯೆಂದ್ರೆ ಉದಾಸೀನವಿಲ್ಲ, ನಿರ್ಲಕ್ಷ್ಯವಿಲ್ಲ, ಉಡಾಫೆಯ ಭಾವವೂ ಇಲ್ಲ. ಆದರೆ ಈ ಮಾನ ತೆಗೆಯುವ ಮಳೆಗಾಲದಲ್ಲಿ 'ಅನಪತ್ಯ'ಕ್ಕೆ

ಅಂತ ಇಟ್ಟಿದ್ದ ಸೌದೆ ಸೊಪ್ಪುಗಳೆಲ್ಲವನ್ನು ಖಾದ್ರಿ ಬ್ಯಾರಿಯವರು ಮುಗಿಸಿದರೆ ಈ ಮಳೆಗೆ ಬಾಣಂತಿ–ಮಗುವಿನ ಕತೆ ಏನು ಎಂಬ ಆತಂಕದಿಂದ ಹಾಗೆ ನಡೆದುಕೊಳ್ಳುತ್ತಿದ್ದರು.

ತುಳುನಾಡಿನ ಮಳೆಯ ಸಂದರ್ಭದ ಬಾಣಂತಿ–ಮಕ್ಕಳ ತಾಯಂದಿರಲ್ಲಿ ಇರಬಹುದಾದ ಆತಂಕದ ಚಿತ್ರಣವಿದು. ಹಾಗಂತ ಅಲ್ಲಿನ ಅಮ್ಮಂದಿರೆಲ್ಲ ಕೆಟ್ಟವರಲ್ಲ. ಒಳ್ಳೆಯ ಅಂತಃಕರಣ ಇಲ್ಲದವರು ಎಂದಲ್ಲ. ಪರಿಸ್ಥಿತಿ ಅವರನ್ನು ಹಾಗೆ ಮಾಡಿರುತ್ತದೆ ಎನ್ನುವುದನ್ನು ಎಚ್. ನಾಗವೇಣಿ ಹೇಳುವ ಪ್ರಯತ್ನ ಮಾಡಿದ್ದಾರೆ. ಕೊನೆಗೂ ಖಾದ್ರಿ ಬ್ಯಾರಿಯವರ ಸ್ನಾನದ ಆಸೆ ಈಡೇರುವುದು ಸಾವಿನಲ್ಲೇ. ಅವರು ಸತ್ತಾಗ ಅವರ ಹೆಣ ಮೀಯಿಸುವುದಕ್ಕೆ ತನ್ನ ಮನೆಯ ಎಲ್ಲಾ ಉರುವಲನ್ನು ಕಳುಹಿಸಿಕೊಟ್ಟು ಉಮ್ಮಕ್ಕೆ, ಬಿಸಿನೀರು ಕಾಯಿಸಿ ಕೊಟ್ಟ ವೆಂಕಪ್ಪ ಶೆಟ್ರು ತುಳುನಾಡಿನ ಜನತೆಯ ಆತ್ಮವನ್ನು ಅನಾವರಣಗೊಳಿಸಿದ್ದಾರೆ. ಈ ಕಥೆಯಲ್ಲಿ ಎರಡು ಧರ್ಮಗಳ ಸಾಮರಸ್ಯವನ್ನು ಅತೀ ಸೂಕ್ಷ್ಮವಾಗಿ ಗಮನಿಸಬಹುದು.

'ದಾನ' ಕಥೆಯು ಕೂಡಾ ಸಂಪ್ರದಾಯದ ಹಿನ್ನೆಲೆಯನ್ನೇ ಮುಖ್ಯವಾಗಿರಿಸಿಕೊಂಡು ರಚನೆಯಾದದ್ದು. ಈ ಕಥೆಯಲ್ಲಿ 'ಕೊರಗ' ಜನಾಂಗದ ಜನರ ಅಜಲು ಪದ್ಧತಿ ಸಂಪ್ರದಾಯದ ಕುರಿತು ಚರ್ಚೆ ಇದೆ. ಹುಟ್ಟಿದ ಮಗುವಿಗೆ ಏನಾದರೂ ಶನಿ ದೋಷ ಇದ್ದರೆ ಆ ಮಗುವನ್ನು ಕೊರಗ ಜನಾಂಗದ ಹೆಣ್ಣು ಕೊರತಿಗೆ ದಾನ ನೀಡುವ ಸಂಪ್ರದಾಯವೊಂದಿದ್ದು ಆ ಸಂಪ್ರದಾಯವನ್ನು ಈ ಕಾಲಕ್ಕೆ ಮುಖಾಮುಖಿಯಗಿ ನಿಲ್ಲಿಸಿ ಕಥೆಯನ್ನು ಹೆಚ್. ನಾಗವೇಣಿಯವರು ಹೆಣೆದಿದ್ದಾರೆ. ಹಿಂದಿನ ಕಾಲದಲ್ಲಿ ಕೊರಗ ಜನಾಂಗವನ್ನು ಅತ್ಯಂತ ಕೀಳು ಮಟ್ಟದಲ್ಲಿ ಮೇಲ್ವರ್ಗದ ಜನರು ಕಾಣುತ್ತಿದ್ದ ವಿಚಾರ ಈ ಕಥೆಯಲ್ಲಿ ಉಲ್ಲೇಖಗೊಂಡಿದೆ.

ಗುತ್ತಿನ ಧಣಿ ಸಂಕಪ್ಪ ಶೆಟ್ಟರ ಮೊಮ್ಮಗುವಿನ ಜಾತಕದ ಬಗ್ಗೆ ಜೋಯಿಸರಲ್ಲಿ ಪ್ರಶ್ನೆ ಕೇಳಿದಾಗ ಅವರು ದೋಷವಿದೆ ಎಂದು ಹೇಳುತ್ತಾರೆ. ಅದಕ್ಕೆ ಪರಿಹಾರವಾಗಿ ಶನಿವಾರ ಮಗುವಿನ ಹೆಸರಲ್ಲಿ ಶನಿ ಪೂಜೆ. ಶನಿಕತೆ ಈಶ್ವರ ದೇವಸ್ಥಾನಕ್ಕೆ ಎಣ್ಣೆಸೇವೆ ಮಾಡಬೇಕು ಹಾಗೆಯೇ ಅಮಾವಸ್ಯೆಗೆ ಅಜಲಿನ ಕೊರತಿಗೆ ಮಗುದಾನ ಕೊಡುವ ಶಾಸ್ತ್ರ ಮಾಡಬೇಕು. ಅನ್ನದಾನ, ಎಣ್ಣೆದಾನ ಕೂಡ ಮಾಡಬೇಕು ಎಂದಾಗ ಸಂಕಪ್ಪ ಶೆಟ್ಟರ ಗಂಟಲು ಕಟ್ಟಿ ಹೋಯಿತು. ಸಂಪ್ರದಾಯದ ಹೆಸರಿನಲ್ಲಿ ಆಚಾರ ಕಟ್ಟಳೆಗಳ ನೆಪದಲ್ಲಿ ತಮ್ಮ ಮೇಲೆ ಸವರ್ಣೀಯರು ನಡೆಸುವ ಕ್ರೌರ್ಯ ಶೋಷಣೆಗಳನ್ನು ವಿಧಾನವಾಗಿ ಅವರು ಅರ್ಥೈಸುತ್ತಿದ್ದಾರೆ.

ಈಗೇನಾದರೂ ಗುತ್ತಿನೊಡೆಯರು ಅಜಲಿನ ಕೊರತಿ ಕುಡ್ಪುವಿಗೆ ಮಗುವನ್ನು ಕೈಹಗರಿಸುವ ಶಾಸ್ತ್ರಕ್ಕೆ ಬರಬೇಕಂತೆ ಎಂದು ಹೇಳಿ ಕಳುಹಿಸಿದರೆ ಆಕೆಯ ಮಗ ಕೆಂಜಾರು ಶಾಲೆಯ ಮಾಸ್ಟಕೇತು "ನಮ್ಮನೆಯ ಮಗು ಹಗರಿಸುವ ಶಾಸ್ತ್ರಕ್ಕೆ ನಿಮ್ಮ ಹೆಂಡತಿಯನ್ನು ಕಳುಹಿಸಿ ಎಂದು ಹೇಳಿದರೂ ಹೇಳುವವನೇ"[೩೦] ಎನ್ನುವಲ್ಲಿ ಕೊರಗ ಜನಾಂಗದವರು ತಮ್ಮ ಹಿಂದಿನ ಹೀನ ಪರಿಸ್ಥಿತಿಯಿಂದ ಹೊರಬರುವ ತಮ್ಮನ್ನು ಅಂಧಕಾರದಿಂದ ಶಿಕ್ಷಣದ ಬೆಳಕಿನೆಡೆಗೆ ತೆರೆದುಕೊಳ್ಳುವ, ತಮಗಾಗಿರುವ ದೌರ್ಜನ್ಯದಿಂದ ಮುಕ್ತಿ ಹೊಂದಲು ಹವಣಿಸುತ್ತಿರುವ ಸ್ಪಷ್ಟ ಸೂಚನೆಗಳು ಇಲ್ಲಿವೆ. ತಮ್ಮ ಮೇಲೆ ಸಂಪ್ರದಾಯದ ಹೆಸರಿನಲ್ಲಿ ಆಗುತ್ತಿರುವ ಶೋಷಣೆಯ ವಿರುದ್ಧ ದನಿ ಎತ್ತುವ ವ್ಯಕ್ತಿಯಾಗಿ, ಕೊರಗರ ಜನಾಂಗದ ಪ್ರತಿನಿಧಿಯಾಗಿ ಕೇತು ಈ ಕಥೆಯಲ್ಲಿ ಗೋಚರವಾಗುತ್ತಾನೆ.

ಆದರೆ ಕೇತುವಿನ ಹಿರಿಯರೆಲ್ಲಾ ಇನ್ನೂ ಬದಲಾವಣೆಗೆ ಒಪ್ಪಿಕೊಳ್ಳದ ಸ್ಥಿತಿಯಲ್ಲಿದ್ದಾರೆ. ಸಂಪ್ರದಾಯದ ಕೋಟೆಯಿಂದ ಹೊರಬರಲಾದ ಸ್ಥಿತಿಯಲ್ಲಿದ್ದಾರೆ. ಅಜಲು ಪದ್ಧತಿ, ಮಗು ದಾನ ಪದ್ಧತಿ, ಮೇಲ್ವರ್ಗದವರ ಎಂಜಲು ಬಾಚುವುದು, ಮೇಲ್ಜಾತಿಯವರ ಮನೆಯಲ್ಲಿ ಕೋಲ-ಕಂಬಳಗಳಾದಾಗ ಡೋಲು ಬಾರಿಸುವುದು ಇದೆಲ್ಲಾ ತಮ್ಮ ಜನ್ಮ ಸಿದ್ಧ ಹಕ್ಕು ಎಂದು ಭಾವಿಸಿದವರು.

ಕೇತು ಇಂತಹ ಪದ್ಧತಿಯನ್ನೆಲ್ಲ ವಿರೋಧಿಸುವಾಗ 'ಹಳೆಯ ಕಾಲದಿಂದಲೂ ಕಟ್ಟಿಕೊಂಂಡಿರುವ ಕಟ್ಟನ್ನು (ಪದ್ಧತಿಯನ್ನು) ಹಾಗೆ ಬಿಟ್ಟು ಬಿಡಲಾಗುತ್ತಾ ಮಗಾ... ನಮ್ಮ ಜೀವ ಇರುವವರೆಗೆ ಇದು, ನಂತರ ನಿಮಗೆ ಇಷ್ಟ ಬಂದ ಹಾಗೆ ಮಾಡಿ'...[೩೧] ಎಂದಾಗ ಅಪ್ಪನ ಮಾತಿನಿಂದ ಕೇತುವಿಗೆ ವಿಪರೀತ ಸಿಟ್ಟು ಬರುತ್ತದೆ. ಆತ ಸಿಟ್ಟು ಬಂದಾಗ ಹೇಳುವ ಮಾತು ಇಲ್ಲಿ ಉಲ್ಲೇಖನೀಯ.

"ನೀನು ತಾಯ ಹೊಟ್ಟೆಯಿಂದ ಉದುರುವಾಗಲೇ ಆ ಕಟ್ಟುಗಳನ್ನೆಲ್ಲ ಕಟ್ಟಿಕೊಂಡು ಬಂದಿದ್ದೇನು? ಆ ಕಟ್ಟುಗಳನ್ನು ಮಾಡಿದವರ್‍ಯಾರು ಆ ಮೇಲ್ಜಾತಿಯವರು. ಅವ್ರು ನಮ್ಮನ್ನು ಇಷ್ಟು ದಿನ ನರಿ ನಾಯಿಗಳಂತೆ ನಡೆಸಿಕೊಂಡು ಬಂದಿದ್ದು ಸಾಕು... ಇನ್ನೂ ನಾವು ನಾಯಿಗಳಂತೆ ಬದುಕು ನಡೆಸಬೇಕಾ?"[೩೨] ಎನ್ನುತ್ತಾನೆ. ಈ ಮಾತಿನ ಮೂಲಕ ಮೇಲ್ವರ್ಗದವರ ವಿರುದ್ಧ ತನ್ನ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾನೆ.

ಲೇಖಕಿ ಇಲ್ಲಿ ಸಂಪ್ರದಾಯದ ನೆಲೆಯಿಂದ ಹೊರಬರುವುದಕ್ಕೂ ಆಗದೆ, ಅದನ್ನು ನಡೆಸಿಕೊಂಡು ಹೋಗಬೇಕೋ ಬಿಡಬೇಕೋ ಎನ್ನುವ ಅತಂತ್ರ ಸ್ಥಿತಿಯ ಕೊರಗ ಜನಾಂಗವನ್ನು ಚಿತ್ರಿಸಿದ್ದಾರೆ. ನಾಗವೇಣಿಯವರ ಹೆಚ್ಚಿನ ಕಥೆಗಳು ಅಸ್ಪೃಶ್ಯತೆಯನ್ನು ಚರ್ಚಿಸಿವೆ ಎನ್ನಬಹುದು.

'ಬಗ್ಗುಂಡಿ ಪ್ರಸಂಗ' ಕಥೆಯಲ್ಲಿ ಜಗ್ಗ ಕರಿಯನಿಗೆ ಬಿದ್ದ ಏಟಿಗೆ ನೋವಿನ ಎಣ್ಣೆ ಹಚ್ಚುವಾಗ ಅದನ್ನು ನೋಡಿದ ಅಪ್ಪ ಮಾದಿಗನನ್ನು... ಮುಟ್ಟುತ್ತೀಯಾ... ಬೋಳಿ ಮಗ್ನೇ...[೩೩] ಎಂದು ಚೆನ್ನಾಗಿ ಬಡಿಯುತ್ತಾನೆ. ವೆಂಕಪ್ಪಳ್ವರ ಮನೆಯ ಎಲ್ಲಾ ಕೆಲಸಗಳನ್ನು ಕರಿಯನೇ ಮಾಡುತ್ತಿದ್ದ. ಮಾರಿ ಪೂಜೆಗೆ ಕೋಳಿ ಕಡಿಯುವುದು, ಕಂಬಳಕ್ಕೆ ಕೋಣ ಓಡಿಸುವುದು, ಮುಲ್ಕಿಯ ಕಂಡೇವಿಗೆ ಮೀನು ಹಿಡಿಯುವುದು, ಊರ ಬಬ್ಬರ್ಯನಿಗೆ ಕೋಲದ ದಿನ ಗಂಗಸರ ಇಡಿಸುವುದು, ಕೋಳಿ ಕೊಡುವುದು, ಮಲ್ಲಿಗೆ ನೀಡುವುದು, ಕೊರಗಜ್ಜನಿಗೆ ಬೀಡ ಇಡುವುದು, ಆಟಿ ಅಮಾವಾಸ್ಯೆಯಂದು ಪಾಲೆ ಮರದ ಕೆತ್ತೆ ತರುವುದು, ಸತ್ತವರ ಬೊಜ್ಜಕ್ಕೆ ಹೊರೆ ನೀಡುವುದು ಊಳಿಗದಾಳು ಕರಿಯನ ಕೆಲಸ.

ವೆಂಕಪ್ಪಳ್ವರಿಗೂ ಕರಿಯನಿಗೂ ಆಗಾಗ ಜಗಳ ನಡೆಯುತ್ತಿತ್ತು. ಕುಡಿದುಬಂದು ತಾಯಿ ಸಮನಾದ ಉಮ್ಮಕ್ಕೆಗೆ ಬೈಯ್ಯುವುದು, ಹೊಡೆಯುವುತ್ತಿರುವುದನ್ನು ನೋಡಿ ಮನಸ್ಸಿಗೆ ನೋವು ಆಗುತ್ತಿತ್ತು. ಬಗ್ಗುಂಡಿಗೆ ಹೋಗಲು ಕುತ್ತರಿ, ಬಲೆ, ಗ್ಯಾಸ್‌ಲೈಟ್ ರೆಡಿ ಮಾಡಿಟ್ಟಿದ್ದ. ಅದನ್ನು ನೋಡಿ ವೆಂಕಪ್ಪಾಳ್ವರಿಗೆ ಸಿಟ್ಟು ನೆತ್ತಿಗೇರಿ ಬಿಸಾಡಿ ಬಿಡುತ್ತಾರೆ. ಅವುಡುಗಚ್ಚುತ್ತಾ ಉಮ್ಮಕ್ಕೆಯ ಜುಟ್ಟು ಹಿಡಿದವರೇ 'ಬಿಕನಾಸಿ, ಹಲ್ಕಾಮುಂಡೆ, ಅವ ನಿನ್ನ ಮಿಂಡ ಮಾದಿಗ ಅಟ್ಟಕ್ಕೇರಿ ಬಲೆ ತೆಗೆಯುವಾಗ ನೀನೆಲ್ಲಿದ್ದೆ? ಎಲ್ಲಿ ಮಣ್ಣು ಮುಕ್ಕಿದ್ದೆ...?[೩೪] ಎಂದಾಗ ಕರಿಯನಿಗೆ ಧಣಿಯ ಅವಾಚ್ಯ ಬೈಗುಳ ಕೇಳಿ ಮುಖವೆತ್ತಲಾರದಷ್ಟು ಮುದುರಿ ಹೋಗಿ ಅವಮಾನದಿಂದ ಕುಗ್ಗುತ್ತಿದ್ದ. ಯಾವತ್ತೂ ಗಂಡನೆದುರು ಮಾತನಾಡದ ಉಮ್ಮಕ್ಕೆ ಈ ಬಾರಿ ಗಂಡ ಕರಿಯನೆದುರಿಗೆ ಆತನಿಗೂ ತನಗೂ ಸಂಬಂಧ ಕಲ್ಪಿಸಿದ್ದು ಸೈರಿಸಲಾಗದೇ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಇದನ್ನು ಸಹಿಸದ ಗಂಡ ಆಕೆಯ ಮೇಲೆ ಆಯುಧದಿಂದ ಆಕ್ರಮಣ ಮಾಡಲು ಹವಣಿಸಿದಾಗ, ಕರಿಯ ಜಗಲಿಯಿಂದ ಚಾವಡಿಗೇರಿ ಆಳ್ವರನ್ನು ಜಾಡಿಸಿ ದೂರಮಾಡುತ್ತಾನೆ.

ಆಗ 'ಅಡಬೆ ಮಾದಿಗ, ಮಗ್ನೆ ಹಟ್ಟಿಯಿಂದ ನನ್ನ ಭೂತದ ಚಾವಡಿಗೆ ಹತ್ತುವ ತಾಕತ್ತು ಬಂತೆನೋ ನಿನ್ಗೆ? ನನ್ನ ಎಂಜಲು ನೆಕ್ಕಿ ನನ್ನೆದುರು ನಿಲ್ತಿಯೆನೋ ಬೇವರ್ಸಿ"[೩೫] – ಎಂದೆನ್ನುತ್ತಾ ಕರಿಯನ ಮೇಲೆ ಕೈ ಮಾಡಬೇಕು ಎನ್ನುವಷ್ಟರಲ್ಲಿ ಕರಿಯ, ವೆಂಕಪ್ಪಾಳ್ವರೇ ಎಂದು ಅಬ್ಬರಿಸಿದ್ದು,

ಆಳ್ವರಿಗೆ ಒಂದುಕ್ಷಣ ಉಸಿರು ನಿಂತ ಅನುಭವವಾಗುತ್ತದೆ. ಕರಿಯ ಧಣಿಯ ವಿರುದ್ಧ ತಿರುಗಿ ಬೀಳುತ್ತಾನೆ. ಇದನ್ನು ಸಹಿಸದ ವೆಂಕಪ್ಪಾಳ್ವ ಕೊನೆಗೆ ಇಲಿಯ ಪಾಷಾಣವನ್ನು ಮುಳ್ಳುಸೌತೆಯಲ್ಲಿಟ್ಟು ಕರಿಯನನ್ನು ಕೊಲ್ಲುವ ಸಂಚುಮಾಡಿ ಅದನ್ನು ಹಟ್ಟಿಯಲ್ಲಿಟ್ಟದ್ದನ್ನು ಕಡಲೆ ಹುಂಜ ತಿಂದು ಸಾಯುತ್ತದೆ. ಆದರೆ ಕರಿಯ ತನ್ನ ಊರಿಗೆ ಹೋಗಿರುತ್ತಾನೆ. 'ತಾನೊಂದು ಬಗೆದರೆ ದೈವವೊಂದು ಬಗೆದಂತೆ' ಎಂಬ ಮಾತಿನಂತೆ ಆಳ್ವರ ಲೆಕ್ಕಚಾರವನ್ನು ತಲೆಕೆಳಗಾಗಿರಿಸಿತ್ತು.

ಅನುಪಮಾ ಪ್ರಸಾದ್‌ರವರ 'ಪರ್ವ' ಕತೆಯ ಮಹಾದೇವ ಶಾಸ್ತ್ರಿಯ ಕೈಗೆ ಸಿಕ್ಕುವ ಹಳೆಯ ಕಡತಗಳಲ್ಲಿನ ಅಜ್ಜನ ಪತ್ರಗಳು ಹೇಳುವುದು ಅಜ್ಜ ಮಾಡಿದ ಅನಾಚಾರಗಳ ಕತೆಯನ್ನು ಹೊರನೋಟಕ್ಕೆ, ಒಂದು ಕಾಣುತ್ತಿದ್ದರೆ, ಒಳಗಿನ ಸತ್ಯವೇ ಬೇರೆಯಾಗಿರುತ್ತದೆ. ಒಳಗಿನ ಸತ್ಯವನ್ನು ತೋರಿಸುವ ಪತ್ರಗಳು ಹೇಳುವ ಕತೆ ಭಯಾನಕವಾದದ್ದು. ಹೆಣ್ಣು ಮತ್ತು ಭೂಮಿಯ ಆಸೆಗಾಗಿ ಮನುಷ್ಯ ಎಸಗುವ ಅತ್ಯಂತ ಕೆಟ್ಟ ಕೃತ್ಯಗಳು ಇಲ್ಲಿ ಬಯಲಾಗುತ್ತದೆ. 'ಪರ್ವ'ದಲ್ಲಿ ಹಲವು ರೀತಿಯ ಶೋಷಣೆಗಳನ್ನು ಕಾಣಬಹುದು ದೇವಸ್ಥಾನದ ಮೊಕ್ತೇಸರ ಮಹಾಲಿಂಗೇಶ್ವರ ಶಾಸ್ತ್ರಿಗಳಿಂದ ಅರ್ಚಕ ಶಂಕರನಾರಾಯಣ ಭಟ್ಟರ ಶೋಷಣೆಯಾಗುತ್ತದೆ.

ಶಂಕರ ನಾರಾಯಣ ಭಟ್ಟರಿಂದ ಅವರ ಮಗ ಕೇಶವನ ಶೋಷಣೆ. ಮೊಕ್ತೇಸರ ಶಾಸ್ತ್ರಿಗಳಿಂದ ಅವರ ಮನೆಯ ಕೆಲಸದ ರಜನಿಯ ಶೋಷಣೆ ಇನ್ನೊಂದು ಈ ಕಥೆಯ ವಿಶೇಷವೆಂದರೆ ತಲೆ ತಲಾಂತರದ ಶೋಷಣೆಯ ಪಾಪವನ್ನು ನೀಗಿಸಿಕೊಳ್ಳಲು ಮೊಕ್ತೇಸರರ ಮಗ ಮಹಾದೇವ ಶಾಸ್ತ್ರಿ ಕೇಶವನನ್ನು ಅರ್ಚಕ ವೃತ್ತಿಯಿಂದ ಬಿಡುಗಡೆಗೊಳಿಸುವುದು ಮತ್ತು ಬೇರೊಂದು ಕೆಲಸ ಕೊಡಿಸುವುದು. ಧರ್ಮದ ಪ್ರಶ್ನೆಗಳನ್ನು ಇಲ್ಲಿ ಮನಗಾಣಬಹುದು.

ಪರಿವರ್ತನ 'ಕಥೆ' ಕೂಡ ಜಾತಿಯ ವಿಚಾರದಿಂದಲೇ ಹುಟ್ಟಿಕೊಂಡದ್ದು. ಅಂತರ್ಜಾತಿಯ ವಿವಾಹದ ಸಾಧಕ ಬಾಧಕಗಳ ಚರ್ಚೆ ಈ ಕಥೆಯಲ್ಲಿದೆ. ತನ್ನ ಜಾತಿಯನ್ನು ಬಿಟ್ಟು ಇನ್ನೊಂದು ಜಾತಿಯ ಗಂಡನ್ನು ಮದುವೆಯಾದಾಗ ಹೆಣ್ಣು ಗಂಡಿಗಿಂತಲೂ ಹೆಚ್ಚು ಸಮಸ್ಯೆಯನ್ನು ಎದುರಿಸಬೇಕಾದ ಪರಿಸ್ಥಿತಿಯಿದೆ ಎಂಬುದನ್ನು ಅನುಪಮಾ ಪ್ರಸಾದ್ ಇಲ್ಲಿ ಸೂಕ್ಷ್ಮವಾಗಿ ಬಿಂಬಿಸಿದ್ದಾರೆ. ಈ ಕಥೆಯ ನಾಯಕಿ ಸುಧಾ ತನ್ನ ಗುರುವನ್ನೇ ಪ್ರೀತಿಸುತ್ತಾಳೆ.

ಪ್ರಭಾಕರ ಗುರು ಶಿಷ್ಯೆಯ ಸಂಬಂಧ ಪ್ರೇಮಕ್ಕೆ ತಿರುಗಬಾರದು ಸಮಾಜದ ಬಾಯಿಗೆ ಬೀಳಬಾರದು ಎಂಬ ಕಾಳಜಿ ಹೊಂದಿದ್ದವನಾದರೂ ತನಗರಿವಿಲ್ಲದೆ ಸುಧಾಳನ್ನು ಪ್ರೀತಿಸತೊಡಗುತ್ತಾನೆ. ಇಬ್ಬರೂ ಮದುವೆಯಾಗುವುದಾಗಿ ನಿರ್ಧರಿಸುತ್ತಾರೆ. ಮನೆಯವರ ವಿರೋಧದ ನಡುವೆಯೇ ಬ್ರಾಹ್ಮಣ ಸಂಸ್ಕೃತಿಯಲ್ಲಿ ಹುಟ್ಟಿ ಬೆಳೆದ ಸುಧಾ ಮಾಂಸಾಹಾರಿ ಕುಟುಂಬದ ಪ್ರಭಾಕರನ ಮನೆಯ ಸೊಸೆಯಾಗುತ್ತಾಳೆ. ಸುಧಾಳ ಜಾತಿ – ಸಂಸ್ಕೃತಿಯೇ ಬೇರೆ. ಪ್ರಭಾಕರನ ಜಾತಿ – ಸಂಸ್ಕೃತಿಯೇ ಬೇರೆ. ಪ್ರಭಾಕರನ ಪ್ರೀತಿ ಪ್ರೇಮಕ್ಕೆ ಏನೂ ಕೊರತೆಯಿಲ್ಲದಿದ್ದರೂ ಸುಧಾಳಿಗೆ ಪ್ರಭಾಕರನ ಮನೆಯ ವಾತಾವರಣಕ್ಕೆ ಒಗ್ಗಿಕೊಳ್ಳುವುದು ಅತ್ಯಂತ ಕಷ್ಟವಾಗಿ ಬಿಡುತ್ತದೆ.

ದಿನಾ ಮೀನು ಕೋಳಿ ಹೀಗೆ ಮಾಂಸದ ಅಡುಗೆ. ಮನೆ ತುಂಬಾ ಜನರು ಹಳ್ಳಿ ಜನರ ದಿನನಿತ್ಯದ ಕಿರಿಕಿರಿ ತೊಂದರೆಗಳು ಸುಧಾಳಿಗೆ ನುಂಗಲಾರದ ತುತ್ತಾಗಿ ಬಿಡುತ್ತದೆ. ಎಲ್ಲದಕ್ಕಿಂತಲೂ ಶುದ್ಧ ಸಸ್ಯಹಾರಿಯಾಗಿ ಹುಟ್ಟಿ ಬೆಳೆದ ಅವಳಿಗೆ ಮಾಂಸಾಹಾರದ ಅಡುಗೆಯ ಮನೆಯಂತೂ ನರಕದ ಮನೆಯಂತೆ ಗೋಚರಿಸುತ್ತದೆ. ಅವಳ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳದ ಗಂಡನ ಮನೆಯವರು ಅವಳನ್ನು ಮಾಂಸ ತಿನ್ನುವಂತೆ ಪ್ರೇರೇಪಿಸುವ ಮಾಂಸದ ಅಡುಗೆ ಮಾಡುವಂತೆ ಒತ್ತಾಯಿಸುವ ಪರಿಯನ್ನು ಕಂಡಾಗ ಆಕೆಗೆ ಇಂತಹ ಮದುವೆ ಬೇಕಿತ್ತಾ ಅನಿಸದಿರುವುದಿಲ್ಲ.

ಆದರೆ ಪ್ರೀತಿ ಎಲ್ಲವನ್ನು ಮೀರಿದ್ದು. ಅದು ಜಾತಿ ಧರ್ಮಗಳ ಅಡ್ಡಗೋಡೆಯನ್ನೂ ಮುರಿದು ಮುಂದೆ ಹೋಗುತ್ತದೆ. ಹಾಗಂತ ಸಂಪೂರ್ಣ ಯಶಸ್ವಿಯಾಗುತ್ತದೆ ಎನ್ನಲಾಗುವುದಿಲ್ಲ. ಕೆಲವೊಮ್ಮೆ ಸೋತು ಹೋಗುವುದುಂಟು. ಕೆಲವೊಮ್ಮೆ ಎಡವುದುಂಟು, ಇಲ್ಲಿಯೂ ನಡೆಯುವುದು ಇಷ್ಟೇ. ಎಲ್ಲಾ ವಿಷಯಗಳಿಗೂ ಗಂಡನ ಜಾತಿಯಲ್ಲಿ ಹೊಂದಿಕೊಂಡ ಸುಧಾ ಬ್ರಾಹ್ಮಣ ಮನೆಯವರೊಂದಿಗೆ ಹುಟ್ಟಿ ಅಪ್ಪಟ ಸಸ್ಯಹಾರಿಯಗಿ ಬದುಕಿ ಇದೀಗ ಮಾಂಸಹಾರಿಗಳ ಮನೆಯಲ್ಲಿ ಸಂಪೂರ್ಣ ಸೋತು ಹೋಗುತ್ತಾಳೆ.

ಹಾಗಂತ ಜಾತಿಯ ಬೇಲಿ ಹಾರಿದವರು ಇದನ್ನು ಸೋಲು ಎಂದು ಸ್ವೀಕರಿಸಿ ಪಲಾಯನ ಮಾಡುವಂತಿಲ್ಲ. ಇದಕ್ಕೊಂಡು ಪರಿಹಾರ ಕಂಡುಕೊಳ್ಳಲೇಬೇಕು ಎನ್ನುವ ಕಾರಣಕ್ಕೆ ಕಥೆಯ ಕೊನೆಯಲ್ಲಿ ಒಂದು ಕೌನ್ಸಿಲಿಂಗ್ ನಡೆಸಿಬಿಡುತ್ತಾರೆ. ಸುಧಾಳ ಬದುಕಿಗೊಂದು ಪರಿಹಾರ ಕಂಡುಕೊಳ್ಳುವ

ಯೋಜನೆಯನ್ನು ತೋರಿಸುತ್ತಾರೆ. ಇಂತಹ ಸಮಸ್ಯೆಗಳಿಂದ ಒದ್ದಾಡುವ ಅನೇಕ ಅಂತರ್ಜಾತಿ ವಿವಾಹದ ಜೋಡಿಗಳು ಓದಲೇಬೇಕಾದ ಕಥೆ ಇದು ಎಂದೆನಿಸುತ್ತದೆ.

"ಸಬ್‌ಕೋ ಸನ್ಮತಿ ದೇ ಭಗವಾನ್" ಕಥೆ ಕೋಮುಸೌಹಾರ್ದತೆಯ ವಿಚಾರವನ್ನು ಎತ್ತಿಕೊಳ್ಳುತ್ತದೆ. ರಾಮಮಂದಿರ ಬಾಬರೀ ಮಸೀದಿಗಳ ಗಲಾಟೆಯ ಸಂದರ್ಭದಲ್ಲಿ ಹಳ್ಳಿಯಲ್ಲಿ ಸೌಹಾರ್ದದಿಂದ ಬದುಕುತ್ತಿದ್ದ ಮುಗ್ಧ ಮುಸ್ಲಿಂ – ಹಿಂದೂ ಜನರನ್ನು ಬಲಿ ತೆಗೆದುಕೊಂಡ ಕಥೆ ಇಲ್ಲಿದೆ.

ಯಾರೋ ಉಳ್ಳವರು ಮತಾಂಧರು ಸೃಷ್ಟಿಸಿದ ಕೋಮು ದಳ್ಳುರಿಯಲ್ಲಿ ಮುಗ್ಧಜೀವಗಳು ಬೆಂದು ಅದೆಷ್ಟೊ ಸಂಸಾರಗಳು ಬೀದಿಗೆ ಬಿದ್ದ ಕಥೆ ವ್ಯಥೆಯನ್ನು ನಿರೂಪಿಸುತ್ತದೆ. ಪರಸ್ಪರ ಪ್ರೀತಿ ನಂಬಿಕೆ ಸೌಹಾರ್ದತೆಯಿಂದ ಬದುಕುತ್ತಿದ್ದ ಸುಲೋಚನಾ ಮತ್ತು ಅಮೀರಮ್ಮಳ ಹಿಂದು – ಮುಸ್ಲಿಂ ಕುಟುಂಬ ರಾಮಮಂದಿರ ನಿರ್ಮಾಣದ ನೆಪದಲ್ಲಿ ಸ್ಮಶಾನದ ಮನೆಗಳಾಗಿ ಬಿಡುತ್ತವೆ, ಅನಾಥವಾಗುತ್ತವೆ.

ಸುಲೋಚನಳ ಗಂಡ ಮೋಹನನ್ ಒಬ್ಬ ಬಡಪಾಯಿ ಅಮಾಯಕ ಪೋಸ್ಟ್‌ಮ್ಯಾನ್ ಕೇವಲ ಒಬ್ಬ ಹಿಂದು ಎನ್ನುವ ಕಾರಣಕ್ಕೆ ಮುಸ್ಲಿಂ ಮತಾಂಧರ ಕೈಗೆ ಸಿಕ್ಕಿ ಹತನಾದರೆ, ಅಮೀರಮ್ಮಳ ಅಳಿಯ ಬೊಂಬಾಯಿಯಲ್ಲಿ ಒಬ್ಬ ಟೈಲರ್ ಆಗಿ ಜೀವನ ಸಾಗಿಸುತ್ತಿದ್ದವ ಕೇವಲ ಮುಸ್ಲಿಂ ಎನ್ನುವ ಕಾರಣಕ್ಕೆ ಹಿಂದೂ ಮತಾಂಧರ ಕೈಗೆ ಸಿಕ್ಕಿ ಸಾವನಪ್ಪುತ್ತಾನೆ. ಅಮಾಯಕ ಈ ಎರಡು ಕುಟುಂಬಗಳೂ ಧರ್ಮದ ಹೆಸರಲ್ಲಿ ಅನಾಥವಾದ ಕಥೆಯಿದು. ಲೇಖಕಿ ಇಲ್ಲಿ ಎರಡು ಧರ್ಮಗಳ ನಡುವಿನ ಅಡ್ಡಗೋಡೆಯನ್ನು ಪ್ರಶ್ನಿಸಿದ್ದಾರೆ.

ಪುಟ್ಟಮಗು ನಾಸಿರಾಳ ಬಾಯಿಯಿಂದ "ನಾವಿಬ್ಬರು ಹಿಂದೂ – ಮುಸ್ಲಿಂ ಆಗುವುದು ಬೇಡ ಬೇರೆ ಜಾತಿ ಆಗೋಣ"[೩೬] ಎಂದು ಹೇಳಿಸಿದ್ದಾರೆ. ಎರಡು ಧರ್ಮಗಳ ಸೌಹಾರ್ದತೆಯ ಕಾಳಜಿ ಕಥೆಗಾರ್ತಿಗಿದೆ. ಕಥೆಯ ಕೊನೆಯಲ್ಲಿ ಸುಲೋಚನಾಳ ಬಾಯಿಯಿಂದ ನಾವು ಬೇರೆ ಜಾತಿ ಆಗೋಣ ನಿಜವಾದ ಮಾನವ ಜಾತಿ ಆಗೋಣ" ಎಂಬ ಸಂದೇಶವನ್ನು ಸಾರಾ ಅಬೂಬಕ್ಕರ್ ಸಾರಿದ್ದಾರೆ.

ಸಾರಾ ಅಬೂಬಕ್ಕರ್ "ಬೆನ್ನಟ್ಟುವ ಭೂತಗಳು" ಕತೆಯಲ್ಲಿ ಸರ್ಕಾರಿ ಇಲಾಖೆಯಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್ ಆಗಿದ್ದ ಸರಫುದ್ದೀನರ ಹೆಂಡತಿ ಆಯೇಷಾಗೆ ಅವನ ಸಮುದ್ರ ಹಾಗೂ ಪಕ್ಷಿಧಾಮ ನೋಡಬೇಕು ಎಂಬ ಆಸೆಯಿಂದ ಗಂಡನನ್ನು ಒತ್ತಾಯ ಮಾಡಿದಾಗ ಅವರು

ಕೊಳ್ಳೆಗಾಲಕ್ಕೆ ಮೀಟಿಂಗ್‌ಗೆ ಹೊರಡುವಾಗ ಕರೆದೊಯ್ಯಲು ತೀರ್ಮಾನಿಸಿರುತ್ತಾರೆ. ದಾರಿಯಲ್ಲಿ ಸರಪುದ್ದೀನ್ ಸಹುದ್ಯೋಗಿ ರಾವ್ ಜೊತೆ ಶಿವನಸಮುದ್ರ ನೋಡಿಕೊಂಡು ಹೋಗೋಣ ಎಂದಾಗ ರಾವ್ ನಿರಾಕರಿಸುತ್ತಾನೆ. ಮಾರನೆಯ ದಿನ ಕಾರಿರ್ನಲ್ಲಿ ರಾವ್ ಜೊತೆ ಶಾಸ್ತ್ರೀ ಕೂಡ ಇರುತ್ತಾನೆ. ಸೋಮನಾಥಪುರ ದೇವಾಲಯದ ಬಳಿಗೆ ಬಂದಾಗ ಇವರಿಬ್ಬರೂ ಡ್ರೈವರ್‌ಗೆ ಆಜ್ಞೆ ಮಾಡಿ ಕಾರನ್ನು ನಿಲ್ಲಿಸುತ್ತಾರೆ. ಶಾಸ್ತ್ರೀ ದೇವಾಲಯದ ಸೌಂದರ್ಯವನ್ನು ವರ್ಣನೆ ಮಾಡುತ್ತಾ ಘಜ್ನಿ ಮಹಮ್ಮದ್ ಲೂಟಿ ಮಾಡಿದುದನ್ನು ಒತ್ತಿ ಹೇಳುತ್ತಾ ಲೂಟಿ ಮಾಡಿದವರು ಮುಸ್ಲಿಂ ರಾಜರು, ಹೇಗೆ ಲೂಟಿ ಮಾಡಿದ್ದಾರೆ ಗೊತ್ತಾ, ನೀವು ನೋಡಲೇಬೇಕು ಎಂದು ಪದೇಪದೇ ಚುಚ್ಚು ಮಾತುಗಳನ್ನು ಆಡುತ್ತಾನೆ. ಆಗ ಆಯೇಷಾ ಈ ರೀತಿ ಪ್ರಕ್ರಿಯಿಸುತ್ತಾಳೆ.

ತಾಜ್‌ಮಹಲ್‌ನ ಒಂದೊಂದು ಕೆತ್ತನೆಯ ಹಿಂದೆ ಒಂದೊಂದು ಮುತ್ತಿನ ಚಿಪ್ಪನ್ನು ಇರಿಸಿದ್ದರಂತೆ ಆದರೆ ಈಗ ಒಂದು ಮುತ್ತಿನ ಚಿಪ್ಪು ಕಂಡುಬರುತ್ತಿಲ್ಲ ಎಲ್ಲವನ್ನು ಬ್ರಿಟಿಷರು ಹೊತ್ತೊಯ್ದಿದ್ದಾರೆ ಎಂದು ಕೇಳಿದ್ದೇನೆ. ಅಲ್ಲದೇ ಭಾರತದ ಪ್ರಪ್ರಥಮ 'ಪರಮವೀರ ಚಕ್ರ ಪ್ರಶಸ್ತಿ'ಯನ್ನು ಮರಣೋತ್ತರವಾಗಿ ಪಡೆದುಕೊಂಡವನು ಹಮೀದ್ ಎಂಬಾತನಲ್ಲವೇ ಎಂದು ಆಯೇಷಾ ಹೇಳಿದಾಗ ಇಬ್ಬರು ಮುಸ್ಲಿಂ ರಾಜರನ್ನು ತೆಗಳುವುದನ್ನು ಬಿಟ್ಟು ತಮ್ಮ ಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಮುಸ್ಲಿಂ ಸಮಾಜವನ್ನು ಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ಮುಸ್ಲಿಂರೆಂದರೆ ಲೂಟಿಕೋರರು, ದೇಶದ್ರೋಹಿಗಳು ದುಷ್ಟರು ಎಂಬ ಭಾವನೆಯ ಬಗ್ಗೆ ಆಯೇಷಾ ನೀಡಿದ ಉತ್ತರವೇ ಇಲ್ಲಿ ಪ್ರತಿರೋಧವಾಗಿದೆ. ಧರ್ಮದ ಹೆಸರಿನಲ್ಲಿ ಮಾನವೀಯತೆಯ ಮೇಲೆ ಸವಾರಿ ಮಾಡುವುದನ್ನು ಸಾರಾ ಅಬೂಬಕ್ಕರ್‌ರವರು ಈ ಕತೆಯ ಮೂಲಕ ಪ್ರತಿಭಟಿಸಿದ್ದಾರೆ.

ಎಚ್ ನಾಗವೇಣಿಯವರ 'ಸೇವಂತಿ ಓಲೆ' ಕಥೆ ಮಹಿಳೆಯ ಅಸ್ತಿತ್ವ ನೆಲೆಯನ್ನು ಹುಡುಕುವ ಕಥೆ. ಕಥಾನಾಯಕಿ ಎಲ್ಲಾ ಸಿನಿಮಾ–ಕಾದಂಬರಿಯ ನಾಯಕಿಯರಂತೆ ಗಂಡಿನ ಪ್ರೇಮದ ಬಲೆಗೆ ಸಿಲುಕಿದವಳು. ತನ್ನ ಗೆಳತಿ ಶ್ರೀದೇವಿಯ ಅಣ್ಣ ಗಂಗಯ್ಯ ಶೆಟ್ಟಿ ಮತ್ತು ಸೇವಂತಿ ಪರಸ್ಪರ ಪ್ರೀತಿಸುತ್ತಿರುತ್ತಾರೆ. ಸೇವಂತಿ ಸೇಸು ಮೂಲ್ಯನ ಮಗಳಾದರೆ ಶೂದ್ರ ಜಾತಿಯಲ್ಲಿ ಸ್ವಲ್ಪ ಮೇಲ್ಮಟ್ಟದ್ದು ಎನ್ನುವ ಜಾತಿಯಲ್ಲಿ ಹುಟ್ಟಿದ ತ್ಯಾಂಪಣ್ಣ ಶೆಟ್ಟಿಯ ಮಗ ಗಂಗಯ್ಯ ಶೆಟ್ಟಿ. ಇವರಿಬ್ಬರ ಪ್ರೀತಿಯ ಬಗೆಗೆ ಎರಡು ಮನೆಯವರಿಗೂ ತಿಳಿದಿತ್ತಾದರೂ ಮದುವೆಯ ವಿಷಯ ಬರುವಾಗ ಜಾತಿ ಅಡ್ಡ ಬರುತ್ತದೆ.

ಸಂಪ್ರದಾಯದಂತೆ ಶೂದ್ರರಲ್ಲಿ ಬೇರೆ ಬೇರೆ ಉಚ್ಚ ನೀಚ ಜಾತಿಗಳಿದ್ದು ಪರಸ್ಪರ ಬೇರೆ ಬೇರೆ ಜಾತಿಗಳೊಳಗೆ ಇಲ್ಲಿ ವಿವಾಹಕ್ಕೆ ಸಮ್ಮತವಿಲ್ಲ. ತಮ್ಮ ಜಾತಿಯ ಹಿರಿಮೆ, ಮೇಲ್ಮೆ ಜನರಿಗೆ ಇಲ್ಲಿ ಮುಖ್ಯವಾಗುತದೆ. ಗಂಗಯ್ಯ ಶೆಟ್ಟಿಯ ಮನೆಯವರು ಆತನ ಪ್ರೇಮದ ಬಗ್ಗೆ ತಿಳಿದಿದ್ದರೂ ತಮ್ಮ ಜಾತಿಯದೇ ಸಂಬಂಧದ ಹುಡುಗಿಯೊಂದಿಗೆ ಅವನಿಗೆ ಮದುವೆ ಮಾಡಲು ನಿರ್ಧರಿಸುತ್ತಾರೆ. ಸೇವಂತಿಯನ್ನು ಗಾಢವಾಗಿ ಪ್ರೀತಿಸುತ್ತಿದ್ದರೂ ಗಂಗಯ್ಯ ಶೆಟ್ಟಿ ಮನೆಯವರ ಇಚ್ಛೆಗನುಸಾರವಾಗಿ ಮದುವೆಗೆ ಒಪ್ಪಿಗೆ ನೀಡಲೇಬೇಕಾದ ಪ್ರಸಂಗ ಒದಗಿ ಬರುತ್ತದೆ.

ಇಂತಹ ಸಂದರ್ಭದಲ್ಲಿ ಒಂಟಿ ಅಸಹಾಯಕ ಹೆಣ್ಣು ಸೇವಂತಿ ತನ್ನ ಪ್ರೀತಿಯನ್ನು ಕಳೆದುಕೊಳ್ಳಬೇಕಾದ ಪರಿಸ್ಥಿತಿ ಬಂದಾಗ ಒದ್ದಾಡುವ ಸಂಗತಿಯನ್ನು, ಆಕೆಯ ಮಾನಸಿಕ ತುಮುಲಗಳನ್ನು ಇಲ್ಲಿ ಲೇಖಕಿ ಬಿಚ್ಚಿಟ್ಟಿದ್ದಾರೆ. ಸೇವಂತಿ ಯಾವತ್ತೋ ಇಷ್ಟಪಟ್ಟಿದ್ದಳು ಎನ್ನುವ ಕಾರಣಕ್ಕೆ ತಾನು ಬೇರೆ ಹುಡುಗಿಯನ್ನು ಮದುವೆಯಾಗಲು ನಿಶ್ಚಯವಾಗಿದ್ದ ಗಂಗಯ್ಯ ಶೆಟ್ಟಿ ತನ್ನ ಹೆಂಡ್ತಿಗೆ ಕೊಡಬೇಕಾಗಿದ್ದ ಒಂದು ಜೊತೆ ಬೆಂಡೋಲೆಯನ್ನು ಸೇವಂತಿಗೆ ಕೊಟ್ಟಾಗ ಅದನ್ನು ನೇತ್ರಾವತಿ ನದಿ ನೀರಿನಲ್ಲಿ ಮುಳುಗಿಸಿಟ್ಟು ಸೂರ್ಯ ದೇವನಿಗೆ ಅರ್ಘ್ಯ ಬಿಡುವಂತೆ ಮುಷ್ಟಿಯಲ್ಲಿದ್ದ ಬೆಂಡೋಲೆಯನ್ನು ನೇತ್ರಾವತಿ ಒಡಲಿಗೆ ಜಾರಿಸಿಬಿಟ್ಟಳು. ಈ ದೃಶ್ಯವನ್ನು ನೋಡಿ ಗಂಗಯ್ಯ ಶೆಟ್ಟಿ ದಂಗಾಗಿ ಹೋಗುತ್ತಾನೆ. ತನ್ನನ್ನು ತಿರಸ್ಕಾರ ಮಾಡಿದಕ್ಕೆ ಸೇವಂತಿ ಈ ರೀತಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ಗಂಗಾಪಾದೇಕಲ್‌ರವರ 'ಸ್ಫೋಟ'ಕತೆಯ ಲಚ್ಚಿ ತನ್ನ ಮಗಳ ಬಾಣಂತನಕ್ಕಾಗಿ ಕೂಡಿಟ್ಟ ಹಣವನ್ನು ಕುಡುಕ ಗಂಡ ತುಕ್ರ ಕದಿಯುತ್ತಾನೆ. ಅವಳ ಮಗ ಮರದಿಂದ ಬಿದ್ದು ಪೆಟ್ಟಾದುದರಿಂದ ತುಂಬಾ ನೋವು ಅನುಭವಿಸುತ್ತಾಳೆ. ಗಂಡನ ದೌರ್ಜನ್ಯವನ್ನು ಸಹಿಸಿಕೊಂಡು ಜೀವನ ನಡೆಸುತ್ತಿದ್ದ ಅಕೆಗೆ, ತೆಗೆದಿಟ್ಟ ಹಣವನ್ನು ಕಳ್ಳತನ ಮಾಡಿದ್ದು ಸಿಟ್ಟು ನೆತ್ತಿಗೇರಿ ಗಂಡನನ್ನು ಹೊಡೆದು ಮನೆಯಿಂದ ಓಡಿಸುತ್ತಾಳೆ. ಆದರೆ ಕೊನೆಗೆ ಪಶ್ಚಾತ್ತಾಪ ಪಡುತ್ತಾಳೆ. ಸಂಪ್ರಾದಾಯಿಕ ಮೌಲ್ಯಗಳ ಸ್ಥಿತ್ಯಂತರ ಆದರೂ ಪುನಃ ಹಿಂದಿನ ಸ್ಥಿತಿಗೆ ತಲುಪುವುದನ್ನು ಕಥೆ ವಿವರಿಸುತ್ತದೆ.

ಗಂಗಾರವರ "ಕಣ್ಣಾ ನೀರೆದ್ದು ಹೊಳೆಯದೊ' ಕಥೆಯ ಗಿರಿಜಾ ವೃತ್ತಿಯಲ್ಲಿ ನರ್ಸ್ ಆದರೂ ಮಕ್ಕಳನ್ನೇ ಪಡೆಯದೇ ಇರುವ ಆಕೆ ಸಮಾಜದ ದೃಷ್ಟಿಯಲ್ಲಿ ಬಂಜೆ ಎಂಬ ಪಟ್ಟವನ್ನು ಪಡೆದುಕೊಂಡವಳು. ಆದರೆ ಅವಳ ತಾಯ್ತನದ ಮನಸ್ಸಿಗೆ ಬಂಜೆತನವಿರಲಿಲ್ಲ. ತನ್ನ

ಒಡಹುಟ್ಟಿದವರನ್ನೆಲ್ಲಾ ಚೆನ್ನಾಗಿ ನೋಡಿಕೊಂಡರೂ ಯಾರಿಂದಲೂ ಆಕೆಗೆ ಗೌರವ ಪ್ರೀತಿ ಸಿಗದೇ ಆಕೆಗೆ ಒಬ್ಬಂಟಿತನ ಕಾಡುತ್ತದೆ.

ಆಗ ಆಕೆ ಆಸ್ಪತ್ರೆಯಲ್ಲಿ ನೋಡಿದ ಅನಾಥ ಮಗುವೊಂದನ್ನು ಸಾಕುವುದರ ಮೂಲಕ ತಾಯ್ತನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂದು ಹಾತೊರೆಯುತ್ತಾಳೆ. ಆದರೆ ಆಸ್ಪತ್ರೆಯವರು ಆ ಮಗುವನ್ನು ಶ್ರೀಮಂತರ ಕೈಗೆ ಕೊಡುವುದರ ಮುಖಾಂತರ ಗಿರಿಜೆಯ ತಾಯ್ತನದ ಸಾರ್ಥಕ ಜೀವನಕ್ಕೆ ತಣ್ಣೀರೆರಚುತ್ತಾರೆ.

ಇದೇ ವಸ್ತುವನ್ನು ಹೋಲುವ ಕಥೆ ವೈದೇಹಿಯವರ 'ಗುಲಾಬಿಯ ಮೃದುಪಾದಗಳು'. ಈ ಎರಡು ಕಥೆಗಳ ತುಡಿತ ಒಂದೇ ಆಗಿರುತ್ತದೆ. ಈ ಕಥೆಯ ನಾಯಕಿ ಸರಿತ ಕೂಡ ಉದ್ಯೋಗಸ್ಥೆ. ರಸ್ತೆಯಲ್ಲಿ ಓಡಾಡುವ ಸಂದರ್ಭದಲ್ಲಿ ಒಂದು ಮಗುವಿನ ಮೃದುಪಾದವನ್ನು ಕಂಡು ಆಕರ್ಷಣೆಗೆಗೊಳಗಾಗುತ್ತಾಳೆ. ತನ್ನಲ್ಲಿದ್ದ ಸಂಕೋಚ ಸ್ವಭಾವದಿಂದಾಗಿ ಆ ಮಗುವನ್ನು ಕಡೆಯ ತನಕ ನೋಡಲು ಆಗುವುದಿಲ್ಲ. ಆ ಮಗುವಿಗಾಗಿ ಗಾಳಿಯಲ್ಲಿ, ಚಿಗುರಿನಲ್ಲಿ, ಬಯಲಿನಲ್ಲಿ, ದನಿಯಲ್ಲಿ ಪ್ರಕೃತಿಯ ಎಲ್ಲೆಡೆಯಲ್ಲೂ ಗುಲಾಬಿ ಮೃದುಪಾದಗಳಿಗಾಗಿ ಹುಡುಕುವ ಪ್ರಯತ್ನ ಮಾಡುತ್ತಾಳೆ.

ಸರಿತಾಳ ಮನದಲ್ಲುಂಟಾದ ತಳಮಳದ ಕುರಿತು ಈ ಕಥೆ ಚರ್ಚಿಸುತ್ತದೆ. ಈ ಎರಡೂ ಕಥೆಗಳ ವಸ್ತು ಮಗುವಿನ ಹಂಬಲಿಕೆ. ಆದರೆ ಅದನ್ನು ಪೂರೈಸಿಕೊಳ್ಳುವಲ್ಲಿ ತಳೆಯುವ ಧೋರಣೆಗಳು, ತುಳಿಯುವ ದಾರಿಗಳು ಅನೇಕ. ಇಬ್ಬರೂ ಮಾತೃಪ್ರೇಮದ ಮಡಿಲಲ್ಲಿ ಬೆಂದವರೇ ಆಗಿದ್ದಾರೆ. ಗಂಗಾಪಾದೇಕಲ್‌ರವರ 'ಪರಿಹಾರ' ಕಥೆಯಲ್ಲಿ ಮಧುರಾಳಿಗೆ ಮದುವೆಯಾಗಿ ಮಕ್ಕಳಾಗದೇ ಇದ್ದುದರಿಂದ ಜನರು ಆಡುವ ಮಾತುಗಳು ತಾಯ್ತನವನ್ನು ಉತ್ಪ್ರೇಕ್ಷಿಸುವಂತಹ ಸವಾಲಿಗೆ ಮೌನಪ್ರತಿಕ್ರಿಯೆಯಾಗಿದೆ. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವು ಮಾತ್ರ ತನ್ನ ಮಗು ಎಂದು ಎನಿಸದೇ ಅನಾಥಾಲಯದಲ್ಲಿರುವ ಮಕ್ಕಳನ್ನು ತನ್ನ ಮಕ್ಕಳೆಂದು ಭಾವಿಸುತ್ತಾಳೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಘಟ್ಟವಾದ ಮಹಿಳಾ ಸಾಹಿತ್ಯ ಚಳುವಳಿಯು ಇತರ ಸಾಹಿತ್ಯ ಪ್ರಕಾರಗಳಿಗಿಂತ ಸಣ್ಣಕತೆಯ ಕ್ಷೇತ್ರದಲ್ಲಿ ಅಪಾರ ಕೃಷಿ ಮಾಡಿದೆ. ಕನ್ನಡ ನಾಡಿನ ಪ್ರಾದೇಶಿಕತೆಯ ದೃಷ್ಟಿಯಿಂದ ಮಹಿಳಾ ಬಂಡಾಯ ಸಂದರ್ಭದ ಕತೆಗಳು ಜನಸಾಮಾನ್ಯರ ಜನಜೀವನದ ಅಸಲಿ ದಾಖಲೆಗಳಾಗಿವೆ. ಈ ಅಧ್ಯಾಯದಲ್ಲಿ ಕರಾವಳಿ ಮಹಿಳಾ ಕಥೆಗಳಲ್ಲಿ ಕಂಡುಬರುವ ಪ್ರತಿರೋಧವನ್ನು

(೧) ಬಡತನ ಮತ್ತು ಆರ್ಥಿಕತೆ, ಶಿಕ್ಷಣದ ಅರಿವು ಜಾತಿ ಮತ್ತು ಧರ್ಮದ ಪ್ರಶ್ನೆಗಳ ಕುರಿತಾದ ಅಧ್ಯಯನ ಮಾಡಲಾಗಿದೆ. (೨) ದೇವರು ಧರ್ಮದ ಹೆಸರಿನಲ್ಲಿ ನಡೆಯುವ ಶೋಷಣೆಯ ವಿರುದ್ಧ ಪ್ರತಿರೋಧ ಯಾವ ರೀತಿ ನಡೆದಿದೆ ಎಂಬುದನ್ನು ಅರಿತುಕೊಳ್ಳಲಾಗಿದೆ.

ಧಾರ್ಮಿಕ ಕಾರಣಗಳಿಗಾಗಿ ವ್ಯವಸ್ಥೆಯು ದಲಿತರನ್ನು ಶೋಷಣೆಗೆ ಗುರಿಪಡಿಸುತ್ತಾ ಬಂದಿರುವುದು. ವ್ಯಕ್ತಿಯ ಸಾಮಾಜಿಕ ಜೀವನದ ಸ್ಥಿತಿಗತಿಗಳು ನಿರ್ಧಾರವಾಗಲು ಇರುವ ಮಾನದಂಡವೆಂದರೆ ಆತನ ಆರ್ಥಿಕ ಪರಿಸ್ಥಿತಿ. ಈ ಅಂಶವು ಸಮಾಜದಲ್ಲಿ ವರ್ಗಭೇದವನ್ನುಂಟು ಮಾಡಿದ್ದು ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಮೇಲ್ವರ್ಗ ಅಸಹಾಯಕರಾದ ಕೆಳವರ್ಗದ ಜನತೆಯನ್ನು ಶೋಷಣೆ ಮಾಡುವುದು ನಿರಂತರವಾಗಿ ನಡೆದು ಬಂದಿರುವ ಕ್ರಿಯೆಯಾದರೂ ಸಮಾಜದಲ್ಲಿ ಈ ಶೋಷಣೆಯ ವಿರುದ್ಧದ ಪ್ರತಿರೋಧ ಪ್ರಜ್ಞಾಪೂರ್ವಕವಾಗಿ ಬಂದಿಲ್ಲದ ಅಂಶವನ್ನು ಲೇಖಕಿಯರ ಕಥೆಯಲ್ಲಿ ಕಾಣಬಹುದು.

ದೇವರು ಧರ್ಮದ ಹೆಸರಿನ ಮೂಲಕ ಹುಸಿ ಮೌಲ್ಯಗಳನ್ನು ಸೃಷ್ಟಿಸಿಕೊಂಡಿರುವ ಸ್ಥಾಪಿತ ವರ್ಗವು ಮಹಿಳೆಯರನ್ನು ಶೋಷಣೆ ಮಾಡುವ ಅಸ್ತ್ರಗಳಾಗಿ ಇವುಗಳನ್ನು ಬಳಸಿದರು. ದೇವರು, ಧರ್ಮ, ಸಂಪ್ರದಾಯ ಆಚರಣೆಗಳ ಹೆಸರಿನಲ್ಲಿ ಶತಮಾನಗಳಿಂದ ಮಹಿಳಾವರ್ಗದ ಮೇಲೆ ಹೇರಿಕೆಯನ್ನು ಹೊರಿಸುವ ಮೂಲಕ ಅಮಾನವೀಯವಾಗಿ ಶೋಷಣೆ ಮಾಡುತ್ತಿದ್ದುದು ಗಮನಾರ್ಹ. ಶಿಕ್ಷಣ ವೈಚಾರಿಕತೆಯಿಂದ ಎಚ್ಚೆತ್ತ ಮಹಿಳೆಯರು ಹಾಗೂ ಯುವ ಜನಾಂಗ ಕಾಲಕ್ರಮೇಣ ಪ್ರತಿರೋದಕ್ಕೆ ತೊಡಗುವುದನ್ನು ಕರಾವಳಿ ಲೇಖಕಿಯರ ಕತೆಗಳಲ್ಲಿ ಕಾಣಬಹುದು.

**ಅಡಿಟಿಪ್ಪಣಿ**

೧. ಪ್ರಹ್ಲಾದ ಅಗಸನಕಟ್ಟೆ, ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು, ಪುಟ ೪೦೦

೨. ಶೈಲಜಾ ಹಿರೇಮಠ, ಸ್ತ್ರೀ ಕಥನ, ಪುಟ ೩೩

೩. ಪ್ರಭು ಬಿ. ಎಸ್. ಬಂಡಾಯ ಕತೆಗಳಲ್ಲಿ ಗ್ರಾಮೀಣ ವಾಸ್ತವ, ಪುಟ ೨೦೪

೪. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೪೨೧

೫. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೫೩೧

೬. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೧೯೧

೭. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೧೯೧

೮. ಗಂಗಾಪಾದೇಕಲ್ 'ಚಿನ್ನದ ಸೂಜಿ', ಪುಟ ೪೬

೯. ಗಂಗಾಪಾದೇಕಲ್ 'ಚಿನ್ನದ ಸೂಜಿ', ಪುಟ ೪೭

೧೦. ಸಾರಾ ಅಬೂಬಕ್ಕರ್ 'ಚಪ್ಪಲಿಗಳು' ಪುಟ ೮೨

೧೧. ಸಾರಾ ಅಬೂಬಕ್ಕರ್ 'ಚಪ್ಪಲಿಗಳು' ಪುಟ ೮೫

೧೨. ಸಾರಾ ಅಬೂಬಕ್ಕರ್ 'ಚಪ್ಪಲಿಗಳು' ಪುಟ ೧೯೩

೧೩. ಅನುಪಮಾ ಪ್ರಸಾದ್ 'ದೂರ ತೀರ', ಪುಟ ೮೪

೧೪. ಸಾರಾ ಅಬೂಬಕ್ಕರ್ 'ಚಪ್ಪಲಿಗಳು' ಪುಟ ೧೯೪

೧೫. ಮಿತ್ರಾ ವೆಂಕಟರಾಜ್, 'ಮಾಯಕದ ಸತ್ಯ' ಪುಟ ೪೫

೧೬. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೧೮೬

೧೭. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೧೮೨

೧೮. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೧೮೨

೧೯. ಸಾರಾ ಅಬೂಬಕ್ಕರ್ 'ಚಪ್ಪಲಿಗಳು', ಪುಟ ೮೨

೨೦. ಸಾರಾ ಅಬೂಬಕ್ಕರ್ 'ಚಪ್ಪಲಿಗಳು', ಪುಟ ೮೫

೨೧. ಸಾರಾ ಅಬೂಬಕ್ಕರ್ 'ಚಪ್ಪಲಿಗಳು', ಪುಟ ೧೯೩

೨೨. ಸಾರಾ ಅಬೂಬಕ್ಕರ್ 'ಚಪ್ಪಲಿಗಳು', ಪುಟ ೧೯೪

೨೩. ಸಾರಾ ಅಬೂಬಕ್ಕರ್ 'ಚಪ್ಪಲಿಗಳು', ಪುಟ ೬೮

೨೪. ಸಾರಾ ಅಬೂಬಕ್ಕರ್ 'ಖೆಡ್ಡಾ', ಪುಟ ೭೮

೨೫. ವೈದೇಹಿ 'ಅಲೆಗಳಲ್ಲಿ ಅಂತರಂಗ', ಪುಟ ೪೯

೨೬. ಎಚ್. ನಾಗವೇಣಿ 'ನಾಕನೇ ನೀರು', ಪುಟ ೪೭

೨೭. ಎಚ್. ನಾಗವೇಣಿ 'ನಾಕನೇ ನೀರು', ಪುಟ ೪೮

೨೮. ಎಚ್. ನಾಗವೇಣಿ 'ನಾಕನೇ ನೀರು', ಪುಟ ೬

೨೯. ಎಚ್. ನಾಗವೇಣಿ 'ನಾಕನೇ ನೀರು', ಪುಟ ೩೭

೩೦. ಎಚ್. ನಾಗವೇಣಿ 'ನಾಕನೇ ನೀರು', ಪುಟ ೩೭

೩೧. ಎಚ್. ನಾಗವೇಣಿ 'ನಾಕನೇ ನೀರು', ಪುಟ ೧೦೩

೩೨. ಎಚ್. ನಾಗವೇಣಿ 'ನಾಕನೇ ನೀರು', ಪುಟ ೧೦೩

೩೩. ಎಚ್. ನಾಗವೇಣಿ 'ನಾಕನೇ ನೀರು', ಪುಟ ೧೧೨

೩೪. ಎಚ್. ನಾಗವೇಣಿ 'ನಾಕನೇ ನೀರು', ಪುಟ ೧೧೨

೩೫. ಎಚ್. ನಾಗವೇಣಿ 'ನಾಕನೇ ನೀರು', ಪುಟ ೧೧೩

೩೬. ಅನುಪಮ ಪ್ರಸಾದ್ 'ಕರವೀರದ ಗಿಡ', ಪುಟ ೬೪

## ಅಧ್ಯಾಯ : ೫

## ಕರಾವಳಿ ಲೇಖಕಿಯರ ಕಥಾಸಾಹಿತ್ಯದ ಅನನ್ಯತೆ

೫.೧ ಭಾಷಿಕ ಅನನ್ಯತೆ

೫.೨ ಸೌಹಾರ್ದತೆಯ ನೆಲೆ

೫.೩ ವಿಮೋಚನೆಯ ನೆಲೆ

## ೫.೧ ಭಾಷಿಕ ಅನನ್ಯತೆ

ದಕ್ಷಿಣ ಕನ್ನಡ, ಉಡುಪಿ ಹಾಗೂ ಕಾಸರಗೋಡು ಪ್ರದೇಶಗಳನ್ನೊಗೊಂಡ ಕರಾವಳಿಯು ಕರ್ನಾಟಕದ ಮಟ್ಟಿಗೆ ಮಹಿಳಾ ಕಥಾ ಸಾಹಿತ್ಯವನ್ನು ನಿರೂಪಿಸುವಲ್ಲಿ ವಿಶಿಷ್ಟವಾದ ಚಹರೆಗಳನ್ನು ಮುಂದಿಡುತ್ತದೆ. ಈ ಚಹರೆಗಳು ಕೇವಲ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಆಯಾಮಗಳನ್ನು ಮಾತ್ರ ಚರ್ಚಿಸದೆ ಮನುಷ್ಯ ಸಂಬಂಧದೊಳಗೆ ಅಂತಸ್ಥವಾಗಿರುವ ಜೀವಪರವಾದ ಕಾಳಜಿಯನ್ನು ಸೃಜಿಸುವ ಕಾರ್ಯವನ್ನು ನಿರ್ವಹಿಸಿದೆ. ಈ ಬಗೆಯ ಸೃಜಿಸುವ ಕಾಯಕವನ್ನು ಒಟ್ಟು ಮಹಿಳಾ ಸಾಹಿತ್ಯ ಸಂಕಥನದೊಳಗೆ ಅನನ್ಯತೆ ಎಂದೋ ಅಥವಾ ಅಸ್ಮಿತೆ ಎಂದೋ ಅಥವಾ ಐಡೆಂಟಿಟಿಯ ನೆಲೆಗಟ್ಟು ಎಂದು ಕರೆಯಬಹುದು. ಈ ಬಗೆಯ ಜೀವಪರವಾದ ಆಶಯಗಳನ್ನು ಈ ಅಧ್ಯಾಯದಲ್ಲಿ ಮುಂದಿಡಲಾಗಿದೆ.

ಕರಾವಳಿಯ ಮಹಿಳಾ ಕಥೆಗಾರ್ತಿಯರಾದ ಸಾರಾ ಅಬೂಬಕ್ಕರ್, ವೈದೇಹಿ, ಮಿತ್ರಾ ವೆಂಕಟರಾಜ್, ಗಂಗಾಪಾದೇಕಲ್, ಎಚ್ ನಾಗವೇಣಿ ಮತ್ತು ಅನುಪಮಾ ಪ್ರಸಾದ್ ಅವರ ಕಥಾಸಾಹಿತ್ಯವನ್ನು ಕೇಂದ್ರನೆಲೆಯಲ್ಲಿಟ್ಟು ಅವರ ಕಥಾ ಸಾಹಿತ್ಯದ ಅನನ್ಯತೆಯನ್ನು ಗುರುತಿಸಲಾಗಿದೆ.

ಕರಾವಳಿ ಭಾಗದ ಈ ಲೇಖಕಿಯರಲ್ಲಿ ವಿಶಿಷ್ಟವಾಗಿ ಕಂಡುಬರುವ ಪ್ರಮುಖಾಂಶಗಳ ಜೊತೆಗೆ ಒಟ್ಟು ಅವರ ಕಥಾ ಸಾಹಿತ್ಯದ ಹರವನ್ನು ಅನ್ವಯಿಸಿ ವಿವರಿಸುವ ಮೂಲಕ ಅದಕ್ಕೊಂದು ತಾತ್ವಿಕ ಸ್ವರೂಪವನ್ನು ಮಹಿಳಾವಾದ ಅಥವಾ ಹೆಣ್ತನದ ಹಿನ್ನೆಲೆಯಲ್ಲಿ ಸ್ಥಾಪಿಸಬಹುದಾಗಿದೆ.

ಕರಾವಳಿಯ ಪ್ರಮುಖ ಕಥೆಗಾರ್ತಿಯರ ಭಾಷೆ ಕನ್ನಡ ಸಾಹಿತ್ಯದ ಮಟ್ಟಿಗೆ ವಿಶಿಷ್ಟ ಪ್ರಯೋಗ ಎನ್ನಬಹುದು. ಕಾರಣ ಉಡುಪಿ, ದಕ್ಷಿಣ ಕನ್ನಡ ಹಾಗೂ ಕಾಸರಗೋಡು ಭಾಗದಲ್ಲಿರುವ ಬಹುಭಾಷ ನಿರ್ವಹಣೆಯ ಕೌಶಲ್ಯ. ತುಳು, ಬ್ಯಾರಿ, ಕೊಂಕಣಿ, ಮಲಯಾಳಂ, ಕುಂದಗನ್ನಡ, ಹವ್ಯಕ ಕನ್ನಡ, ಗೌಡಕನ್ನಡ, ಮಲಾಮೆ, ಬೈರಕನ್ನಡ, ಬೆಲ್ಚಾಡ ಮಲಯಾಳಂ ಹೀಗೆ ಈ ಪ್ರದೇಶದಲ್ಲಿ ಅಂತಸ್ತವಾಗಿರುವ ಕನ್ನಡ ಹಾಗೂ ಪ್ರಾದೇಶಿಕ ಭಾಷೆಯ ನಿರೂಪಣೆಗಳು ಈ ಎಲ್ಲಾ ಕಥೆಗಾರ್ತಿಯರ ಮೇಲೆ ವಿಶಿಷ್ಟವಾದ ಪ್ರಭಾವವನ್ನು ಬೀರಿದೆ.

ಸಾರಾ ಅಬೂಬಕ್ಕರ್ ಅವರ ಎಲ್ಲಾ ಕಥೆಗಳಲ್ಲಿ ವಿಶಿಷ್ಟವಾದ ಸ್ತ್ರೀ ವಿರೋಧಿ ಭಾಷಿಕ ಜಾಯಮಾನವಿದೆ. ಮುಸ್ಲಿಂ ಸಂವೇಧನೆಯ ದೃಷ್ಟಿಯಿಂದ ನಾನು ಈ ಭಾಷೆಯನ್ನು ಸ್ತ್ರೀ ವಿರೋಧಿ ಭಾಷೆ ಎಂದು ಕರೆಯುತ್ತೇನೆ. ಕುರ್‌ಹಾನ್, ಹದೀಸ್‌ಗಳ ಜೊತೆಗೆ ಮುಲ್ಲಾಗಳು ಮತ್ತು ಧಾರ್ಮಿಕ ಮುಖಂಡರು ಕಟ್ಟಿದ ಸ್ತ್ರೀ ವಿರೋಧಿ ಪಾರಿಭಾಷಿಕ ಪದಗಳ ದಂಡನ್ನೇ ಸಾರಾ ಅವರ ಕಥಾಸಾಹಿತ್ಯದೊಳಗೆ ಗಮನಿಸಬಹುದು. ತಲಾಖ್, ನಿಖಾ, ಇದ್ದತ್, ಮೈಯತ್, ಕಬರ್, ಕಬೂಲ್, ಮಹರ್, ಕಿಬ್ಲಾ, ಬುರ್ಖಾ, ನಕಾಬ್ ಹೀಗೆ ಸ್ತ್ರೀಯನ್ನು ಪುರುಷ ಸಂಕೋಲೆಯಲ್ಲಿ ಬಂಧಿಸಿಡುವ ಭಾಷೆಯನ್ನು ಅವರು ಹೆಚ್ಚಾಗಿ ಚಾಲ್ತಿಗೆ ತರುತ್ತಾರೆ. ಆ ಮೂಲಕ ಸ್ತ್ರೀಯನ್ನು ಬಂಧಿಸಿಟ್ಟು ಕ್ರೌರ್ಯ ಮೆರೆಯುವ ಪುರುಷರ ದಬ್ಬಾಳಿಕೆಯನ್ನು ಪ್ರತಿರೋಧಾತ್ಮಕವಾಗಿ ಚಿತ್ರಿಸುವ ಪ್ರಯತ್ನ ಮಾಡುತ್ತಾರೆ. ಭಾಷೆಯನ್ನು ಪ್ರಜ್ಞೆಯ ದೃಷ್ಟಿಯಿಂದ ಸಮತೂಕದಲ್ಲಿ ಒಳ್ಳೆಯ ಮತ್ತು ಕೆಟ್ಟ ಎಂಬ ಜಾಯಮಾನದಲ್ಲಿ ಬಳಸಲು ಸಾಧ್ಯವಿಲ್ಲದಿದ್ದರೂ ಕಥೆಗಾರ್ತಿ ತಾನು ಸೃಷ್ಟಿಸಿದ ಕಥಾಹಂದರದ ಸ್ಫೂರ್ತಿಗಾಗಿ ಬಳಸುವುದರಲ್ಲಿ ತಪ್ಪಿಲ್ಲ.

ಇನ್ನೊಂದು ಅಂಶವನ್ನು ಇಲ್ಲಿ ಮತ್ತೆ ಸ್ಪಷ್ಟಪಡಿಸಬೇಕಾಗುತ್ತದೆ. ಹೆಣ್ಣು ತಾನು ಅತ್ಯಂತ ಪ್ರೀತಿಪಾತ್ರವಾದ ವಸ್ತುವನ್ನು ಬಳಸುವಾಗಿನ ನವಿರನ್ನು ಸಾರಾ ಅವರ ಕಥೆಗಳಲ್ಲಿ ಗುರುತಿಸಬಹುದು. ಉದಾಹರಣೆಗೆ ಸುಗಂಧವನ್ನು ಪಸರಿಸುವ ಅತ್ತರು, ಕಿವಿಯನ್ನು ಸುಂದರವಾಗಿ ಕಾಣಿಸುವ ಅಲೀಕತ್ತು, ಕತ್ತನ್ನು ಸುಂದರವಾಗಿ ಕಾಣಿಸುವ ಕಾಸಿನ ಸರ, ಬಿಳಿಯ ಕುಪ್ಪಸ, ಎಲ್ಸಾರ ಮುಂತಾದ ಪದಗಳನ್ನು ಬಳಸುವಾಗ ಕಥೆಗಾರ್ತಿ ಪ್ರಜ್ಞಾಪೂರ್ವಕವಾಗಿ ಹೆಣ್ತನದ ನವಿರನ್ನು ನಾಜೂಕಿನಿಂದ ಆಸ್ವಾದಿಸುವ ಪ್ರಯತ್ನವನ್ನು ಮಾಡುತ್ತಾರೆ.

ಆದರೂ ಸಹ ಸಾರಾ ತಾನು ಅನುಭವ ಪರತೆಯಿಂದ ಸೃಷ್ಟಿಸಿಕೊಂಡ ಪುರುಷ ವಿರೋಧಿ ನಿರ್ವಚನಗಳನ್ನು ಭಾಷೆಯ ಪರಿದಿಗೊಳಗಿಂದ ವ್ಯಕ್ತಪಡಿಸುವಲ್ಲಿ ಸೋತಿದ್ದಾರೆ ಎನ್ನಬಹುದು. ಇದಕ್ಕೆ ಕಾರಣ ಅದೇ ಮುಸ್ಲಿಂ ಸಮುದಾಯವು ಈ ಹೊತ್ತು ಗಳಿಸಿಕೊಂಡ ಧಾರ್ಮಿಕ ಮೂಲಭೂತವಾದ ಮನೋಭಾವ ಎಂದರೆ ತಪ್ಪಾಗಲಾರದು. ಅನಂತಮೂರ್ತಿ ಅವರು ಹೇಗೆ ಮಾತುಸೋತ ಭಾರತ ಎಂದು ದೇಶದ ರಾಜಕೀಯ ಚಹರೆಯನ್ನು ವಿಶ್ಲೇಷಿಸುತ್ತಾರೋ ಅದೇ ರೀತಿ ಸಾರ ಎಂಬತ್ತರ ದಶಕದಲ್ಲಿ ಭಾಷೆಯೊಂದರ ಮೂಲಕ ಕಟ್ಟಿದ ಸ್ತ್ರೀ ಪ್ರತಿರೋಧದ ನೆಲೆಯು ಈ ಹೊತ್ತಿನ ಮುಸ್ಲಿಂ

ಸಮುದಾಯದೊಳಗೆ ಸೃಜಿಸದೆ ಇರುವುದು ವಿಪರ್ಯಾಸವೇ ಸರಿ. ಮಾತು ಸೋತ ಭಾರತದಂತೆ ಸಾರಾ ಅವರ ಧ್ವನಿ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳ ನಡುವೆ ಸೋತು ಹೋಗಿದೆ.

ಕಾಸರಗೋಡು ಪ್ರದೇಶದಲ್ಲಿ ಹೆಚ್ಚಾಗಿ ಮಲಯಾಳಂ ಮಾತನಾಡುವ ಕಾರಣದಿಂದಾಗಿ ಸಾರಾ ಅವರ ಕಥೆಗಳಲ್ಲಿ ಭಾಷೆಯ ಜಾಯಮಾನವು ಮಲಯಾಳಂನನ್ನು ಪ್ರಭಾವಿಸಿಕೊಂಡಿದೆ. ಇಸ್ಲಾಂ ಭಾರತದಲ್ಲಿ ಧಾರ್ಮಿಕ ಆಯಾಮವನ್ನು ರೂಪಿಸಿಕೊಂಡದ್ದು ಕೇರಳದಲ್ಲಿ. ಈ ತಾರ್ಕಿಕತೆಯು ಸಾರಾ ಅವರು ಪುರುಷ ಭಾಷೆ (ಧಾರ್ಮಿಕ ಭಾಷೆ) ಮತ್ತು ಸ್ತ್ರೀಯ ಎಂಬ ಆಯಾಮವನ್ನು ಮುಂದಿಡುತ್ತಾ ಸಾಗಿತ್ತು.

ಸಾರಾ ಮತ್ತು ವೈದೇಹಿ ಅವರ ಭಾಷೆಯ ನಿರ್ವಚನದ ಹಿಂದೆ ಲಂಕೇಶ್ ಪತ್ರಿಕೆ ಹಾಗೂ ಲಂಕೇಶರ ಪ್ರಗತಿಪರ ಧೋರಣೆಯು ಮುಖ್ಯವಾಗುತ್ತದೆ. ಕಾರಣ ನಮ್ಮ ನಡುವೆ ಇರುವ ಸಾಹಿತಿಗಳಲ್ಲಿ ಪಂಥದ ನಿರ್ವಚನ ಎದ್ದು ಕಾಣುತ್ತದೆ, ಬಲಪಂಥಿಯ ಭಾಷಿಕ ಧೋರಣೆಯೇ ಬೇರೆ. ಎಡಪಂಥೀಯ ಭಾಷಿಕ ಧೋರಣೆಯೇ ಬೇರೆ. ಸಾರಾ ಮತ್ತು ವೈದೇಹಿ ಅವರು ತಮ್ಮೊಳಗಿನ ಸಾಮುದಾಯಿಕ ನಿಲುವುಗಳನ್ನು ಅರ್ಥಮಾಡಿಕೊಳ್ಳತ್ತಲೇ ಅಲ್ಲೊಂದು ಭಾಷಿಕ ಸ್ವರೂಪವನ್ನು ಸೃಷ್ಟಿಸಿಕೊಂಡರು.

ವೈದೇಹಿ ಅವರು ಬ್ರಾಹ್ಮಣ ಸಮುದಾಯದೊಳಗಿದ್ದು ಸ್ತ್ರೀ ಪರವಾದ ನಿಲುವುಗಳನ್ನು ಕೈಗೊಂಡವರು. ಆದರೆ ಬ್ರಾಹ್ಮಣ್ಯದ ವಿರೋಧವಾಗಿ ಅವರ ಧ್ವನಿ ಮೊಳಗದಿದ್ದದ್ದು ವಿಪರ್ಯಾಸವೇ ಸರಿ. ನೈತಿಕವಾಗಿ ಈ ಸತ್ಯವನ್ನು ಒಪ್ಪಿಕೊಳ್ಳುವ ಮೂಲಕ ಅವರು ಬ್ರಾಹ್ಮಣ ಸಮುದಾಯದೊಳಗೆ ಅಂತಸ್ಥವಾದ ಹೆಣ್ಣುಧ್ವನಿಯನ್ನು ಕಟ್ಟಿದರಷ್ಟೇ. ಕುಂದಾಪುರದ ಚುಟುಕಾದ ಕನ್ನಡ ಭಾಷೆಯು ಅವರ ಸಾಹಿತ್ಯವನ್ನು ಮತ್ತಷ್ಟು ಹಸನುಗೊಳಿಸುವ ಕಾರ್ಯ ಮಾಡಿತು.

ಹೆಣ್ಣಿನ ಪ್ರತಿಯೊಂದು ಜೀವನಾವೃತ್ತಿಯ ಆಯಾಮಗಳನ್ನು ವೈದೇಹಿ ಅವರು ಸಂಭ್ರಮಿಸುವ ಪರಿ ಅನನ್ಯವಾದದ್ದು. ಬಾಲ್ಯ, ಋತುಚಕ್ರ, ಮದುವೆ, ಗರ್ಭಧಾರಣೆ, ಹೆರಿಗೆ, ಮಗುವಿನ, ಅರೈಕೆ, ಬಾಣಂತನ ಇತ್ಯಾದಿಗಳನ್ನು ವೈದೇಹಿ ಅವರು ಸಂತಸ ಮತ್ತು ಹೆಣ್ಣಿಗೆ ಸಮಾಜ ನೀಡಿದ ವಿಶಿಷ್ಟವಾದ ಸವಲತ್ತು ಎಂದು ಭಾವಿಸಿದ್ದಾರೆ. ಅದರೆ ಸಾರಾ ಅವರು ಈ ಮಾದರಿಯ ನಿಲುವುಗಳಲ್ಲಿ ಹೆಣ್ಣು ಅನುಭವಿಸುವ ಸಂಕಷ್ಟವನ್ನು ಕಟ್ಟುವಲ್ಲಿ ಯಶಸ್ವಿಯಾಗುತ್ತಾರೆ.

ನಾಗವೇಣಿ ಅವರು ಕರಾವಳಿ ಸಾಹಿತ್ಯದಲ್ಲಿ ಮಹಿಳಾ ಪ್ರಜ್ಞೆಯಾಗಿ ಒಡಮೂಡಿದ್ದು ಅವರ ಭಾಷೆ, ಕಥನವಿನ್ಯಾಸ ಹಾಗೂ ಆಲೋಚನೆಯ ಕ್ರಮದಿಂದ ಎನ್ನಬಹುದು. ಅವರ 'ನಾಕನೇನೀರು' ಕರಾವಳಿಯ ಭಾಷಿಕ ಕಥನಗಳನ್ನು ಸಂಸ್ಕೃತಿಯ ಪರಿಧಿಯೊಳಗೆ ಸೌಹಾರ್ದತೆಯ ಹಾದಿಯೊಂದನ್ನು ಹುಟ್ಟುಹಾಕುವ ಕೆಲಸ ಮಾಡಿದೆ. ನಾಗವೇಣಿಯವರ ಭಾಷೆಯು ಪೂರ್ಣಪ್ರಮಾಣದಲ್ಲಿ ಶಿಷ್ಟಭಾಷೆಯ ನಾಟಕೀಯತೆಯನ್ನು ಕಳಚಿಕೊಂಡ ನಿರೂಪಣೆಗಳಾಗಿವೆ. ಹೇಳಬೇಕಾದ ವಿಚಾರಗಳನ್ನು ಅತ್ಯಂತ ಸಹಜವು ಆಪ್ಯಾಯಮಾನವು ಆದ ರೀತಿಯಲ್ಲಿ ಕಟ್ಟುವ ಬಗೆ ಅನನ್ಯವಾದದ್ದು. ತೇಜಸ್ವಿಯವರ ಕಿರಗೂರಿನ ಗಯ್ಯಾಳಿಗಳಲ್ಲಿ ಬರುವ ದಾನಮ್ಮನ ಭಾಷೆಯ ಸೊಗಡಿನಂತೆ ನಾಗವೇಣಿಯವರ ಎಲ್ಲಾ ಮಹಿಳಾ ಪಾತ್ರಗಳ ಭಾಷೆಯು ನಯನಾಜೂಕನ್ನ ಕಳಚಿಕೊಂಡ ತುಳುನಾಡಿನ ಮಹಿಳಾ ಪಾತ್ರಗಳಾಗಿ ಒಡಮೂಡಿದ್ದನ್ನು ಗ್ರಹಿಸಬಹುದಾಗಿದೆ.

ನಾಗವೇಣಿಯವರ ಭಾಷೆಯ ವಿಶಿಷ್ಟತೆಗೆ ಕರಾವಳಿಯ ಸಾಂಸ್ಕೃತಿಕ ಬೈಗುಳಗಳು ವಿಶಿಷ್ಟವಾದ ಮೆರುಗನ್ನ ನೀಡುತ್ತದೆ. ಅಡಬೆ, ಪೆದಂಬು, ಮೂರುಕಾಸಿನವನು ಇತ್ಯಾದಿ ಬೈಗುಳಗಳನ್ನು ಬಳಸುವ ಶೂದ್ರ, ದಲಿತ ಮತ್ತು ಅಲ್ಪಸಂಖ್ಯಾತ ಸಮುದಾಯ ಹೆಣ್ಣುಗಳಲ್ಲಿ ಸಹಜವಾದ ನಿರೂಪಣೆಗಳನ್ನು ತರಲು ಪ್ರಯತ್ನಿಸುತ್ತಾರೆ. ವೈದಿಕ ಜೀವನ ಕ್ರಮವನ್ನು ಪಾಲಿಸುವ ಅಥವಾ ಶಿಷ್ಟ ಎಂದು ಪರಿಭಾವಿಸುವ ನಾಗರಿಕ ಸಮಾಜವೆಂದು ಕರೆಯುವ ಸಮುದಾಯಗಳು ಹೆಣ್ಣಿನ ಬಾಯಲ್ಲಿ ಇಂತಹ ಪದಗಳು ಬರಬೇಕು ಇಂತಹ ಪದಗಳು ಬರಬಾರದು ಎಂಬ ಅಂಶವನ್ನು ಹೇರಿಕೆಯಾಗಿಸಿ ಬಿಡುತ್ತದೆ. ಆದರೆ ನಾಗವೇಣಿ ಈ ಬಗೆಯ ಕಟ್ಟುಪಾಡುಗಳನ್ನು ಕಳಚಿಟ್ಟು ಪೂರ್ಣಚಂದ್ರ ತೇಜಸ್ವಿಯವರಂತೆ ನವಿರಾದ ಬೈಗುಳದ ವಿನ್ಯಾಸಗಳನ್ನು ಮುಂದಿಡುತ್ತಾ ಸಾಗುತ್ತಾರೆ.

ಅಲ್ಲದೆ ಕರಾವಳಿ ಹೇಳಿಕೇಳಿ ಭೂತಕೋಲ, ದೈವಾರಾಧನೆ, ಕುರಲ್‌ಪರ್ಬ, ಪತ್ತನಾಜೆ, ಕಂಬಳ, ಕೆಡ್ಡಸ, ದಪ್ಪು, ಪಾಡ್ದನ, ಮಸೀದಿ ಮಂದಿರ, ಚರ್ಚುಗಳಿಂದ, ಅವುಗಳು ನಿರೂಪಿಸುವ ಆಚರಣೆ ವಿನ್ಯಾಸಗಳು ನಾಗವೇಣಿ ಅವರ ಕಥಾಸಾಹಿತ್ಯದಲ್ಲಿ ಸಮೃದ್ಧಿಯನ್ನು ತುಂಬಿಡುವ ಕಾರ್ಯಮಾಡಿದೆ. ಸಾಂಸ್ಕೃತಿಕ ಪರಿಭಾಷೆಯನ್ನು ಹೆಚ್ಚಾಗಿ ಬಳಸುವ ನಾಗವೇಣಿಯವರು ತುಳುವಿನ ಭಾಷಿಕ ಸಂಪತ್ತನ್ನು ದುಡಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಕಂಬಳದ ಪರಿಕರಗಳು, ಅಲ್ಲಿ ಬಳಸುವ ನುಡಿಕಟ್ಟು, ಕೃಷಿ ಸಂಬಂಧಿ ಆಚರಣೆಗಳಲ್ಲಿ ಬಳಸುವ ಪಾಡ್ದನಗಳು, ಹಬ್ಬಗಳ ಸಂದರ್ಭದಲ್ಲಿ ಬಳಸಲ್ಪಡುವಂತಹ

ಸಾಂಸ್ಕೃತಿಕ ಪದಗಳು ಮತ್ತೆಮತ್ತೆ ವಿಶಿಷ್ಟವಾದ ತುಳುವಿನ ಸೊಗಡನ್ನು ಕನ್ನಡ ಸಾಹಿತ್ಯದೊಳಗೆ ತುರುಕಿಸಿಕೊಡುವ ಪ್ರಯತ್ನ ಮಾಡುತ್ತದೆ.

ನಾಗವೇಣಿಯವರು ತೀರಾ ಆತ್ಮೀಯವಾದ ರೀತಿಯಲ್ಲಿ ಕರಾವಳಿಯ ಮುಸ್ಲಿಮರನ್ನು ತಮ್ಮ ಕಥೆಗಳೊಳಗೆ ಗ್ರಹಿಸುವ ಕಾರಣದಿಂದಾಗಿ ಬ್ಯಾರಿ ಭಾಷೆಯ ಸ್ವರೂಪ ಮತ್ತು ದಲಿತರನ್ನು ದಲಿತತ್ವವನ್ನು ತೀರಾ ಲವಲವಿಕೆಯಿಂದ ಕಾಣುವುದರಿಂದಾಗಿ ಅವರ ಭಾಷೆಯನ್ನು ಅಹಿಂದ ಭಾಷೆ ಎಂದು ಪರಿಭಾವಿಸುವುದು ಉತ್ತಮ. ಅಹಿಂದವೆಂದರೆ ಅದೊಂದು ರಾಜಕೀಯ ಚಳುವಳಿಯ ಸ್ವರೂಪವಲ್ಲ ಬದಲಾಗಿ ಅದೊಂದು ಸಮುದಾಯಿಕ ಸಾಹಿತ್ಯ ಮಿಮಾಂಸೆ.

ಅವರ ಕಥೆಗಳಲ್ಲಿ ಬರುವ ಪಾತ್ರಗಳ ಹೆಸರುಗಳಾದ ರುಕುಮಾಚಾರ್ತಿ, ಸೀನಾಚಾರಿ, ಅಂತಪ್ಪ, ಪಿಜಿನಮೂಲ್ಯ, ಕೂಸ ಮುಂತಾದ ಹೆಸರುಗಳು ತುಳು ಭಾಷಿಕ ವಲಯಕ್ಕೆ ಮಾತ್ರ ಸೀಮಿತವೂ ಅನ್ಯರಿಗೆ ವಿಶಿಷ್ಟವಾದ ಬಗೆಯಾಗಿ ಗುರುತಿಸಬಹುದು. ಇಂದು ನಮ್ಮತನವೆಂಬ ಭಾಷಿಕ ಸ್ವರೂಪ ಮರೆಯಾಗಿ ಏಕಕೇಂದ್ರಿತ ಕನ್ನಡದ ಕಡೆಗೆ ಹೊರಳುತ್ತಿರುವ ಹೊತ್ತಿನಲ್ಲಿ ಕರಾವಳಿಯ ನಾಗವೇಣಿಯವರ ಭಾಷೆಯು ಕನ್ನಡ ಸಾಹಿತ್ಯದ ಸೊಗಡನ್ನು ವಿಸ್ತಾರವಾಗಿಸುವ ಕೆಲಸ ಮಾಡುತ್ತಿದೆ ಎಂದರೆ ತಪ್ಪಾಗಲಾರದು.

ಮಿತ್ರಾವೆಂಕಟರಾಜ ಅವರು ಕುಂದಾಪುರ ಪರಿಸರದವರಾದ ಕಾರಣ ಅವರ ಭಾಷಿಕ ಜಗತ್ತು ಕನ್ನಡ ಕುಂದಾಪುರ ಕನ್ನಡ ಭಾಷಿಕ ನಿರೂಪಣೆಗಳು ದಾಢಾಳವಾಗಿ ಎದ್ದುಕಾಣುತ್ತದೆ. ಪ್ರಸ್ತುತ ಭಾರತದ ವಾಣಿಜ್ಯ ನಗರಿ ಮುಂಬೈನಲ್ಲಿ ವಾಸವಿರುವ ಕಾರಣ ಅಲ್ಲಿನ ಪರಿಸರದ ಹಲವಾರು ಭಾಷಿಕ ಮತ್ತು ಸಾಂಸ್ಕೃತಿಕ ಅಂಶಗಳು ಅವರ ಕಥಾಸಾಹಿತ್ಯವನ್ನು ನಿರ್ವಚಿಸುವ ಕೆಲಸವನ್ನು ಮಾಡಿದೆ.

ಸಾರಾ ಅಬೂಬಕ್ಕರವರ ಕಥೆಗಳು ಹೀಗೆ :- "ಚಪ್ಪಲಿಗಳು" ಕತೆಯಲ್ಲಿ ಶಬೀರ್ ದುಬೈಗೆ ಹೊರಡುವ ಹಿಂದಿನ ರಾತ್ರಿ "ಸಮೀರಳೊಡನೆ ಮುಂದಿನ ಬಾರಿ ಬರುವಾಗ ನಿನಗೇನು ತರಲಿ" ಎಂದಾಗ ಆಕೆ "ನನಗೇನು ಬೇಡ" ಎಂದು ಬೇಸರದಿಂದ ಹೇಳುತ್ತಾಳೆ. "ಜನ್ನತುಲ್ ಪರ್‌ದೌಸ್ ಬೇಡವೇ?" ನಗುತ್ತಾ ಕೇಳಿದಾಗ ಆಕೆ "ನೀವು ಸಮೀಪದಲ್ಲಿದ್ದರೆ ಅದೇ ನನಗೆ 'ಜನ್ನತುಲ್ ಪರ್‌ದೌಸ್' ನೀನಿಲ್ಲದೆ ಸ್ವರ್ಗ ಕೂಡ ನನ್ನ ಪಾಲಿಗೆ ನರಕವೇ"[೧] ಎನ್ನುತ್ತಾಳೆ. ತಂದೆಯ ಮನೆಯ ಚಾಕರಿ ಆಕೆಗೆ ಶೋಷಣೆಯಾಗಿ ಕಾಣುತ್ತದೆ. ಗಂಡನ ಜೊತೆ ಇರಬೇಕೆಂದು ಬಯಸುತ್ತಾಳೆ. ಆದರೆ ತಂದೆ ಅದಕ್ಕೆ ಅವಕಾಶ ಸಿಗದಂತೆ ಮಾಡಿದಾಗ ಕುಗ್ಗಿ ಹೋಗುತ್ತಾಳೆ.

ಶಬೀರ್ ಊರಿಗೆ ಬರುವ ಸುದ್ದಿ ತಿಳಿದು ಸಮೀರ ತಾಯಿಯೊಡನೆ "ಉಮ್ಮ, ನಾನೂ ವಿಮಾನ ನಿಲ್ದಾಣಕ್ಕೆ ಹೋಗಲೇ?" ಎಂದಾಗ ತಂದೆ ಈ ರೀತಿ ಹೇಳುತ್ತಾನೆ – "ಏನು? ವಿಮಾನ ನಿಲ್ದಾಣಕ್ಕೆ ಬರ್‍ತಾಳಾ ನಿನ್ನ ಮಗಳು? ಅಲ್ಲಿ ಅಷ್ಟು ಜನ ಗಂಡಸರ ಮಧ್ಯೆ ಇವಳು ಹೋಗುವದೆ? ಏನು? ಮಾನ ಮರ್ಯಾದೆ ಎಲ್ಲಾ ಬಿಟ್ಟು ಬಿಟ್ಟಳಾ? ಎನ್ನುತ್ತಾ "ಹೆಂಗಸರನ್ನು ಶಿಸ್ತಿನಿಂದ ಇಟ್ಟುಕೊಳ್ಳಬೇಕು. ಈ ದಿನ ವಿಮಾನ ನಿಲ್ದಾಣಕ್ಕೆ ಹೊರಟವಳು ನಾಳೆ ಅವನ ಜೊತೆಯಲ್ಲಿ ದುಬಾಯಿಗೂ ಹೊರಡುತ್ತಾಳೆ, ಗಂಡು ಬೀರಿ!"[೨] ಎಂದು ತಂದೆ ಗುಡುಗಿದಾಗ ಸಮೀರಳ ಆಸೆ ಕಮರಿ ಹೋಗುತ್ತದೆ. ಈ ಮಾತು ಪುರುಷ ಹೆಣ್ಣನ್ನು ಹತೋಟಿಯಲ್ಲಿಟ್ಟುಕೊಳ್ಳುವುದನ್ನು ಕಾಣಬಹುದು. ಹೆಣ್ಣಿಗೆ ಸ್ವಾತಂತ್ರ ನೀಡದೇ ಆಕೆಯ ಎಲ್ಲಾ ಹಕ್ಕುಗಳನ್ನು ಕಿತ್ತುಕೊಳ್ಳಲಾಗಿದೆ.

'ಅಕ್ಕು' ಕತೆಯಲ್ಲಿ ವೈದೇಹಿಯವರು ಕುಂದಾಪುರದ ಕೋಟ ಕನ್ನಡವನ್ನು ಹೆಚ್ಚಾಗಿ ಬಳಸಿದ್ದಾರೆ. ಪಿತೃ ಪ್ರಧಾನ ವ್ಯವಸ್ಥೆಯ ದೌರ್ಜನ್ಯವನ್ನು ಪ್ರತಿಭಟಿಸಿ ನಿಲ್ಲುವಂತಹ ಹೆಣ್ಣಿನ ಚಿತ್ರಣವಿದೆ. ಇಲ್ಲಿ ಕತೆ ಪ್ರಾರಂಭವಾಗುವುದೇ ಅಕ್ಕುವಿಗೆ ದೊಡ್ಡ ಕುಂಕುಮವಿದೆ ಆದರೆ ಗಂಡನಿಲ್ಲ. ಕತ್ತಿನಲ್ಲಿ ಕರಿಮಣಿಯಿದೆ. ಕರಿಮಣಿಯನ್ನು ನಾಗಂದಿಗೆಯ ಮೂಲೆಯಲ್ಲಿಟ್ಟು ಸವಾರಿ ಹೊರಡುವ ರಿವಾಜೂ ಅಕ್ಕುವಿಗುಂಟು. 'ಅಕ್ಕು ನಿನ್ ಗಂಡ ಎಲ್ಲಿ?' ಎಂದು ಕೇಳಿದರೆ ಗ್ರಹಚಾರವನ್ನೇ ಆಕೆ ಮುಗಿಸಿ ಕೊಡುವುದಿದೆ. ಎಲ್ಲ, ಸಲವು ಅಲ್ಲ, ಒಮ್ಮೊಮ್ಮೆ ಗುಮ್ಮಕ್ಕಿಯಂತೆ ಕುಳಿತರೂ ಕುಳಿತವಳೇ. ಕೆಲವೊಮ್ಮೆ ಏನೇ ಹೇಗೆ ಕೆಣಕಿದರೂ ಕಣ್ಣು ಮೂಗು ಬಾಯಿ ಕೊಡಿಯಲ್ಲೆಲ್ಲ ಡೊಂಕು ಡೊಂಕಾಗಿ ನಗೆ ಒಕ್ಕುತ್ತ ತಲೆ ಕೊಡಕಿ ಬಿಡುವ ಗುಣವೂ ಅಕ್ಕುವಿಗೆ ಇದೆ.[೩]

ಭಾಷೆಯನ್ನು ನವಿರಾಗಿ ಬಳಸಿಕೊಳ್ಳಲಾಗಿದೆ. ಅಕ್ಕುವಿನ ಗಂಡ ಸನ್ಯಾಸಿಯ ಹಿಂದೆ ಓಡಿ ಹೋದಾಗಿನಿಂದ ಆಕೆ ಮಾನಸಿಕ ಅಸ್ವಸ್ಥಳಾಗಿ ವರ್ತಿಸುತ್ತಾಳೆ. ಆವತ್ತಿನಿಂದ ಆಕೆಗೆ ಬಸುರಿಯಾಗುವ ಆಸೆ. ಅಕ್ಕು ಬಿಡದೆ ಹೋಗುವ ಊಟಗಳೆಂದರೆ ಬಸುರಿ – ಬಯಕೆಯ ಊಟ ಮತ್ತು ನಾಮಕರಣದ್ದು. ಹಾಗೆ ಹೋದವಳು ಮಲ್ಲಿಗೆ, ಅಬ್ಬಲಿಗೆ, ಸೇವಂತಿಗೆ, ಇರುವಂತಿಗೆ ಇತ್ಯಾದಿ ಏಳು ಹೂಗಳ ಜಲ್ಲಿ ಬಿಡಿಸಿಕೊಂಡು ಭಾರದ ಮೇಲೆ ಭಾರ ಹೇರಿದವರಂತೆ ಕುಳಿತ ಬಸುರಿಯ ಬಳಿಯಿಂದ ಆಚೀಚೆ ಹರಿದಾಡಲಿಕ್ಕಿಲ್ಲ. ಗುರುತಿಲ್ಲದವರೋ ಹುಡುಗಿಯ ಗಂಡನ ಮನೆಯವರೋ ಮರುಳಿಯಂತೆ ಕುಳಿತ ಅಕ್ಕುವನ್ನು ಕಂಡು "ಇದ್ಯಾರೆ ಈ ಬಿಕ್ರಮಂಡೆ ದೇವಮ್ಮ! ಅಲ್ಲಿಂದ ಯೇಳ್ಸಿಕಾಂಬ ಎಂದರೂ ಮನೆಯವರು ಬಂದು ಹೆದಹೆದರುತ್ತಾ ಅಕ್ಕು ಬಾ ಈಚೆ ಕೂತ್ಕೋ ಎಂದರೂ ಅಕ್ಕುವಿನ ಕಿವಿ ಅದಕ್ಕೆಲ್ಲ ಪೂರ್ತಿ ಕೆಪ್ಪೇ.

ನಾಮಕರಣಕ್ಕೆ ಹೋದರೂ ಅಷ್ಟೇ. ಮನುವಿನ ತೊಟ್ಟಿಲು ಹಗ್ಗ ಹಿಡಿದು ಬೀಸುವುದನ್ನು ಆಕೆ ಬಿಡುವುದು ವಾಪಾಸು ಮನೆಗೆ ಬರುವಾಗಲೇ, ಬಂದ ನೆಂಟರೆಲ್ಲ ಹೋದ ಮೇಲೆ ಎರಡು ಲಾಲಿ ಹಾಡಿದರೂ ಹಾಡಿದಳೇ."[೪] ಈ ರೀತಿ ಬಸುರಿ ಬಯಕೆಯ ಊಟ ಮತ್ತು ಮಗುವಿನ ನಾಮಕರಣಕ್ಕೆ ಹೋಗುವ ಮೊದಲು ತೀರಿಸಿಕೊಳ್ಳುತ್ತಿದ್ದಳು. ಯಾರೇ ಅವಮಾನ ಮಾಡಿದರೂ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ.

"ಸಿರಿಯತ್ತೆ ಹೇಳುವಂತೆ ಚೆನ್ನಾಗಿ ಅಲಂಕಾರ ಮಾಡಿಕೊಂಡು ನಿಂತಿದ್ದನ್ನು ಕಂಡು ನೆತ್ತೀವರೆಗೆ ಮುಡ್ದ್ ಹೂವನ್ನೇ ಕಣ್ಣುಚ್ಚಿ ತೆರ್‍ಯ ದ್ರೊಳ್ಗೆ ಹರ್ದ್ ತೈಗ್ದ್ ಸಾಕಷ್ ಚಂದ! ನಿನ್ ಚಂದ್ ಕಂಡ್ ಮದ್ವೆ ಆಪಂವ ಖಂಡಿತ ಬಾಳ್ಸುದಿಲ್ಲೆ. ಗೋಡೆ ಮೇಲೆ ಬರ್ದಿಟ್ಕೋ – ಅಂದ್ಲ್".[೫] ಇದು ಅಕ್ಕುವಿನ ಮಾನಸಿಕ ಸ್ಥಿತಿಯ ಚಿತ್ರಣ ನೀಡುತ್ತದೆ.

ಅಕ್ಕು ಹೊಟ್ಟೆ ನೋವಿನ ನಾಟಕ ಮಾಡುತ್ತಾ ಮನೆ ತುಂಬಾ ಓಡಾಡುತ್ತಿದ್ದಳು. ಹಾಗೇ ಗಲಾಟೆ ಮಾಡಿದಾಗ ಆಕೆಗೆ "ನಿನ್ ಹೊಟ್ಟೆ ನೋವು ಬಿಡಿಸ್ತೆ" ಎಂತ ದೊಡ್ಡಜ್ಜಯ್ಯ ರಪರಪೆಂತ ಹಿಡಿಕಟ್ಟು ಹುಡಿ ಮಾಡಿದಾಗ 'ಅಪ್ಪಯ್ಯ ನನ್ ಮಗು ಸಾಯುತ್, ನಿಮ್ಗೆ ಪಾಪ ತಟ್ಟುತ್ ಕಾಣ್' ಎನ್ನುತ್ತ ಬಗ್ಗಿಕೊಂಡೇ ಹೊಟ್ಟೆ ತಪ್ಪಿಸಿಕೊಳ್ಳುತ್ತಿದ್ದಳು"[೬]

ಕೆಲವೊಮ್ಮೆ ಆಕೆ "ಕಳಚಿ ಇಟ್ಟಿದ್ದ ಸರಪಳಿ ಹಿಡಿದು ತೊಟ್ಟಿಲು ತೂಗುವಂತೆ ಅಲ್ಲಾಡಿಸುತ್ತಿದ್ದಳು. ಶ್, ಮಾತಾಡ್ಬೇಡಿ ಮಗು ಈಗಷ್ಟೇ ಮೊಲೆಯುಂಡ್ ಮನ್ಕಂಡಿತ್ ಎಂದಳು"[೭] ಅದನ್ನು ಕೇಳಿ ವಾಸು ಚಿಕ್ಕಪ್ಪಯ್ಯ ಮತ್ತು ದೊಡ್ಡತ್ತೆ ನಗೆಯಾಡಿ ದೊಡ್ಡತ್ತೆ 'ಹಾಲು ಮಸ್ತಿತ್ತ್ ಕೇಣ ವಾಸು'[೮] – ಎಂಬುದಾಗಿ ಅಪಹಾಸ್ಯ ಮಾಡುತ್ತಿದ್ದರು. ಆಕೆ ತನ್ನ ಹುಚ್ಚಿನಾವಸ್ಥೆಯ ಹಿನ್ನೆಲೆಯಲ್ಲಿ ಪ್ರತಿಭಟಿಸಿ ನಿಲ್ಲುತ್ತಾಳೆ.

ನಮ್ಮ ಜನಪದದಲ್ಲಿ 'ಮಾತು ಬೆಳ್ಳಿ, ಮೌನ ಬಂಗಾರ' ಎಂಬ ಗಾದೆ ಬಳಕೆಯಲ್ಲಿದೆ. ಇಲ್ಲಿ ಮೌನ ಎಂದರೆ ಹೆಣ್ಣಿನ ಮಾತಿಗೆ ಕಡಿವಾಣ ಹಾಕಿರುವ ಬೇಡಿ. ಆಕೆ ಮಾತನಾಡಲು ಪ್ರಾರಂಭಿಸಿದರೆ ನಮ್ಮ ಅಸ್ತಿತ್ವ ಇಲ್ಲ ಎಂದು ತಿಳಿದು ಈ ಗಾದೆಯನ್ನು ಬಳಕೆ ಮಾಡಲಾಗಿದೆ. ಏಕೆಂದರೆ ಈ ಗಾದೆಯ ಮುಖ್ಯ ಉದ್ದೇಶ ಹೆಣ್ಣು ಎಂದರೆ ಕಡಿಮೆ ಮಾತನಾಡಬೇಕು. ಆಕೆಯ ದೈಹಿಕ ಚಹರೆ ಗೌರಿಯಂತೆ ಇದ್ದರೆ ಸಾಲದು ಮಾತು ಕೂಡಾ ಬೆಳ್ಳಿಯಂತಿದ್ದು ಮೌನವಾಗಿರಬೇಕು. ಒಂದರ್ಥದಲ್ಲಿ ಆಕೆಯ ಮಾತಿಗೆ ಬೆಲೆ

ಇಲ್ಲ ಎಂದರ್ಥ ಬರುತ್ತದೆ. ಒಂದು ವೇಳೆ ಆಕೆ ವಿರುದ್ಧವಾದ ಗುಣವುಳ್ಳವಳಾಗಿದ್ದರೆ ಆಕೆಯನ್ನು ಗಯ್ಯಾಳಿ, ಬಾಯ್ಬಿಡಕಿ ಎಂಬ ಪಟ್ಟಕ್ಕೆ ಗುರಿಯಾಗುತ್ತಾಳೆ. ಮಹಿಳೆ ಪರ ಚಿಂತಕಿಯರು ಮೌನಕ್ಕೆ ಹಲವಾರು ಅರ್ಥಗಳಿವೆ ಎಂದಿದ್ದಾರೆ. ಅವರ ಪ್ರಕಾರ "ಮೌನವೆನ್ನುವುದು ಅಭಿವ್ಯಕ್ತಿಯ ಗೈರು ಹಾಜರಿಯಲ್ಲ. ಇದರ ಅರ್ಥ ಹೆಣ್ಣು ಕುಟುಂಬದಲ್ಲಿ ಮೌನವಾಗಿದ್ದಾಳೆ ಎಂದರೆ ಗಂಡಸು ಆಕೆಯನ್ನು ಗೈರು ಹಾಜರಿಯಲ್ಲಿ ನೋಡುತ್ತಿರುತ್ತಾನೆ."[೯] ಈ ರೀತಿಯ ತಾರತಮ್ಯವನ್ನು ಹೋಗಲಾಡಿಸಬೇಕೆಂದು ಮಹಿಳಾವಾದದ ಆಶಯವಾಗಿದೆ.

ಮಿತ್ರಾ ವೆಂಕಟ್ರಜ್ ಅವರ "ಒಂದು ಒಸಗೆ ಒಯ್ಯುವುದಿತ್ತು" ಕತೆಯಲ್ಲಿ ಜಲಜ ಚಿಕ್ಕಿ ಮಕ್ಕಳೊಂದಿಗೆ ಬೆರೆಯುತ್ತಿದ್ದ ರೀತಿ ಹೀಗಿದೆ – "ಮಕ್ಕಳು ಹೇಳಿದಂತೆ ಕುಣಿಯುವ ಅವಳ ಪರಿಗೆ ಬಲಿಯಾಗದವರಿರಲಿಲ್ಲ. ಮನೆಗೆ ಯಾರೇ ಬರಲಿ, ಅಚ್ಚುಕಟ್ಟಾಗಿ ಬೇಗ ಬೇಗ ಕೆಲಸ ಮುಗಿಸಿ ಮಕ್ಕಳನ್ನು ಖುಷಿ ಪಡಿಸುವ ಏನಾದರೂ ಕಾರ್ಯಕ್ರಮ ಹಮ್ಮಿಕೊಳ್ಳುತ್ತಿದ್ದಳು. ಹೊಳೆ ಬದಿಗೆ ಹೋಪ ಮಕ್ಕಳೆ, ಅಥವಾ ಇವತ್ತು ಹಾಡಿಗೆ ಕರ್ಕಂಡ್ ಹೋತೆ, ತಿಂಡಿ ಮಾಡಿ ಹಿಡ್ಕಂಬ. ಒಮ್ಮೊಮ್ಮೆ ಬರುವ ಮೊದಲೇ ನಾಳೆ ದೋಣಿ ಗಂಡಿಗೆ ಹೆಲಿ ಇಡೆ ಹೊಳೆಗೆ ಒಂದು ಸುತ್ತು ಹಾಕಿ ಕರ್ಕಂಡ್ ಬರ್ತೆ, ಎಂದು ಯೋಜನೆ ಹಾಕಿ ಅಕರ್ಷಿಸುತ್ತಿದ್ದಳು"[೧೦] ಈ ಮಾತುಗಳು ಸಹಜವಾಗಿ ಮಕ್ಕಳನ್ನು ಸೆಳೆಯುತ್ತಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಭಾಷೆಯನ್ನು, ಆಡು ಮಾತನ್ನು ಆಯಾ ಸನ್ನಿವೇಶಕ್ಕೆ ತಕ್ಕಂತೆ ಹದವಾಗಿ ಹಿತಮಿತವಾಗಿ ಕಲಾತ್ಮಕವಾಗಿ ಬಳಸಿದ್ದಾರೆ.

"ಮಾಯಕದ ಸತ್ಯ" ಕತೆಯಲ್ಲಿ ಮಂಜಪ್ಪನ ಹೆಂಡತಿ ಸತ್ಯವಂತಿ ಮತ್ತು ಮಂಜಪ್ಪನ ಗೆಳೆಯ ಶಂಕರಣ್ಣ ಇವರ ಸುತ್ತ ಇಪ್ಪತ್ತು ವರುಷಗಳ ಕೆಳಗೆ ನಡೆದ ಘಟನಾವಳಿಗಳನ್ನು ಕತೆಯೆಂಬಂತೆ ಕುಪ್ಪ ನಿರೂಪಿಸುತ್ತಾ ಹೋಗುತ್ತಾನೆ. 'ಗಂಡನನ್ನೂ ಮಿಂಡನನ್ನೂ ಬಲಿ ತೆಗೆದುಕೊಂಡ ಸತ್ಯವತಿ ಪಿಶಾಚಿಯಾಗಿ... ಎಂಬಲ್ಲಿಗೆ ಕುಪ್ಪ ಕತೆ ಮುಗಿಯುತ್ತದೆ.[೧೧]

"ಕತೆ ಕೇಳುತ್ತಿದ್ದ ಗುಳ್ಳಿಯ ಕೊರಳು ಸರ್ತವಾಯಿತು. ಅವಳ ನಿದ್ದೆಯೆಲ್ಲ ಹಾರಿಹೋಯಿತು. "ಕತಿ ಪೂರ ತದ್ಧಿಪುತಮಾಡಿ ಹೇಳಿಯಲ್ಲ ಮಾರಾಯ. ನಮ್ಮ ಸತ್ಯವಂತಿ ಹೆಣ್ಣಾಂದ್ರೆ ಕೈ ತೊಳ್ದು ಮುಟ್ಟಬೇಕ್ ಬಲ್ಯ. ಬಾಯಿಗೆ ಬಂದದ್ದ್ ಅನ್ ಬೇಡ. ನಿನ್ನ ಬಾಯಲ್ಲಿ ಹುಳ ಅಕ್ಕು ಗೊತ್ತಾಯ್ತಲ್ಲ" ಎಂದು ಏರು ಸ್ವರದಲ್ಲಿ ಗದರಿದಳು. ಕತಿಯಾರ ಕೈಯ್ಯಲ್ಲುಂಟ ಅವರು ಹೇಳಿದ್ದೇ ಕಲಾ ಹಾಂಗಾರೆ ಎಂದಳು.[೧೨]

ಹೆಣ್ಣಿನದೇ ತಪ್ಪು ಎಂಬ ಭಾವನೆ ಹುಟ್ಟುವ ಹಾಗೆ ಕುಷ್ಟ ಕತೆಯನ್ನು ತಿರುಚಿ ಹೇಳುವುದನ್ನು ಖಂಡಿಸುತ್ತಾಳೆ. ಇಲ್ಲಿ ಕುಂದಾಪುರದ ಸ್ಥಳೀಯ ಭಾಷೆಯನ್ನು ಸೊಗಸಾಗಿ ಬಳಸಿದ್ದಾರೆ.

ಎಚ್. ನಾಗವೇಣಿಯವರೇ ತಮ್ಮ "ನಾಕನೇ ನೀರು" ಕಥಾಸಂಕಲನದ ಮುನ್ನುಡಿಯಲ್ಲಿ ಹೀಗೆ ಹೇಳಿದ್ದಾರೆ "ನಾನು ಕಡಲ ತಡಿಯಲ್ಲಿ ಬೆಳೆದವಳು, ತುಳುನಾಡ ಸಿರಿಯನ್ನು ಕಂಡವಳು. ನಾನು ಹುಟ್ಟಿದ್ದು ಬೆಳೆದದ್ದು, ಹೊರಜಗತ್ತನ್ನು ನೋಡಿದ್ದು ಎಲ್ಲಾ ಅಲ್ಲೇ. ಭೂತ-ಕೋಲ, ಕಂಬಳ, ತಾಳಮದ್ದಲೆ, ಯಕ್ಷಗಾನ ದಿಗಿಣದ ಜತೆ ಕಡಲು, ತೀರ, ಅಲೆ-ಬಲೆ, ಬಿರುಮಳೆ, ಕರೆಗಾಳಿ, ಮೀನಿನ ವಾಸನೆ... ಎಲ್ಲವೂ ನನ್ನ ಒಳ ಹೊರಗನ್ನು ತುಂಬಿಕೊಂಡಿತ್ತು. "ಅದು ನನ್ನ ಒಳಗೋ, ನಾನು ಅದರ ಒಳಗೋ..."[೧೩] ಹೀಗೆ ತಮ್ಮ ಕಥೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪರಿಸರ ಮತ್ತು ಇಲ್ಲಿನ ಭಾಷೆಯಿಂದ ಪ್ರಭಾವಿತರಾಗಿರುವುದನ್ನು ಅಭಿಮಾನದಿಂದ ಹೇಳಿದ್ದಾರೆ.

"ಇನಾಮು" ಕಥೆಯಲ್ಲಿ ಪ್ರಕೃತಿಯ ಕುರಿತು ವರ್ಣನೆಯನ್ನು ಈ ರೀತಿ ಮಾಡಿದ್ದಾರೆ. "ಕಾನಿ ಬೊಗ್ಸರ ತನ್ನ ಬುಗುರಿ ಮರದ ಫಸಲನ್ನು ಕೊಪ್ಲದ ಹುಸೇನ್ ಬ್ಯಾರಿಗೆ ಮಾರಿದ್ದರಿಂದ ಅವನು ಕೊಯ್ಯುವ ಹಾಗಿಲ್ಲ. ಆದರೆ "ಬೀಸಿ ಬರುವ ಕೆಡ್ಡಸದ ಗಾಳಿ ಬಿಡಬೇಕೇ? ಒಮ್ಮೆ ಸುಂಯ್ಯೆಂದು ಬೀಸಿ ಬಂದರೆ ಸಾಕು ಮರವನ್ನು ಪಡ್ಲಾಗೆಯಿಂದ ಮೂಡ್ಲಾಗೆ ವಾಲಿಸಿ, ಒಂದು ಸೇರು ಹಣ್ಣನ್ನು ಕಾಸಿ ಬೊಗ್ಗರನ ಮಡಿಲಿಗೆ ಸುರುವಿ ಬಿಡುತ್ತದೆ!"[೧೪] ಹೀಗೆ ಆಡು ಭಾಷೆಯ ಪದಗಳನ್ನು ಪ್ರಯೋಗಿಸುತ್ತಾರೆ. ಕಾಸಿ ಬೊಗ್ಗುರನ ಹೆಂಡತಿ ತುಂಗ ಹೆಬ್ಬಾರರ ಹೆಂಡತಿ ವಿಮಲಮ್ಮನಲ್ಲಿ ಮಾತನಾಡುವ ಭಾಷೆ ಹೀಗಿದೆ. "ಅಲ್ಲಮ್ಮ, ಆ ಪುಸ್ಕು ಇನಾಮು ಕೊಡುವುದಾದ್ರೂ ಎಂತಾದ್ದು ಗೊತ್ತಾ...? ಪುಸ್ಕು, ನಾಯಿ ಮೂಸಾದ್ದು, ಕಾಗೆ ಕುಟುಕಾದ್ದು, ಯಾವುದಕ್ಕೂ ಬ್ಯಾಡದ ಓದುವ ಬೂಕು"[೧೫] ಹೀಗೆ ಕೆಳಜಾತಿಯವರ ಮಾತನ್ನು ಬಳಸಿದ್ದಾರೆ.

"ಕಸಬರಿಕೆ" ಕತೆಯಲ್ಲಿ ಚಂದು ಅಮ್ಮಣ್ಣಿಯಮ್ಮನ ಮೇಲಿನ ಸಿಟ್ಟಿನಿಂದ ಹೀಗೆ ಹೇಳುತ್ತಾಳೆ. "ಅವ್ವು, ಸತ್ಲು! ಅವಳ ಹೆಣಾ! ಅವಳ ಬೊಜ್ಜ! ಬಿಕನಾಸಿ ಹಡಬೆ ಬ್ರಾಹ್ಮಣ್ತಿ! ಅವಳಿಗೆ ಹೆದ್ರೀ ಹೆದ್ರೀ ನೀನೂ ಸಾಯಿ... ನಾನೂ ಸಾಯ್ತೀನಿ' [೧೬] ಎಂದು ಅಬ್ಬರಿಸಿದಳು. ರುಕ್ಕು ಮೂಲ್ಯ ತನ್ನ ಮಗಳಿಗೆ ಬಾಯಿಗೆ ಬಂದ್ದಾಗ ಬಯ್ಯಬಾರದು ಎಂದಾಗ ಆಕೆ "ನಾನು ನಾಯಾಗೇ ಹುಟ್ಟೇನೆ; ಬೇಕಿದ್ರೆ ಹುಳವಾಗಿ

ಹುಟ್ತೇನೆ. ಆದ್ರೆ ಆ ಬೋಸುಡಿ ಮುಂಡೆ ಅಮ್ಮಣ್ಣಿಯಮ್ಮನಾಗಿ ಮಾತ್ರ ಹುಟ್ಬಲ್ಲ".[೧೭] ಈ ಮಾತುಗಳಲ್ಲಿ ಸಿಟ್ಟಿನ ತೀವ್ರತೆ ಜೊತೆಗೆ ಸ್ವನಿಂದನೆಯ ಸಂವೇದನೆಯನ್ನು ಗುರುತಿಸಬಹುದು.

ಚಂದು ತುಳಸಿಕಟ್ಟೆಯಲ್ಲಿ ಹಾಕಿದ ರಂಗೋಲಿಯನ್ನು ವೀಕ್ಷಿಸುತ್ತಿದ್ದಾಗ "ಅಮ್ಮಣಿಯಮ್ಮ 'ಎಂತಾ ಬೋಳಿ ಮುಂಡೆ, ನಿನ್ನ ಮಿಂಡ ಕಾಲನ್ನ ಬಗ್ಸಿ ಬಗ್ಸಿ ನೋಡುತ್ತಿದ್ದೀ ಎಂದು ಗರ್ಜಿಸಿದಾಗ ಚಂದುವಿನ ಪ್ರತಿರೋಧ "ಏನೇ ಬ್ರಾಹ್ಮಣ್ತಿ? ನನ್ನ ಮಿಂಡಕಾಲು ಅನ್ತೀಯಾ ಮುಂಡೆ" ಎಂದನ್ನುತ್ತಾ ಅಮ್ಮಣಿಯಮ್ಮನ ಜುಟ್ಟು ಬಗ್ಗಿಸಿ ಕೈಯಲ್ಲಿದ್ದ ಕಸಬರಿಕೆಯಲ್ಲಿ ಆಕೆಯನ್ನು ತಿರುಗಿಸಿ ತಿರುಗಿಸಿ ಬಾರಿಸಿದ್ದಳು".[೧೮] ಬಾಯ್ಮುಚ್ಚು ಬಿಕನಾಸಿ ಬ್ರಾಹ್ಮಣ್ತಿ; ಬಾಯೆತ್ತಿದ್ರೆ ಮತ್ತೆ ಕಾಲಮೆಟ್ಟಲ್ಲಿ ಹೊಡೆದು ಬಿಟ್ಟೇನು"[೧೯] ಎನ್ನುವಲ್ಲಿ ತನ್ನ ಕೋಪ, ತಿರಸ್ಕಾರವನ್ನು ವ್ಯಕ್ತಪಡಿಸುವಳು. ಮೇಲ್ಜಾತಿಯವರಿಂದ ಶೋಷಣೆಯಾದಾಗ ಈ ರೀತಿಯ ಪ್ರತಿರೋಧದ ಒರಟು ಭಾಷೆಗಳು ಬರುತ್ತವೆ.

"ಬಸಿರು" ಕತೆಯಲ್ಲಿ ಕುಪ್ಪ ಹೆಂಡತಿ ಬಿಯಲುವಿನ ತೊಟ್ಟಿಲ ಆಸೆಯನ್ನು ಹೇಳಿಕೊಂಡು ಸಾಲದ ವಿಚಾರ ಎತ್ತಿದಾಗ ಜಾನಕಮ್ಮನವರು, "ಏನಾ... ಎಲ್ಲಿಂದ ತಂದಿದ್ದಾ ನಿನ್ನ ಹೆಣವನ್ನು ಈ ಸುಡು ಬಿಸಿಲಿಗೆ...? ಹೇಗಿದ್ದಾಳಾ ನಿನ್ನ ಕೊರತಿ...? ನೀರು ನಿಂತಿದ್ಯಾ... ಇಳಿದು ಹೋಗಿದ್ಯಾ? ಅವ್ಳ ಗರ್ಭ ಅಂದ್ರೆ ತುಳುವ ಹಲಸಿನ ಹಣ್ಣಿನಂತೆ... ಅಲ್ವಾನಾ? ಯಾವಾಗ ತೊಟ್ಟು ಕಳಚಿ ಬೀಳುತ್ತೆ... ಅಂತಾ ಹೇಳ್ಲಿಕ್ಕಾಗದು"[೨೦] ಕಲ್ಲೆದೆಯ ಕೊಳಕು ಒಡಲ ಬ್ರಾಹ್ಮಣ್ತಿಯ ಅಪಹಾಸ್ಯದ–ವ್ಯಂಗ ತುಂಬಿದ, ನಗುಮಾತಿನ ಇರಿತಕ್ಕೆ ಕುಪ್ಪ ತತ್ತರಿಸಿದ್ದನು. "ಏನಾ... ನಾಯಿ ಬೂದಿ ಹೊಂಡದಲ್ಲಿ ಮಲಗ್ಬೇಕೇ ಹೊರತು ಅದನ್ನು ದಂಡಿಗೆಯಲ್ಲಿ ಮಲಗಿಸಿಕ್ಕಾಗುತ್ತನಾ...?[೨೧] ಮೇಲ್ಜಾತಿಯವರು ಕೆಳಜಾತಿಯವರನ್ನು ಅಸಹನೆ, ವ್ಯಂಗ್ಯದಿಂದ ಆಡುವ ಭಾಷೆಗಳನ್ನು ಲೇಖಕಿ ಪ್ರಯೋಗಿಸಿದ್ದಾರೆ.

"ನಾಕನೇ ನೀರು" ಕತೆಯಲ್ಲಿ ರುಕುಮಾಚಾರ್ತಿ ತನ್ನ ಮಗನ ಕುರಿತು ಬೈಯ್ಯುವ ಬೈಗಳ ಹೀಗಿದೆ. "ಇವ್ನ ಹೆಂಡ್ತಿ ತಲೆ ಹತ್ತಿ ಉಚ್ಚೆ ಹೊಯ್ದರೂ ಅದು ಉಚ್ಚೆಯಲ್ಲ, ನಾರಾಯಣ ದೇವರ ತೀರ್ಥ ಎನ್ನುವವ. ಈ ಚಾಂಡಾಲ ಬೇವರ್ಸಿ"[೨೨] ಎಂಬ ಬೈಗುಳದ ಮಾತುಗಳು ವ್ಯಕ್ತವಾಗುತ್ತದೆ.

"ಬೆಲ್ಲ" ಕತೆಯಲ್ಲಿ ಹೊಲೆ ಮಾದಿಗ ಮಾಕಾಳಿ ಮಾಸ್ಟರ್‌ರಾಗಿರುತ್ತಾನೆ. ಜೋಯಿಸರ ಮಗಳು ವಸಂತಿ ಹೊಲೆಮಾದಿಗ ಗಟ್ಟಿದ ಮಾಸ್ಟ ಮಾಕಾಳಿ ಜತೆ ಸುದ್ದಿಯಿಲ್ಲದೆ ಓಡಿ ಹೋಗಿರುತ್ತಾಳೆ. ಮಾಸ್ಟ್ ಓಡಿ ಹೋಗುವ ಮೊದಲು ತನ್ನ ಮನೆಯಲ್ಲಿದ್ದ ಉಪ್ಪಿನಕಾಯಿ ಭರಣಿ, ಬೆಲ್ಲದ ಮೂಟೆ, ರಾಗಿ ಚೀಲ,

ಅರಿಯುವ ಕಲ್ಲು ಇತ್ಯಾದಿಗಳನ್ನು ಒಬ್ಬೊಬ್ಬರ ಮನೆಯಲ್ಲಿರಿಸಿ ನಂತರ ಬಂದು ತೆಗೆದುಕೊಳ್ಳುವುದಾಗಿ ಹೇಳಿ ಹೋಗಿರುತ್ತಾನೆ. ಆದರೆ ಆತ ಬರುವುದು ತಡವಾಗುತ್ತದೆ. ಆದಕಾರಣ ಅಪ್ಪಣ್ಣನ ಹೆಂಡತಿ ಬೆಲ್ಲದ ಗಂಟನ್ನು ಸ್ವಲ್ಪ ಸ್ವಲ್ಪವೇ ಬಳಸುತ್ತಾ ಬರುತ್ತಾಳೆ ಮತ್ತು ವಾಂಟೆರಾಮನ ಹೆಂಡತಿ ಉಪ್ಪಿನಕಾಯಿ ಕೆಡುತ್ತದೆಂದು ತಿನ್ನಲು ಪ್ರಾರಂಭಿಸಿದ ಸಂದರ್ಭದಲ್ಲಿ ಅಪ್ಪಣ್ಣ ವಾಂಟೆ ರಾಮನನ್ನು ಭೇಟಿಯಾದಾಗ ಆತನ ಬಾಯಿಂದ ಈ ಮಾತುಗಳು ಹೊರಹೊಮ್ಮುತ್ತವೆ. "ಆಂವ ಸತ್ತಲ್ಲಿಂದ ಸತ್ತು ಹೋಗ್ಲಿ ಅಪ್ಪಣ್ಣಾ – ಆಂವ ಅಪ್ಪುಂಗೆ ಸಾಯ್ಲಿ, ಅನ್ನ ಬೊಜ್ಜುವನ್ನು ಪರ್ಕೆದಡಿಯನ್ನು ಕಾದು ಕಾದು ನಂಗೆ ಸಾಕಾಯ್ತು. ಇವ್ಳು ಬಿಕನಾಸಿ ಮುಂಡೆ, ನನ್ಗೆ ದಿನಾ ಆ ಸೀಂತೆಲ್ ವಾಸ್ನೆಯ ಉಪ್ಪಿನಕಾಯಿ ತಿನ್ನಿಸ್ತಿದ್ದಾಳೆ. ನಾಕು ದಿನದಿಂದ ಆ ಗಂಜಿ ತಿಂದೂ... ತಿಂದು, ಅವ್ನ ಹುಳಬಿದ್ದ ಉಪ್ಪಿನಕಾಯಿ ನೆಕ್ಕೀ... ನೆಕ್ಕೀ, ನನ್ನ ನಾಲಿಗೆಯ ರುಚಿಯೇ ಬಿದ್ದು ಯೋಯ್ತು ಅಪ್ಪಣ್ಣಾ"[೨೩] ಪುರುಷ ಪಾತ್ರಗಳು ಸ್ತ್ರೀಯರನ್ನು ಕುರಿತು ಬೈಯುವ ಬೈಗುಳಗಳನ್ನು ಲೇಖಕಿ ಅನಾವರಣಗೊಳಿಸಿದ್ದಾರೆ.

ಸಾರಾ ಅಬೂಬಕ್ಕರ್‌ರವರ "ಬಂದಣಿಗೆ" ಕತೆಯಲ್ಲಿ ಅಬ್ದುಲ್ ಖಾದರ್ ತನ್ನ ಸ್ನೇಹಿತ ಮನೆಗೆ ಬಂದಾಗ ಹೆಂಡತಿ ಚಾ ಮಾಡಿ ತರಲು ಹೇಳುತ್ತಾನೆ. ಚಾ ತಂದಾಗ "ಆಂ.. ಎಂತಹ ಚಹಾ ತಯಾರಿಸಿದ್ದೀಯಾ, ರಂಡೇ ಮಗಳೇ ನಿನ್ನಪ್ಪನಿಗೆ ಕೊಡು ಇದನ್ನು"[೨೪] ಎನ್ನುತ್ತಾ ಲೋಟವನ್ನೆತ್ತಿಕೊಂಡು ಬಾಗಿಲ ಪರದೆಯೆಡೆಗೆ ಬೀಸಿ ಒಗೆದನು. ನಂತರ ತನ್ನ ಮದುವೆಯ ಪುರಾಣವನ್ನು ಹೇಳುತ್ತಾ ಹೆಂಡತಿಗೆ "ಆಸ್ತಿಯನ್ನು ತರಲು ಹೇಳಿದಾಗ ಒಂದು ಪಾಲನ್ನು ತಂದಳು. ಆ ಹಣವೆಲ್ಲ ನನ್ನಿಂದ ಖರ್ಚಾಯಿತು. ಉಳಿದ ಪಾಲನ್ನು ಕೇಳು ಎಂದರೆ ಈ ಬೇವರ್ಸಿ ನನ್ನಿಂದಾಗದು ಎನ್ನುತ್ತಾಳೆ. ಇವಳಿಗೂ ಇವಳ ಮಗನಿಗೂ ನಾನು ಬಿಟ್ಟಿಕೂಳು ಹಾಕ್ಬೇಕಾ?"[೨೫] ಎಂದು ಗೆಳೆಯನೆದುರು ಹೇಳುತ್ತಾನೆ.

ತಾನು ಅನಾರೋಗ್ಯ ಪೀಡಿತನಾದರೂ ಹೆಣ್ಣಿನ ಬಗ್ಗೆ ತಾತ್ಸಾರ ಮಾಡುವುದನ್ನು ಬಿಟ್ಟಿಲ್ಲ. ಹೆಣ್ಣು ಇರುವುದೇ ಚಾಕರಿ ಮಾಡಲು ಎಂಬ ಭಾವನೆ. ಆತ ಮಾತನಾಡುವ ಭಾಷೆಯಲ್ಲಿಯೇ ಹೆಣ್ಣಿಗೆ ಯಾವ ರೀತಿ ಸ್ಥಾನಮಾನ ಗೌರವ ಸಿಗುತ್ತಿದೆ ಎಂಬುದನ್ನು ಅರಿತುಕೊಳ್ಳಬಹುದು.

"ಧರ್ಮ ಬಲೆ ಬೀಸಿದಾಗ" ಕತೆಯಲ್ಲಿ ಜಮಾಅತ್‌ನ ಅಧ್ಯಕ್ಷ ಖತೀಜಾಬಿಯ ಮಗಳನ್ನು ಮದುವೆಯಾಗಲು ಕೇಳಿದಾಗ ಆಕೆ ಒಪ್ಪಲಿಲ್ಲ ಎಂಬ ಕಾರಣಕ್ಕೆ ಆಕೆಯ ವಿರುದ್ಧ ಆರೋಪ ಹೊರಿಸುತ್ತಾನೆ. ಜಮಾಅತ್‌ನ ಮೂಲಕ ಬಹಿಷ್ಕಾರ ಹಾಕಿಸುತ್ತಾನೆ. "ಖತಿಜಾಬಿ ಕುಡಿತ, ವ್ಯಭಿಚಾರ

ಮುಂತಾದ ಮಹಾಪಾಪಗಳನ್ನು ಮಾಡಿದಲ್ಲದೆ ಮಸೀದಿಯ ಜಮಾಅತ್ ಸಮಿತಿಯ ತೀರ್ಪನ್ನು ಉಲ್ಲಂಘಿಸಿ ಮಸೀದಿಯ ಹೆಸರಿಗೆ ಕಳಂಕ ತಂದಿದ್ದಾಳೆ. ಆದ್ದರಿಂದ ಆಕೆಯನ್ನು ಜಮಾಅತ್‌ನವರು ಬಹಿಷ್ಕರಿಸಬೇಕು. ಆಕೆಗೆ ಯಾವುದೇ ರೀತಿಯ ಸಹಾಯವನ್ನು ನೀಡಬಾರದು"[೨೬] ಎಂದು ತೀರ್ಮಾನಿಸಿ ತನ್ನ ನಿರ್ಧಾರವನ್ನು ಧ್ವನಿವರ್ಧಿತದಲ್ಲಿ ಊರಲೆಲ್ಲಾ ಪ್ರಚಾರ ಮಾಡಿದರು. ಈ ವಿಚಾರ ಗಂಡನಿಗೆ ಗೊತ್ತಾಗಿ ಆತ ಶಿಕ್ಷೆಯನ್ನು ಅನುಭವಿಸಿ ಬಂದು ಬಿಡು ಎಂದಾಗ ಖತೀಜಾಬಿ ಹೆಡೆ ಎತ್ತಿದ ಹಾವಾದಳು. ಕಣ್ಣುಗಳು ಕೆಂಡ ದುಂಡೆಗಳಾದವು. "ಏನಂದ್ರಿ?..... ಏನಂದ್ರಿ?.... ನಾನು ಮಸೀದಿಗೆ ಹೋಗಿ ಆ ನೀಚರ ಕೈಯಿಂದ ಪೆಟ್ಟು ತಿನ್ನಬೇಕೇ? ಯಾವ ತಪ್ಪಿಗಾಗಿ? ನನ್ನ ಮಗಳನ್ನು ಆ ಮುದಿಯನ ಕೊರಳಿಗೆ ಕಟ್ಟಲೊಪ್ಪದ ತಪ್ಪಿಗಾಗಿಯೇ? ಮಸೀದಿಗೆ ಹೋಗಿ ಪೆಟ್ಟು ತಿಂದು ನಾನು ಮಾಡದ ತಪ್ಪನ್ನು ಒಪ್ಪಿಕೊಳ್ಳಲೇ? ನೀವೂ ನಿಮ್ಮ ಮೆದುಳನ್ನು ಒತ್ತೆಯಿಟ್ಟು ಬಂದಿದ್ದೀರಾ? ನಿಮ್ಮಿಂದಾಗದಿದ್ದರೆ ಹೇಳಿ, ಪೊಲೀಸ್ ಸ್ಟೇಶನಿಗೆ ನಾನೇ ಹೋಗಿ ದೂರು ಕೊಡುತ್ತೇನೆ".[೨೭] ತನ್ನ ಪ್ರತಿರೋಧವನ್ನು ಗಂಡನ ಮೂಲಕ ಹೊರಹಾಕುತ್ತಾಳೆ. ಭಾಷೆಯು ಲಿಂಗತಾರತಮ್ಯದ ಸೂಚಕವಾಗಿ ಯಾವ ರೀತಿ ಕೆಲಸ ಮಾಡುತ್ತದೆ ಎಂಬುದನ್ನು ಕಾಣಬಹುದು. "ನೀವು ಗಂಡಸೇ ಅಲ್ಲವೆಂದು ನನಗೆ ಇಂದು ಗೊತ್ತಾಯಿತು!" ಆಗ ಕರೀಂಸಾಬನು "ಮತ್ತೆ ಮಕ್ಕಳು?" ಎಂದಾಗ ಆಕೆ "ಮಕ್ಕಳೇನು, ನಾಯಿ ಬೆಕ್ಕುಗಳಿಗೂ ಆಗುತ್ತವೆ!" ಎನ್ನುತ್ತಾಳೆ. ಕರೀಂಸಾಬಿ ಆದರೂ.... ಗಂಡು ನಾಯಿ, ಗಂಡು ಬೆಕ್ಕುಗಳಿಲ್ಲದೆ ಆಗುವುದಿಲ್ಲವಲ್ಲ[೨೮] ಮುಗುಳ್ನಗುತ್ತಾ ಹೇಳುತ್ತಾನೆ. ಎಂತಹ ಗಂಭೀರ ಸಮಸ್ಯೆ ಇದ್ದರೂ ಆತನ ಹಾಸ್ಯ ಪ್ರಜ್ಞೆ ಸದಾ ಜಾಗೃತವಾಗಿರುತ್ತದೆ.

'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕತೆಯಲ್ಲಿ ಪುಟ್ಟಮ್ಮತ್ತೆಯ ಮೊಮ್ಮಗಳಾದ ಕಮಲಾವತಿ ಪುರುಷ ದೌರ್ಜನ್ಯವನ್ನು ಮೆಟ್ಟಿ ನಿಲ್ಲುವ ಪ್ರಯತ್ನ ಮಾಡುತ್ತಾಳೆ. ಪುಟ್ಟಮ್ಮತ್ತೆಯ ತಾಯಿಯೇ ಕಷ್ಟಪಟ್ಟು "ಮನೆ ಹಿತ್ತಲಲ್ಲಿ ಬೆಂಡೆ, ಬದನೆ, ಹೀರೆ ಬೆಳೆಸಿ, ತೊಂಡೆ ಚಪ್ಪರ ಸ್ವತಃ ಹಾಕಿ ಅವರಿವರ ಗದ್ದೆಯಲ್ಲಿ ಬೆನ್ನು ಬಗ್ಗಿಸಿ ದುಡಿದು ದಿನ ತೆಗೆದಳಂತೆ. ಕೇರಿ ಮನೆಗಳಲ್ಲಿ ಅರೆದು ಕೊಟ್ಟು, ಅವರಿವರು ಉಟ್ಟ ಬಟ್ಟೆ ಸೀರೆಯನ್ನೇ ಉಟ್ಟು, ರವಿಕೆ ಇದ್ದರೆ ಹಾಕಿ, ಇಲ್ಲವೆ ಸೆರಗನ್ನೇ ಮೈ ತುಂಬಾ ಹೊದ್ದು ದಿನ ಕಳೆದವಳು. ಇಂದಿನ ದಿನ ಮರ್ಯಾದೆಯಲ್ಲಿ ಕಳೆಯಿತ್ತೇ, ಬಟಾವಾಡೆ ಎಂದು ಹೆಂಗಸು ಅಪ್ಪಂಥ ಗಂಡನೆಂಬವ ಒಬ್ಬ ಇಲ್ಲದ ಮೇಲೆ ಸ್ವಂತವಾಗಿ ಬೇಕಷ್ಟು ದುಡಿಯುವ ಸಾಮರ್ಥ್ಯವೂ ಇಲ್ಲದ ಮೇಲೆ ನೈವೇದ್ಯವೆಂದ ಮೇಲೆ ಪ್ರಪಂಚದಲ್ಲಿ ಹೆಣ್ಣು ಹೆಂಗಸಿನ ಅವಸ್ಥೆ ಅಂದಿನಿಂದ ಇಂದಿಗೂ ಇಷ್ಟೇ".[೨೯] ಹಾಗೆ ಕಷ್ಟ ಪಟ್ಟು

ತಾನೇ ದುಡಿದು ಗಂಡನನ್ನು ಸಾಕುತ್ತಿದ್ದ ಪುಟ್ಟಮ್ಮತ್ತೆಯ ತಾಯಿಯೊಂದಿಗೆ ತಂದೆ ಏನೋ ಚಿಕ್ಕ ವಿಷಯಕ್ಕೆ ಜಗಳ ತೆಗೆದು ಅದು ಜೋರಾಗಿ ನಂತರ ತಂದೆ ಸಿಟ್ಟಿನಿಂದ ಆಕೆಯನ್ನು ಬಾವಿಗೆ ತಳ್ಳಿ ಕೊಲ್ಲುತ್ತಾನೆ. ಹೀಗೆ ಹೆಣ್ಣಿನ ಶೋಷಣೆ ಮುಂದುವರಿಯುತ್ತಾ ಇದೆ.

ಪುಟ್ಟಮ್ಮತ್ತೆಗೆ ಕಮಲಾವತಿಯ ಮದುವೆಯ ಚಿಂತೆ ಕಾಡುತ್ತದೆ. ಅದಕ್ಕೋಸ್ಕರ ಕಮಲಾವತಿಗೆ ಗಂಡು ಹುಡುಕಲು ಪರಮೇಶ್ವರ ರಾಯರಿಗೆ ಹೇಳಿದಾಗ, ಆತ 'ಓಹೋ, ಅದಕ್ಕೇನಾಯ್ತ್?' ಎಂದವ ತುಸು ತಡೆದು, 'ಪುಟ್ಟಮ್ಮತ್ತೆ, ನಮ್ಮಲ್ಲಿಪ್ ಮರಿಯಣ್ಣ ಹೆಂಗೆ? ಇಲ್ಲಿಗ್ ಬಂದಿದ್ನಲೆ, ನೀವೂ ಕಂಡ್ರಿಪ್ರಿ ನಿಮ್ಮ ಮೊಮ್ಮಗಳ್ ಎಂಥಾ ಚುರುಕಂತೀ ನೀರಿಲ್ಲದಲ್ಲಿ ನೀರು ಹುಟ್ಟಿಸಿ, ಕಂಡ್‌ಬಪ್ಪ ನನ್, ವ್ಯವಹಾರ ಎಲ್ಲ ಕಂಡ್ಕಂಬುದು ಯಾರೆಂತ ಮಾಡ್ದೆ. ಕಾಂಬೂಕೂ ಮನ್ಮಥ. ಹಣ್ಣು ಗೆಂಪು, ಹೆಣ್ಣು ಗೆಂಪು ಒಡೀತಾ'[೩೦] ಅವನ ಮಾತು ಮುಗಿದು, ಪುಟ್ಟಮ್ಮತ್ತೆಗೆ ಸರಿಯಾಗಿ ಅರ್ಥವಾಗುವುದರೊಳಗೆ "ಪರಮೇಶ್ವರ ರಾಯರೇ, ನಿಮ್ ಮರಿಯಣ್ಣ ಅಷ್ಟು ಕೆಂಪಾಯಿ ಸಾಪಿದ್ರೆ ನಂಗೇನು? ಕಚ್ಚಿ ತಿಂಬುಕಾತ್ತಾ? ಬೇಕಾದ್ರೆ ನಿಮ್ಮ ಮಗ್ಳನ್ನೇ ಕೊಟ್ಬಿಡಿ"[೩೧] ಎಂದು ಹೇಳಿ ಕಮಲಾವತಿ ಹೋಗುತ್ತಾಳೆ. ಅದನ್ನು ಕಂಡು ಪುಟ್ಟಮ್ಮತ್ತೆ "ಕಂಡ್ಯ ಕಂಡ್ಯ ಆ ದಗಡೀನ!" ಎಂದರೆ, ಪರಮೇಶ್ವರನ ಹೆಂಡತಿ "ಪುಟ್ಟಮ್ಮತ್ತೆ ಸಮಾ ನಾಕು ದಿವ್ಸ ಉಪಾಸ ಹಾಕ್, ಉಡಾಪೆಲ್ಲಾ ಇಳೀದೆ ಎಲ್ಲಿಗ್ ಹೋತ್"[೩೨] ಎಂದು ಹೇಳುತ್ತಾನೆ. ಇಲ್ಲಿ ಪರಮೇಶ್ವರನ ಹೆಂಡತಿ ಒಂದು ಹೆಣ್ಣಾದರೂ ಇನ್ನೊಂದು ಹೆಣ್ಣಿನ ಮನಸ್ಥಿತಿಯನ್ನು ಅರ್ಥಮಾಡಿಕೊಳ್ಳುವುದಿಲ್ಲ.

'ಅಮ್ಮಚ್ಚಿಯೆಂಬ ನೆನಪು' ಕತೆಯಲ್ಲಿ ಅಮ್ಮಚ್ಚಿ ಪುರುಷ ದೌರ್ಜನ್ಯವನ್ನು ಪ್ರತಿಭಟಿಸಿ ನಿಲ್ಲುವ ಧೈರ್ಯವಂತೆ. ಗಂಡನನ್ನು ಕಳೆದುಕೊಂಡ ಸಂದರ್ಭ. ಸೀತತ್ತೆಗೆ ಆಸರೆಯಾಗಿ ನಿಂತವನು. ೧೨ ವರ್ಷ ಪ್ರಾಯದ ವೆಂಕಪ್ಪಯ್ಯ. ಸೀತತ್ತೆಗೆ ಆತನನ್ನು ಕಂಡರೆ ಇಷ್ಟ. ಆದರೆ ಅಮ್ಮಚ್ಚಿಗೆ ಆತ ಎಲ್ಲಾ ವಿಷಯದಲ್ಲೂ ತಲೆ ಹಾಕುವುದು ಈಕೆಗೆ ಇಷ್ಟವಾಗುತ್ತಿರಲಿಲ್ಲ. ಹಾಗಾಗಿ ಆತನ ವಿರುದ್ಧ ತಿರುಗಿ ಬೀಳುತ್ತಿದ್ದಳು. ಒಂದು ದಿನ ಅಮ್ಮಚ್ಚಿ ಸತ್ಯನಾರಾಯಣ ಪೂಜೆಗೆ ಜಡೆ ಬಿಟ್ಟುಕೊಂಡು ಹೋಗುತ್ತಿದ್ದುದನ್ನ ಕಂಡು ವೆಂಕಪ್ಪಯ್ಯ "ಏನಿಯ, ಇದೇನಿಯ ಯೇಸ. ಬೊಂಬಾಯಿ ಲೇಡಿಯ ಹಂಗೆ, ವಾರೆ ಬಕ್ತಲೆ! ಶಿ... ಶಿ... ನಡೆ ಮನೆಗೆ ಸರಿಯಾಗಿ ಬಾಚಿಕೊಂಡು ಹೋವು" ಎಂದ. ಅದಕ್ಕೆ ಅಮ್ಮಚ್ಚಿ 'ಹೋವುಯ, ನೀ ಮನೆಗೆ ಹೋವು. ಹೋಯಿದ್ದು ಗಡದ್ದು ಒಂದು ಲೋಟೆ ಚಾಯ ಕುಡಿ. ಅಮ್ಮನ ಹಕ್ಕೈ ಹೇಳ್, ಹೆಂಗೂ ಮಾಡಿ ಕೊಡ್‌ತ್ಲ್... ನನ್ನ ಸುದ್ಧಿಗೆ ಮಿನಿ ಬರಳೆ. ಬೋಳು ಮಂಡೆ ಕಾಕ. ನಿಂಗೆ ವಾರೆ ಬಿಡು. ಯಾವ ಬಕ್ತಲೆಯ

ತೆಗೆಯಗಾಗದ ಸಂಕಟಕ್ಕೆ ನಂಗೆ ಯಾಕೆ ಹೇಳ್ತೆ? ಎಂದವಳು. ನನ್ನ ಕೈ ಹಿಡಿದು ಬಾಯ ಬೀಸ ನೀನು. ಮೆಲ್ಲ ನಡ್ದೆದ್ರೆ, ಹಿಂಗೇ. ನಾಯಿ ಸಂತಾನಗಳೆಲ್ಲ ಎದುರಾತೋ' ಎಂದು ಎಳೆದುಕೊಂಡು ಮುಂದೆ ನಡೆದೇ ಬಿಟ್ಟಳು! 'ಸುಟ್ಟದ್, ಎಲ್ಲಿ ತಯಾರಾಯ್ತೋ ನಮ್ಮ ಮನೆಗೆ...'[೩೩] ಹೀಗೆ ಗೊಣಗುತ್ತಾ ಹೋಗುತ್ತಾಳೆ. ಆತ ತಾನೇ ಮನೆಗೆ ಹಕ್ಕುದಾರನೆಂಬಂತೆ "ಅವಳನ್ನು ಮದುವೆ ಯಾಪುಗೆ ಇನ್ನು ಯಾವ ಪುಣ್ಯಾತ್ಮ ಬಪ್ಪ? ಮಗಳ ಚಿಂತೆ ನೀವು ಮಾಡಳೆ ನಾನಿದ್ದೆ"[೩೪] ಎಂದು ಸೀತತ್ತೆ ಜೊತೆ ಹಾಗೂ ಊರಲೆಲ್ಲ ಹೇಳುತ್ತಾ ಹೋಗುತ್ತಾನೆ. ಇದರಿಂದಾಗಿ ಅಮ್ಮಚ್ಚಿಗೆ ಆತನನ್ನು ಕಂಡರೆ ಕೋಪ ಬರುತ್ತದೆ. ಸಾಮಾಜಿಕವಾಗಿ ಇರುವ ಲಿಂಗತಾರಮ್ಯದ ನೆಲೆಯನ್ನು ಹೆಂಗಸರು ಅನುಭವಿಸುತ್ತಾ ಅದಕ್ಕೆ ಪ್ರತಿಕ್ರಿಯೆಯಾಗಿ ಅಥವಾ ಪರಿಣಾಮವಾಗಿ ತಮ್ಮ ಭಾಷೆಯಲ್ಲಿ ಬದಲಾವಣೆಗಳನ್ನು ಅಳವಡಿಸಿಕೊಳ್ಳುತ್ತಾರೆ. ಗಂಡಸಿನ ಭಾಷೆಗಿಂತ ಭಿನ್ನವಾದ ಭಾಷೆಯಲ್ಲಿ ಅಮ್ಮಚ್ಚಿ ಗೆಳತಿಯರೊಡನೆ ಪೇಟೆಗೆ ಸಾಮಾನು ತರಲು ಹೊರಟಾಗ ವೆಂಕಪ್ಪಯ್ಯ ಮಧ್ಯೆ ಪ್ರವೇಶಿಸಿ ತಡೆ ಒಡ್ಡುತ್ತಾನೆ. ಅಮ್ಮಚ್ಚಿಗೆ ಸ್ವತಂತ್ರವಾಗಿ ಬದುಕಬೇಕೆಂಬ ಆಸೆ. ಆದರೆ ಆಕೆಯ ಆಸೆಗೆ ವೆಂಕಪ್ಪಯ್ಯ ತಣ್ಣೀರೆರಚುತ್ತಾನೆ. ಹೀಗೆ ವೈದೇಹಿಯವರು ಕುಂದ ಕನ್ನಡ ಭಾಷೆಯನ್ನು ಯಥೇಚ್ಛವಾಗಿ ಪ್ರಯೋಗ ಮಾಡಿದ್ದಾರೆ.

ವೈದೇಹಿಯವರ "ಸೌಗಂಧಿಯ ಸ್ವಗತಗಳು" ಕತೆಯಲ್ಲಿ ಅವಿವಾಹಿತೆ ಸೌಗಂಧಿ ಉದ್ಯೋಗಸ್ಥೆ, ಬೇರೆ ಊರಿಗೆ ವರ್ಗವಾದಾಗ ಬಾಡಿಗೆ ಮನೆಯ ಒಡತಿ, ಜೊತೆ ತಂದೆ ತಾಯಿಗಳು, ಆಕೆಯನ್ನು ಜೋಪಾನವಾಗಿ ನೋಡಿಕೊಳ್ಳಲು ಹೇಳುತ್ತಾರೆ. ಆದರೆ ಸೌಗಂಧಿಗೆ ಪಿತೃಪ್ರಧಾನ ವ್ಯವಸ್ಥೆಯ ಅಧೀನದಲ್ಲಿ ಬೆಳೆದವಳಿಗೆ ಎಲ್ಲವನ್ನು ಮೀರುವ ಬಯಕೆ ಕಾಡುತ್ತದೆ. ಇಲ್ಲಿ ವೈದೇಹಿಯವರು ಹೆಣ್ಣಿನ ಮನಸ್ಸಿನ ಭಾವನೆಗಳನ್ನು ಅನಾವರಣ ಮಾಡಿದ್ದಾರೆ. "ಸೌಗಂಧಿ ಕಾಲ ಮೇಲೆ ಕಾಲನಿರಿಸಿ ಮಗುವನ್ನೆತ್ತಿ ಹಾಲೂಡುತ್ತಿರುವಂತೆ ಕುಳಿತುಕೊಂಡಳು. ಯಾಕೋ ತಲೆ ತಿರುಗಿದಂತಾಯಿತು ಯಾರೋ ನೋಡುತ್ತಿದ್ದಾರೆ ಅಂತ ಭಯವಾಯಿತು. ತಕ್ಷಣ ಟಪಕ್ಕೆಂದು ಬೋರಲು ಮಲಗಿಕೊಂಡು ಮುಖವಡಗಿಸಿಕೊಂಡಳು. ಇವತ್ತಿಡೀ ರಜೆ. ಇವತ್ತಾದರೂ ಏನಾದರೂ ಸಂಭವಿಸಬಾರದೆ? ಈ ರಾತ್ರಿಯೇ! ಆದ್ರರ್ತೆ ಅವಳನ್ನು ಪೂರ್ತಿ ಆವರಿಸಿಕೊಂಡು ಬಿಟ್ಟಿತು".[೩೫] ಹೀಗೆ ಹೆಣ್ಣಿನ ಭಾಷೆಯನ್ನು ಲೇಖಕಿ ಅನಾವರಣ ಮಾಡಿದ್ದಾರೆ.

## ೫.೨ ಸೌಹಾರ್ದತೆಯ ನೆಲೆಗಳು

ಕರಾವಳಿಯ ಮಹಿಳಾ ಕಥಾ ಸಾಹಿತ್ಯದೊಳಗೆ ಸೌಹಾರ್ದತೆಯ ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಕರಾವಳಿ ಪ್ರದೇಶದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಚಿಂತನಾ ಮಾದರಿಗಳ ಅರಿವಿರಬೇಕು. ಕಾರಣ ಪ್ರಜ್ಞೆಯ ಬಗ್ಗೆ ಸ್ಪಷ್ಟತೆ ಬೇಕಾದರೆ ಮೊದಲು ನಾವು ಅರ್ಥಮಾಡಿಕೊಳ್ಳಬೇಕಾದದ್ದು ಪರಿಸರದ ಸಾಂಸ್ಥಿಕ ಆಯಾಮಗಳನ್ನು. ಹಿಂದೂ, ಕ್ರೈಸ್ತ, ಮುಸಲ್ಮಾನರು ಹೆಚ್ಚಾಗಿ ಕಾಣ ಸಿಗುವ ಈ ಪ್ರದೇಶದಲ್ಲಿ ಕಡಲು ಮತ್ತು ಇಲ್ಲಿನ ವಾಣಿಜೀಕರಣದ ನಿಲುವು ಕೋಮುವಾದ, ಕೋಮು ಸಾಮರಸ್ಯವನ್ನು ಹಂತಹಂತವಾಗಿ ನಿಯಂತ್ರಿಸುವ ಮತ್ತು ನಿಭಾಯಿಸುವ ಕಾರ್ಯ ಮಾಡುತ್ತದೆ.

ವೃತ್ತಿ ಸಂಬಂಧಿ ಜಾತಿವಾರು ನಿಲುವುಗಳು, ಮುಂಬೈ, ದುಬೈನಲ್ಲಿ ಉದ್ಯೋಗ ಪಡೆದುಕೊಂಡ ಇಲ್ಲಿನ ಜನರು ಧರ್ಮವನ್ನು ರಾಜಕೀಯದೊಳಗೆ ಬೆರಸಿ ಹಂತಹಂತವಾಗಿ ಇದೊಂದು ಧಾರ್ಮಿಕ ಪ್ರಯೋಗದ ಪಾಠಶಾಲೆ ಮಾಡಿ ಇಲ್ಲಿನ ಜನರ ಸಾಂಸ್ಕೃತಿಕ ಸಾಮಾಜಿಕ ಬದುಕನ್ನು ವಿನಾಶದ ಕುರುಹಾಗಿ ಬಿಂಬಿಸುವಂತೆ ಮಾಡಿದ್ದಾರೆ.

ಮಹಿಳಾವಾದ ಯಾವತ್ತಿಗೂ ಆತಂಕದಿಂದ ಕಾಣುವ ವಿಷಯವೊಂದಿದೆ ಅದೇನೆಂದರೆ ಕೋಮುವಾದ ಸಂಭವಿಸಿದ ಸಂದರ್ಭದಲ್ಲಿ ಮೊದಲು ಬಲಿಯಾಗುವುದು ಹೆಣ್ಣುಮಕ್ಕಳು. ತಮ್ಮ ಮಾನ ಪ್ರಾಣಗಳಿಗೆ ಬೆಲೆ ಇಲ್ಲದಂತೆ ವರ್ತಿಸುವ ಮೂಲಭೂತ ಮತೀಯ ಪುರುಷವಾದಿಗಳು ಹೆಣ್ಣನ್ನು ಪ್ರತಿಕಾರ ತೀರಿಸುವ ಸರಕಾಗಿ ಬಳಸಿಕೊಳ್ಳುವುದು ವಿಪರ್ಯಾಸವೇ ಸರಿ.

ನಾಗವೇಣಿಯವರ ಕೆಲವು ಕಥೆಗಳು ಹೆಣ್ಣಿನಲ್ಲಿರುವ ಸಾಮರಸ್ಯದ ತುಡಿತವನ್ನು ಧರ್ಮಭೇದ ಮರೆತ ಮಹಿಳಾ ಮೀಮಾಂಸೆಯೊಂದನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದೆ. ತಾಯ್ತನ ಕಥೆಯು ಈ ದೃಷ್ಟಿಯಲ್ಲಿ ಅತ್ಯಂತ ಸಮರ್ಥ ನಿರ್ವಹಣೆ ಎಂದರೆ ತಪ್ಪಾಗಲಾರದು. ನಾಗವೇಣಿ ಈ ಕಥೆಯಲ್ಲಿ ಹೇಳಹೊರಟಿರುವುದು ದಲಿತರು ಮತ್ತು ಮುಸಲ್ಮಾನರ ನಡುವಿನ ಸೌಹಾರ್ದತೆಯನ್ನು ಹೆಣ್ಣು ಹೇಗೆ ಕಟ್ಟಿಕೊಡುತ್ತಾಳೆ ಎಂಬ ನಿಲುವನ್ನು ಮುಂದಿಡುವುದೇ ಆಗಿದೆ.

'ತಾಯ್ತನ' ಕಥೆಯು ಕೋಮಲ ಸೌಹಾರ್ದತೆ ಮತ್ತು ಸಂಘರ್ಷವನ್ನು ಚಿತ್ರಿಸುತ್ತದೆ. ತಾಯ್ತನದ ಪ್ರತೀಕವಾಗಿ ಐಸಂಬ್ಯಾರಿ ಇಲ್ಲಿ ಚಿತ್ರಿತಳಾಗಿದ್ದಾಳೆ. ಮೈದಿನ್ ಬ್ಯಾರಿಯವರು ತಮ್ಮ ಸ್ವಜಾತಿ ಬಾಂಧವರೊಡನೆ ಆ ಪಕ್ಕದೂರಿನ ಮಸೀದಿಗೆ ಪ್ರಾರ್ಥನೆಗೆಂದು ಹೋಗಿದ್ದಾಗ ಒಂದು ಘಟನೆ ನಡೆಯುತ್ತದೆ.

ಒಮ್ಮೆ ಸುಬ್ರಹ್ಮಣ್ಯ ಗುಡಿಯ ಪಕ್ಕ ಮಸೀದಿ ನಿರ್ಮಾಣವಾಗುತ್ತದೆ ಎಂಬ ಸುದ್ದಿ ಹರಡಿತು. ಇದಕ್ಕೆ ಮೈದಿನ್ ಬ್ಯಾರಿಯವರು ಜೊತೆಯಾಗಿದ್ದಾರೆ ಎಂಬ ಸುಳ್ಳು ಸುದ್ದಿ ಹರಡಿತು. ಅಲ್ಲಿಯವರೆಗೂ ಆ ಊರಿನಲ್ಲಿ ಹಿಂದೂ ಮುಸ್ಲಿಂ ಮನೆತನದವರು ಸೌಹಾರ್ದದಿಂದ ಇದ್ದವರು "ಪಕ್ಕದೂರಿನಲ್ಲಿ ದೇವರ ಗುಡಿ ಕಟ್ಟಲು ಬಿಡುವುದಿಲ್ಲವಂತೆ ಸ್ವಾಮಿ ಎಂಬ ಹುಸಿ ಸುದ್ದಿ ಈ ಕೇರಿ ತುಂಬಾ ಸುತ್ತಿ, ಮೂರು ಗ್ರಾಂ ತೂಕದ ಶೂದ್ರ ಮಂದಿಯ ಮೆದುಳು ಹೊಕ್ಕು ಅವರೆಲ್ಲರ ಪಿತ್ತ ಕೆದರಿಸಿತ್ತು. ದಟ್ಟ ಮಲೆಗೆ ಬಿದ್ದ ಬೆಂಕಿಯನ್ನಾದರೂ ತಣಿಸಬಹುದಂತೆ, ಕೆಟ್ಟ ಮನಸ್ಸಿಗೆ ಬಿದ್ದ ಬೆಂಕಿಯನ್ನು ತಣಿಸಲಾದೀತೆ?"[೬೭] ಸ್ವಂತ ವಿವೇಚನೆಯಿಲ್ಲದ ಆ ಮಂದಿಯ ಪಿತ್ತ ಕೆದರುವುದೆಂದರೆ ಹುಚ್ಚನ ಕೈಗೆ ಮಸೆದ ಕತ್ತಿ ಕೊಟ್ಟು ಕಳುಹಿಸಿದಂತೆ, ಕ್ರೋಧ ತಪ್ತ ಮನಸ್ಸುಗಳು ಹಿಂದೊಮ್ಮೆ ತಾವು ಪರಸ್ಪರ ಸಾಮರಸ್ಯ ಪ್ರೀತಿಯಿಂದ ಬದುಕಿದ್ದೆವು ಎಂಬುದನ್ನು ಕ್ಷಣ ಮಾತ್ರದಲ್ಲಿ ಮರೆತುಬಿಟ್ಟು ದ್ವೇಷ, ಹಠ ಸಾಧಿಸುವಲ್ಲಿ ಸಫಲವಾಗಿದ್ದವು. ಮೈದಿನ್ ಬ್ಯಾರಿ ಶವ ಯಾತ್ರೆ ನಡೆಯುವ ಸಂದರ್ಭದಲ್ಲಿ ಸುಂದರಿಗೆ ಹೆರಿಗೆ ನೋವು ಕಾಣಿಸಿಕೊಳ್ಳುತ್ತದೆ. ಮಗು ಹೊರಗೆ ಬರಲು ಸಾಧ್ಯವಾಗದೆ ತಾಯಿ ನೋವನ್ನು ಅನುಭವಿಸುತ್ತಿದ್ದಾಳೆ. ಸುಂದರಿಯ ತಾಯಿಗೆ ಹೆರಿಗೆ ಮಾಡಿಸಿದ್ದು ಕೂಡ ಐಸಂಬ್ಯಾರಿಯೇ. ಆದರೆ ಆಕೆ ಈಗ ಗಂಡನ ಸಾವಿನ ನೋವಿನಲ್ಲಿದ್ದಾಳೆ. ಇದ್ದತ್ ವಿಧಿಯಲ್ಲಿದ್ದ ಐಸಂಬ್ಯಾರ್ದಿಯವರ ಮನಸ್ಸಿನ ದುಃಖಕ್ಕೆ ಮತ್ತಷ್ಟು ದುಃಖ ಬಂದು ಸೇರಿಕೊಂಡಿದ್ದು ತುಕ್ರ ಭಂಡಾರಿ ಹೊತ್ತು ತಂದ ಹೆರಿಗೆ ಸುದ್ದಿಯಿಂದ. ಎಲ್ಲರಿಗೂ ನ್ಯಾಯ ಕಟ್ಟು ಅಂಥಾ ಒಂದಿರುತ್ತದೆ. ಅದು ಸಾಂಪ್ರದಾಯಿಕ ಹಾಗೂ ಶಿಸ್ತಿನ ಬದುಕಿನ ಒಡವೆಗಳೂ ಹೌದು. "ಇದೀಗ ತಾನು ಕಟ್ಟು ಪಾಡು ಎಂದು ಕುಳಿತರೆ ತನ್ನಿಂದ ಎಂದೆಂದೂ ಸೃಷ್ಟಿಸಲಾಗದ ಜೀವಗಳೆರಡನ್ನು ನಿರ್ಜೀವಗೊಳಿಸಿದಂತಾಗುತ್ತದೆ. ಸಂಪ್ರದಾಯದ ಕಟ್ಟನ್ನು ಎದುರಿಗಿಟ್ಟುಕೊಂಡು ಮತ್ತೊಂದು ಜೀವವನ್ನು ಮುರುಟುಗೊಳಿಸುವುದು ಅಮಾನವೀಯವೂ ಹೌದು. ಮನಸ್ಸಿನ ವಿಕಾರವೂ ಹೌದು"[೬೮] ಎಂದು ದುಃಖಿತ ಮನಸ್ಸಿಗೆ ತೋಚಿದೊಡನೆ ಆಕೆ ಹೆರಿಗೆ ಮನೆಗೆ ಹೊರಡಲು ತಯಾರಾಗುತ್ತಾಳೆ. ಆಕೆ ಆ ಸಂದರ್ಭದಲ್ಲಿ

ಬಂದು ಸುಂದರಿಗೆ ಹೆರಿಗೆ ಮಾಡಿಸುತ್ತಾಳೆ. ದ್ವೇಷಕ್ಕಿಂತ ಪ್ರೀತಿ, ವಿಶ್ವಾಸ, ಮಾನವೀಯತೆ ಮುಖ್ಯ ಎಂಬುದನ್ನು ಸಮಾಜಕ್ಕೆ ಈ ಮೂಲಕ ತಿಳಿಸುತ್ತಾಳೆ.

ಸಾರಾ ಅಬೂಬಕ್ಕರ್‌ರವರ "ಸಾರಾಂಶ" ಕತೆಯಲ್ಲಿ ಕೋಮುವಾದ ವಸ್ತುವನ್ನು ಇಟ್ಟುಕೊಂಡು ರಚಿಸಿದ ಕತೆಯಾಗಿದೆ. ಶಬಾನಳ ಮನೆಗೆ ಗಂಡನಿಂದ ಮೋಸಹೋಗಿ ಶೋಷಿತಳಾದ ಹಿಂದೂ ಮಹಿಳೆ ಸಹಾಯವನ್ನು ಅಪೇಕ್ಷಿಸಿ ಬರುತ್ತಾಳೆ.

ಆಕೆಯ ಕಷ್ಟಕ್ಕೆ ಸ್ಪಂಧಿಸಲು ಶಬಾನಳು ಮುಂದಾದಾಗ ಗಂಡ ಸಮಿಯುಲ್ಲ ಎಚ್ಚರಿಕೆ ಕೊಡುತ್ತಾನೆ. ಆದರೆ ಯಮುನಾ ತುಂಬಾ ಕಷ್ಟದಲ್ಲಿದ್ದಾಳೆಂದು ತಿಳಿದು ಗಂಡನನ್ನು ಒಪ್ಪಿಸಿ ಮನೆಕೆಲಸ ಮಾಡಿಕೊಂಡಿರಲು ಅನುಮತಿಯನ್ನು ಕೊಡುತ್ತಾಳೆ. ಆದರೆ ಸಮಿಯುಲ್ಲಾ ಯಮುನಾಳನ್ನು ತನ್ನ ಮನೆಯಲ್ಲಿರಿಸಿದರೆ ತೊಂದರೆ ಯಾಗಬಹುದೆಂದು ಸ್ನೇಹಿತ ರಂಗಪ್ಪನ ಮನೆಯಲ್ಲಿರಿಸುತ್ತಾನೆ. ಅಲ್ಲಿಯೂ ಆತನ ಹೆಂಡತಿಯ ಹಿಂಸೆಯಿಂದ ದಿಕ್ಕು ತೋಚದೆ ಶಬಾನಳ ಮನೆಗೆ ಬಂದು ತನ್ನ ಅಸಹಾಯಕ ಸ್ಥಿತಿಯನ್ನೆಲ್ಲಾ ಹೇಳಿಕೊಂಡು ಸಹಾಯ ಕೇಳುತ್ತಾಳೆ. ಆಗ ಶಬಾನ ಲಾಯರ ಬಳಿಗೆ ಕರೆದುಕೊಂಡು ಹೋಗಿ ನ್ಯಾಯ ಕೊಡಿಸಿ ಎಂದು ತನ್ನ ಗಂಡ ಸಮಿಯುಲ್ಲಾನನ್ನು ಕೇಳಿಕೊಳ್ಳುತ್ತಾಳೆ. ಎದುರುಮನೆ ಅಂಬುಜಮ್ಮ ಅಪರಿಚಿತರನ್ನು ನಂಬಬೇಡಿರೆಂದು ಎಚ್ಚರಿಕೆ ಕೊಡುತ್ತಾಳೆ. ಈ ವಿಷಯ ಮುಸ್ಲಿಂ ಮತ್ತು ಹಿಂದೂ ಜನರಿಗೆ ತಿಳಿದು ಆಕೆಯನ್ನು ಹೊರಹಾಕುವ ಪ್ರಯತ್ನಗಳು ನಡೆಯುತ್ತವೆ. ಮತಾಂತರ ಮಾಡುತ್ತಾರೆನ್ನುವ ವದಂತಿಗಳನ್ನು ಹಬ್ಬಿಸುವ ಸುಳಿವು ಸಿಕ್ಕಿ ಸಮಿಯುಲ್ಲಾ ನೊಂದ ಹೆಣ್ಣನ್ನು ಮನೆಯಿಂದ ಹೊರ ಹಾಕುತ್ತಾನೆ. ಕತೆಯಲ್ಲಿ ಧರ್ಮಕ್ಕಿಂತ ಮಾನವೀಯತೆ ಹೆಚ್ಚು ಎಂಬುದನ್ನು ಕಾಣಬಹುದು. ಪುರುಷ ಪ್ರಧಾನ ಸಮಾಜದಲ್ಲಿ ನೊಂದ ಹೆಣ್ಣಿಗೆ ಸಮಾಧಾನ, ಸಾಂತ್ವನಕ್ಕೆ ಬದಲಾಗಿ ಇನ್ನಷ್ಟು ಶೋಷಣೆ ಮಾಡುವುದನ್ನು ಕಾಣಬಹುದು.

ಆದರೆ ಶಬಾನ ಮೂಲಕ ಸ್ತ್ರೀ ಪರವಾದ ಆಧುನಿಕ ವಿಚಾರಗಳು ಇಲ್ಲಿ ಗೋಚರಿಸುತ್ತವೆ. ಒಬ್ಬ ಮುಸ್ಲಿಂ ಮಹಿಳೆ ಹಿಂದು ಮಹಿಳೆಗೆ ಅನ್ಯಾಯವಾದಾಗ ತನ್ನ ಗಂಡ ಸಮಿಯುಲ್ಲನಿಗೆ ನೊಂದ ಮಹಿಳೆಯ ಕಥೆಯನ್ನು ಈ ರೀತಿ ಹೇಳುತ್ತಾನೆ. "ನೋಡಿ, ನಾಳೆ ನಾನು ಆಕೆಯನ್ನು ಯಾರಾದರೂ ಲಾಯರ ಬಳಿಗೆ ಕರೆಯೊಯ್ಯಲೇ?"[೩೮] ಎಂದು ಕೇಳುವ ಮಾತುಗಳಲ್ಲಿ ಅನ್ಯ ಧರ್ಮದ ಮಹಿಳೆಗೆ ಅನ್ಯಥಾ ಯೋಚಿಸದೇ ನ್ಯಾಯ ಕೊಡಿಸಬೇಕೆಂಬ ಸ್ತ್ರೀಪರವಾದ ಕಾಳಜಿ ಇಲ್ಲಿ ವ್ಯಕ್ತವಾಗಿದೆ.

ಇಲ್ಲಿ ಮುಸ್ಲಿಂ ಹೆಣ್ಣು ಮಗಳು ಧೈರ್ಯವಾಗಿ ಮಾತನಾಡುವ ಲಾಯರ್ ಬಳಿ ಹೋಗಬೇಕೆಂಬ ತುಡಿತ, ಹಿಂದೂ ಹೆಣ್ಣಿಗೆ ಸ್ಪಂದಿಸುವ ರೀತಿಯನ್ನು ನೋಡಿದಾಗ ಸೌಹಾರ್ದತೆಯನ್ನು ಧರ್ಮಸಹಿಷ್ಣುತೆಯ ಸಂವೇದನೆಯನ್ನು ಹೊಂದಿರುವುದು, ಬದಲಾದ ಸ್ಥಿತಿಯು ಕಂಡು ಬರುತ್ತದೆ.

ಸಾರಾ ಅಬೂಬಕ್ಕರ್‌ರವರ "ಯುದ್ಧ" ಕತೆಯಲ್ಲಿ ಎರಡು ರಾಷ್ಟ್ರಗಳ ನಡುವೆ ಯುದ್ಧ ನಡೆಯುತ್ತದೆ. ಅಣುಬಾಂಬಿನ ದಾಳಿಯಿಂದ ಅಪಾರವಾದ ಸಾವು ನೋವುಗಳು ಸಂಭವಿಸುತ್ತವೆ. ಡಾಕ್ಟರ್ ರಾಹಿಲ ತನ್ನ ದೇಶದ ಗಾಯಾಳುಗಳಿಗೆ ಆರೈಕೆ ಮಾಡಲು ಯುದ್ಧ ಭೂಮಿಗೆ ಬರುವ ವೇಳೆಗೆ ವಿಮಾನ ಶತ್ರು ಪಡೆಗಳ ದಾಳಿಗೆ ಸಿಲುಕಿ ಚೂರುಗಳಾಗಿ ನೀರಿಗೆ ಬೀಳುತ್ತದೆ. ಆಗ ಕಷ್ಟಪಟ್ಟು ಈಜುತ್ತ ಒಂದು ದಡ ತಲುಪಿ ಅಲ್ಲಿದ್ದ ಮನೆಯಲ್ಲಿ ಆಶ್ರಯವನ್ನು ಪಡೆಯುತ್ತಾನೆ. ಆ ಮನೆಯ ಸೊಸೆ ಹೆರಿಗೆ ಬೇನೆಯ ಕಷ್ಟದಲ್ಲಿದ್ದಾಗ ರಾಹಿಲ ಚಿಕಿತ್ಸೆ ನೀಡುತ್ತಾನೆ. ಆದರೆ ಮಗು ಸಾಯುತ್ತದೆ. ಶತ್ರುಗಳು ರಾಹಿಲನನ್ನು ಹುಡುಕುತ್ತಾ ಆ ಮನೆಗೆ ಬಂದಾಗ ಮನೆ ಒಡತಿ ಯಾರೂ ಇಲ್ಲಿಗೆ ಬಂದಿಲ್ಲವೆಂದು ಹೇಳಿ ರಾಹಿಲನನ್ನು ರಕ್ಷಣೆ ಮಾಡುತ್ತಾಳೆ. ಆದರೆ ರಾಹಿಲ್ ಶತ್ರು ದೇಶದವನೆಂದು ತಿಳಿದು ಬರುತ್ತದೆ. ಆಕೆ ತನ್ನ ಗಂಡ ಹಾಗೂ ಮಗ ಸತ್ತು ಹೋದ ವಿಚಾರವನ್ನು ಹೇಳುತ್ತಾ ದುಃಖಿತಳಾಗುತ್ತಾಳೆ. ತನ್ನೆಲ್ಲಾ ಸಿಟ್ಟನ್ನು ಶತ್ರು ದೇಶದ ರಾಹಿಲನ ಮೇಲೆ ತೀರಿಸಿಕೊಳ್ಳಲು ಹವಣಿಸಿದಾಗ ಆತನೂ ತನ್ನ ಶತ್ರುಗಳು ಆಸ್ಪತ್ರೆಯ ಮೇಲೆ ಬಾಂಬ್ ಹಾಕಿದ್ದು, ಅದರಿಂದಾಗಿ ತನ್ನ ಹೆಂಡತಿ ಮಗು ಹಾಗೂ ತಾಯಿ ಸತ್ತು ಹೋಗಿರುವ ದಾರುಣ ಘಟನೆಯೊಂದನ್ನು ತಾನು ಟಿ.ವಿ.ಯಲ್ಲಿ ನೋಡಿ ತಿಳಿದೆನೆಂದು ದುಃಖತಪ್ತನಾಗಿ ಹೇಳುತ್ತಾನೆ. ಆದರೆ ಎರಡು ರಾಷ್ಟ್ರಗಳು ಯುದ್ಧ ನಿಲ್ಲಿಸಿ ರಾಜಿ ಮಾಡಿಕೊಂಡು ನಾಯಕರಿಬ್ಬರೂ ಕೈ ಕುಲುಕುತ್ತಿರುವುದನ್ನು ಟಿ.ವಿ.ಯಲ್ಲಿ ನೋಡಿ ಸಿಟ್ಟು ಬರುತ್ತದೆ.

ರಾಹಿಲ್ ಹೊರಡಲನುವಾದಾಗ 'ರಾಹಿಲ್ ...' ಎಂದು ಮುದುಕಿಯ ದುಃಖತಪ್ತ ಧ್ವನಿ ಕೇಳುತ್ತದೆ. 'ನೋಡಪ್ಪಾ, ಊರಿನಲ್ಲಿ ನಿನಗಾರೂ ಇಲ್ಲವೆನ್ನುತ್ತೀ. ನಾನು ಮಗನನ್ನೂ ಮೊಮ್ಮಗುವನ್ನೂ ಕಳೆದುಕೊಂಡ ಓರ್ವ ನತದೃಷ್ಟ. ನೀನೇಕೆ ನನ್ನ ಮಗನಾಗಿ ಇಲ್ಲೇ ಇರಬಾರದು?' ಎಂದಾಗ ಚಕಿತನಾಗಿ 'ಅದು ಹೇಗೆ ಸಾಧ್ಯ?' ಎನ್ನುತ್ತಾನೆ. 'ಯಾಕೆ ಸಾಧ್ಯವಿಲ್ಲ?' ಅವರವರ ಹೊಟ್ಟೆಯಲ್ಲಿ ಹುಟ್ಟಿದರೆ ಮಾತ್ರ ಮಕ್ಕಳೇ? ನನ್ನ ಸೊಸೆ ಇಚ್ಛಿಸಿದರೆ ನೀನವಳನ್ನು ಮದುವೆಯಾಗು. ಮಗು, ಸೊಸೆಯರ ಸಂಸಾರ ನನಗೆ; ತಾಯಿ, ಹೆಂಡತಿಯ ಸಂಸಾರ ನಿನಗೆ. ಏನನ್ನುತ್ತೀ?'[೩೯] ಎನ್ನುತ್ತಾಳೆ ಮುದುಕಿ.

ಮಗನನ್ನು ಕಳೆದುಕೊಂಡ ತಾಯಿಗೆ ರಾಹಿಲ್ ಮಗನಾಗಿ ಮತ್ತು ರಾಹಿಲ್‌ಗೆ ಶತ್ರುವಿನ ತಾಯಿ ತನ್ನ ತಾಯಿಯಾಗಿ ಸೌಹಾರ್ದತೆಯ ನೆಲೆಯಲ್ಲಿ ಬದುಕುವ ಸಮಾನ ದುಃಖಿಗಳು; ಧರ್ಮ, ದೇಶ, ಸಿಟ್ಟುಗಳೆಲ್ಲವನ್ನು ಮರೆತು ಪರಸ್ಪರ ನಂಬಿಕೆಯಿಂದ ಬದುಕುವ ಮಾನವೀಯತೆಯು ಇಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

ಎಚ್. ನಾಗವೇಣಿಯವರ "ಪಂಜುರ್ಲಿ ಮತ್ತು ಗರ್ಭಪಾತ" ಕತೆಯಲ್ಲಿ ಮಂಜಪ್ಪ ಶೆಟ್ಟರು ಮತ್ತು ಉಸ್ಮಾನ್ ಬ್ಯಾರಿಗೂ ಸ್ನೇಹ ಮಾತ್ರ ಯಾವ ಅಡೆತಡೆಗಳಿಲ್ಲದೆ ಮುಂದುವರಿದಿತ್ತು. ಮನಸ್ಸಿನ ಕಹಿಯನ್ನು ಮರೆತು ಮತ್ತೆ ಮುಂದುವರಿಸುವುದರಲ್ಲಿ ಇಬ್ಬರೂ ಜಾಣರು.

ಒಮ್ಮೆ ಶೆಟ್ಟರ ಮಗಳು ಸೋನಕ್ಕನಿಗೆ ನಾಲ್ಕನೇ ಬಾರಿ ಗರ್ಭ ಜಾರಿಹೋದಾಗ ಶೆಟ್ಟರು ಉಸ್ಮಾನ್ ಬ್ಯಾರಿಯಲ್ಲಿ ತನ್ನ ನೋವನ್ನು ತೋಡಿಕೊಂಡು ಸಾಂತ್ವನ ನಿರೀಕ್ಷಿಸಿದ್ದರು. ಆಗ ಉಸ್ಮಾನ್ ಬ್ಯಾರಿ "ಶೆಟ್ಟರೇ, ನೀವು ನಿಮ್ಮ ಪಂಜುರ್ಲಿಗೆ ಬೆಳ್ಳಿಯ ಮಣೆ, ಮಂಚ, ಪಾಪ್ದೆ, ಕಟ್ಸಲೆ, ಭೋಗ ಒಪ್ಪಿಸಿದ್ದರೂ ಈ ಬಾರಿಯೂ ಆಕೆಗೆ ಗರ್ಭ ನಿಲ್ಲಲಿಲ್ಲ. ಇನ್ನು ಆ ಪಂಜುರ್ಲಿಯ ಗೋಜಿಗೆ ಹೋಗುದೇ ಬೇಡ. ನಮ್ಮ ಉಳ್ಳಾಲದ ದರ್ಗಾಕ್ಕೆ ಒಂದು ಆಡು ಬಿಡಿ; ಅಥವಾ ನಮ್ಮ ಪೀರ್ ಸ್ಯಾಬರಿಂದ ಆಕೆಯ ಸೊಂಟಕ್ಕೆ ತಾಯತ ಕಟ್ಟಿಸಿ ಬಿಡಿ"![೪೦] ಅಂತ ಸಲಹೆ ನೀಡಿದಾಗ ಶೆಟ್ಟರು ಕೋಪಗೊಳ್ಳುತ್ತಾರೆ. ಆದರೂ ಅವರ ಸ್ನೇಹಕ್ಕೆ ಅದು ಅಡ್ಡಿ ಬರುವುದಿಲ್ಲ. ದೇವರು ಧರ್ಮದ ಬಗ್ಗೆ ನಿಷ್ಠೂರ ಚರ್ಚೆ ನಡೆಯುತ್ತದೆಯಾದರೂ ಮತ್ತೆ ಒಂದಾಗುತ್ತಿದ್ದರು.

"ಬಿಳಿ ಕಾಗೆ" ಕತೆಯಲ್ಲಿ ಸುಬ್ರಾಯ ಭಟ್ಟರ ಮೊಮ್ಮಗ ರಾಮು, ನೆರೆಮನೆಯ ಬೀಪಾತುಮ್ಮನ ಮಗ ಮಮ್ಮದೆ ಹಾಗೂ ಬಜಿಲ ಕೇರಿಯ ಮಡಿವಾಳ ಮಾಣಿಯಪ್ಪುವಿನ ಮಗ ಪಕೀರ ಮೂವರೂ ಸ್ನೇಹಿತರು. ಭಟ್ಟರಿಗೆ ಮೊಮ್ಮಗ ರಾಮು ಕೆಳಜಾತಿಯ ಮಕ್ಕಳೊಂದಿಗೆ ಆಟವಾಡುವುದು ಇಷ್ಟವಿಲ್ಲ. ಮಕ್ಕಳು ಕಳ್ಳ–ಪೊಲೀಸ್ ಆಟವಾಡುತ್ತಿದ್ದಾಗ ಮಮ್ಮದ ಚಡ್ಡಿ ಹಿಡಿದು ಎಳೆದಿದ್ದ. ಇದರಿಂದ ಅವಮಾನಿತನಾದ ಮಮ್ಮದೆ ಅದೇ ಅವತಾರದಲ್ಲಿ ಸರಕ್ಕನೆ ರಾಮುವಿನ ಜನಿವಾರ ಹಿಡಿದೆಳೆದಳು 'ಏನೋ ಪುಳಿಭಟ್ಟ ನನ್ನ ಚಡ್ಡಿ ಹಿಡಿದೆಳೆಯುತ್ತೀಯಾ' ಎಂದಾಗ ರಾಮುವಿಗೆ ಸಿಟ್ಟು ಬಂತು. ಹಡಬೆ ಮಮ್ಮದನ ಜತೆ ಆಟವಾಡಲೇ ಬಾರದಿತ್ತು ಅಜ್ಜನ ಮಾತನ್ನು ಸ್ವಲ್ಪವಾದರೂ ಗಣನೆಗೆ ತೆಗೆದುಕೊಳ್ಳಬೇಕಿತ್ತು ಎಂದು ಭಾವಿಸುತ್ತಾನೆ. ಆದರೆ ಅಜ್ಜನ ಉಪದೇಶ ಮತ್ತು ಮಮ್ಮದನ ಮೇಲಿನ

ಸಿಟ್ಟು ನಾಲ್ಕು ದಿನದೊಳಗೆ ಬೀಸಿ ಬರುವ ಕಡಲ ಕರೆಗಾಳಿಯ ಪಾಲಾದಾಗ, ರಾಮು ಮತ್ತೆ ಕಳ್ಳ-ಪೊಲೀಸ್ ಆಟಕ್ಕಾಗಿ ಮಮ್ಮದೆ ಹಾಗೂ ಪಕೀರನನ್ನು ಸ್ವತಃ ತಾನೇ ಹೋಗಿ ಆಹ್ವಾನಿಸಿ ಬಂದಿದ್ದ. ತಾವು ಮತ್ತೆಂದೂ ಜಗಳವಾಡಬಾರದೆಂದು ಮಮ್ಮದೆ-ರಾಮರಿಬ್ಬರೂ ತೀರ್ಮಾನಿಸಿದ್ದರು.[೪೧] ಇಲ್ಲಿ ಸೌಹಾರ್ದತೆಯು ರಾಮು ಮತ್ತು ಮಮ್ಮದೆಯರಲ್ಲಿ ಕಂಡುಬರುತ್ತದೆ. ಎಳೆಯ ಮಕ್ಕಳಲ್ಲಿ ವಿಷದ ಬೀಜವನ್ನು ಹಿರಿಯರು ಬಿತ್ತುವ ಕೆಲಸವನ್ನು ಮಾಡುತ್ತಾರೆ. ಅದನ್ನು ಲೇಖಕಿ ಮಾಡಬಾರದೆಂಬ ಸಂದೇಶವನ್ನು ಈ ಕತೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಎಚ್. ನಾಗವೇಣಿ ಅವರ "ಮಾನದಾಚಿನ ಗಹನ", ಕತೆಯು ಹಿಂದೂ ಮುಸ್ಲಿಮರ ನಡುವಿನ ಬಾಂಧವ್ಯವನ್ನು ಹೇಳುತ್ತದೆ. ಇಲ್ಲಿ ಮುಸ್ಲಿಂ ಹುಡುಗ ಕುಟ್ಯಾಲಿ ಮತ್ತು ಅಪ್ಪು ಮಾಣಿ ಸ್ನೇಹಿತರು. ಮಾಣಿ ಒಮ್ಮೆ ಜನಿವಾರ ಹಾಕಿದವರು ಆಕಾಶದಲ್ಲಿ ನಕ್ಷತ್ರಗಳಾಗುತ್ತಾರೆ ಎಂದು ಹೇಳುತ್ತಾನೆ. ಅದನ್ನು ಕೇಳಿದ ಕುಟ್ಯಾಲಿ ತನಗೂ ಬ್ರಾಹ್ಮಣರಂತೆ ಜನಿವಾರ ಹಾಕಿಕೊಳ್ಳಬೇಕು ಎಂದು ಅಜ್ಜಯ್ಯ ಭಟ್ಟರಲ್ಲಿ ತನ್ನ ಆಸೆಯನ್ನು ತೋಡಿಕೊಂಡಾಗ "ಯಾವ ಬೋಳಿ ಮಗ.... ನಿನಗೆ ನಕ್ಷತ್ರದ ಬಗ್ಗೆ ಹಾಗಂದವ? ಬ್ರಾಹ್ಮಣರು ಮಾತ್ರ ನಕ್ಷತ್ರವಾಗುವುದಂತಾ"[೪೨]... ಎಂದು ತುಸು ಗದರಿಕೆ ದನಿಯಲ್ಲೇ ಪ್ರಶ್ನಿಸಿದಾಗ ಅಪ್ಪು ಮಾಣಿ ತಾನೇ ಎಂದು ಒಪ್ಪಿಕೊಳ್ಳುತ್ತಾನೆ. "ಅಜ್ಜಯ್ಯ ದನದ ಮಾಂಸ ತಿನ್ನುವ ಬ್ಯಾರಿಗಳು ನಕ್ಷತ್ರವಾಗ್ತಾರ. ಅಂದಿ ಮಾಂಸ ತಿನ್ನುವ ಲಾಂತು ಪರ್ಬುವು ನಕ್ಷತ್ರವಾಗುವುದಿಲ್ಲವಂತೆ ದಿನಾ ಗಂಗಸರ ಕುಡಿದು ಬರುವ ಬಡಂಬ ತಿಂಮನೂ ನಕ್ಷತ್ರವಾಗುವುದಿಲ್ಲವಂತೆ"[೪೩] ಎಂದು ರಂಗಜ್ಜಯ್ಯ ತನಗೆ ಹೇಳಿದ್ದಾರೆ ಎಂದು ಮಾಣಿ ಹೇಳುತ್ತಾನೆ. ಆ ಮಾತುಗಳನ್ನು ಕೇಳಿದ ಕುಟ್ಯಾಲಿಯ ಮುಖ ಬಾಡಿದ್ದನು ನೋಡಿದ ಭಟ್ಟರಿಗೆ ಕರುಳು ಹಿಂಡಿದಂತಾಗಿ ಆತನನ್ನು ತಬ್ಬಿಕೊಳ್ಳುತ್ತಾರೆ. ಕುಟ್ಯಾಲಿಯ ತಲೆ ಸವರುತ್ತಾ ಸಮಾಧಾನ ಮಾಡುತ್ತಾ "ನೋಡಾ ಕುಟ್ಯಾಲಿ... ಈ ನೆಲ, ಆ ಕಾಡು, ಆ ಕಡಲು ಮೇಲಿರುವ ಬಾನ ಯಾರಪ್ಪಂದೋ ಅಲ್ಲ... ನಮ್ಮನ್ನೆಲ್ಲ ಸುಖವಾಗಿಡಬೇಕೂಂತ ನಿಮ್ಮ ಅಲ್ಲಾಹ ಕೊಟ್ಟಿದ್ದಷ್ಟೆ"[೪೪] ಒಟ್ಟಾರೆ ಅವನ ಮಕ್ಕಳು ಸುಖವಾಗಿರಬೇಕೂಂತ ಎಂದು ಹೇಳುತ್ತಾರೆ. "ಅಲ್ಲಾಹ ಬೇರೆಯಲ್ಲ ನಮ್ಮ ವೆಂಕಟ್ರಮಣ ದೇವರು ಬೇರೆಯಲ್ಲ. ದೇವರು ಒಬ್ಬನೇ ಅವನನ್ನು ಬೇರೆ ಬೇರೆ ಹೆಸರಿನಿಂದ ಕರೆಯುವುದಷ್ಟೇ".[೪೫] ಎನ್ನುತ್ತಾರೆ.

ಈ ಭೂಮಿ, ಆಕಾಶ, ನೀರು ಯಾರ ಸ್ವತ್ತು ಅಲ್ಲ. ಅದು ಎಲ್ಲರಿಗೂ ಸೇರಿದ್ದು. ನಮ್ಮ ಸಂಪ್ರದಾಯಗಳು, ಭಿನ್ನ ಭಾಷೆಗಳು ಬೇರೆ ಬೇರೆ. ಒಂದು ವಸ್ತುವನ್ನು ನಾವು ಬೇರೆ ಬೇರೆ ಭಾಷೆಗಳಲ್ಲಿ ಬೇರೆ ಬೇರೆ ಹೆಸರಿಂದ ಕರೆಯುತ್ತೇನೆ ಎಂಬ ಅಂಶವನ್ನು ಆತನಿಗೆ ಅರ್ಥವಾಗುವ ಹಾಗೆ ಅಜ್ಜಯ್ಯ ಭಟ್ಟರು ಬಿಡಿಸಿ ಹೇಳುತ್ತಾರೆ. ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಹೇಳುವುದರ ಮೂಲಕ ಪುಟ್ಟ ಮನಸ್ಸಿನಲ್ಲಿದ್ದ ಗೊಂದಲವನ್ನು ಬಗೆಹರಿಸುತ್ತಾರೆ. ಹೀಗೆ ಭಿನ್ನ ಸಂಸ್ಕೃತಿಯ ಜನರು ಮುಖಾಮುಖಿಯಾಗುವ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಯನ್ನು ಅದರ ಪರಿಹಾರವನ್ನು ಈ ಕತೆಯು ಧ್ವನಿಸುತ್ತದೆ.

“ಮೀಯುವ ಆಟ” ಕತೆ ತುಳುನಾಡಿನ ಭಾವೈಕ್ಯತೆಯನ್ನು ಸಾರುವ ಕತೆ. ಹಿಂದೂ ಮುಸ್ಲಿಂರ ನಡುವೆ ಯಾವ ರೀತಿಯ ಸೌಹಾರ್ದತೆ ಇತ್ತು ಎಂಬುದನ್ನು ಹೇಳುತ್ತದೆ. ವೆಂಕಪ್ಪ ಶೆಟ್ಟರು ತಮ್ಮ ಮಗಳು ಸುಮತಿ ಬಾಣಂತನಕ್ಕೆ ನೀರು ಕಾಯಿಸಲು ಜನಬೇಕಾಗಿತ್ತು. ಆದರೆ ಒಕ್ಕಲುತನ ಮಾಡುತ್ತಿದ್ದವರನ್ನು ಕೇಳಿದಾಗ ಯಾರೂ ಒಪ್ಪುವುದಿಲ್ಲ. ಆದರೆ ಖಾದ್ರಿ ಬ್ಯಾರಿ ಹತ್ತಿರ ಕೇಳಿದಾಗ ಅವರು ಒಪ್ಪಿಕೊಳ್ಳುತ್ತಾರೆ. ಖಾದ್ರಿ ಬ್ಯಾರಿ ಸುಮತಿ ತನ್ನ ಮೊಮ್ಮಗಳಿದ್ದಂತೆ ಎಂದು ನೀರು ಕಾಯಿಸಲು ಒಪ್ಪಿಕೊಳ್ಳುತ್ತಾರೆ. ಸುಮತಿಯ ತಾಯಿ ಉಮ್ಮಕ್ಕೆ ಸೌದೆ ವಿಚಾರವಾಗಿ ಸ್ಯಾಬರನ್ನು ಈ ರೀತಿ ಬೈಯ್ಯುತ್ತಾಳೆ. “ಒಲೆಗಂಟಲಿಗೆ ನಾಲ್ಕು ಬಾಯಿ ಸೌದೆ ತುರುಕಿದರೆ ಸಾಕು ಸ್ಯಾಬೆರೇ; ಸಾಕು ಉರಿ ನಿಲ್ಸಿ... ಉಗುರು ಬಿಸಿ ಸಾಕು... ಮೀಯಲಿಕ್ಕಿರುವುದು ಮಗು ಬಾಣಂತಿ ಅಷ್ಟೇ”...[೪೬] ಎಂದು ಹೇಳಿದಾಗ ಬೇಸರಗೊಳ್ಳದೇ ಖಾದ್ರಿ ತಮ್ಮ ಕೆಲಸವನ್ನು ಮಾಡುತ್ತಾರೆ. ತಮ್ಮ ಆತ್ಮ ಗೌರವಕ್ಕೆ ಆದ ಅವಮಾನವನ್ನು ಶಮನ ಮಾಡಿಕೊಳ್ಳಲು ನಿರ್ಧರಿಸಿ ತಮ್ಮ ಮನೆಯಂಗಳಕ್ಕೆ ಹೊಕ್ಕವರು ತನ್ನ ಮೊಮ್ಮಗಳ ಜೋಹರನ ತೊಡೆಗೆ ತಲೆ ಒರಗಿಸಿ ಮಲಗಿ ಪ್ರಾಣಬಿಡುತ್ತಾರೆ.

ಈ ಸುದ್ದಿ ಊರಲ್ಲೆಲ್ಲ ಹರಡಿ “ನಾಕು ಮಂದಿಗೆ ಬೇಕಾಗಿ ಬದುಕಿದ ಜೀವಕ್ಕೆ ಇಂಥ ಸಾವಲ್ಲದೆ, ಅಲ್ಲಾಹು ಬೇರೆಂಥ ಸಾವು ಕರುಣಿಸುತ್ತಾರೆ? ಒಟ್ಟಿನಲ್ಲಿ ಇವು ಪುಣ್ಯಾತ್ಮರಪ್ಪ. ನಮಗೂ ಹೀಗೆಯೇ ಸದ್ದಿಲ್ಲದ ಸಾವು ಬರಲಿ”[೪೭] ಎಂದು ಜಾತಿಭೇದವಿಲ್ಲದೆ ಎಲ್ಲರೂ ಬಂದು ಖಾದ್ರಿ ಬ್ಯಾರಿಯವರಿಗೆ ಅಂತಿಮ ನಮನ ಸಲ್ಲಿಸತೊಡಗಿದ್ದರು. ಸುದ್ದಿ ತಿಳಿದ ವೆಂಕಪ್ಪ ಶೆಟ್ಟರು ಖಾದ್ರಿ ಬ್ಯಾರಿ ಮನೆಗೆ ಬಂದಾಗ ಸತ್ತ ದೇಹವನ್ನು ಮೀಯಿಸಲು ಮೊಮ್ಮಕ್ಕಳು ಸೌದೆ ಹಾಕಿ ನೀರು ಕಾಯಿಸಲು ಕಷ್ಟ ಪಡುತ್ತಿರುವುದನ್ನು ನೋಡಿ

ತಮ್ಮ ಮನೆಯಿಂದಲೇ ಸೌದೆಯನ್ನು ತಂದು ಹಾಕಿ ಅವರಿಗೆ ನೀರು ಕಾಯಿಸುವುದರಲ್ಲಿ ಸಹಾಯ ಮಾಡುತ್ತಾರೆ. ಈ ಕತೆಯಲ್ಲಿ ಭಿನ್ನ ಜಾತಿ, ಧರ್ಮ, ಸಂಸ್ಕೃತಿಯನ್ನು ಅನುಸರಿಸುವ ಜನರ ಮಧ್ಯೆ ಪ್ರೀತಿ, ವಿಶ್ವಾಸ, ಮಾನವೀಯತೆ, ಸೌಹಾರ್ದತೆ ಇದೆ ಎಂಬುದನ್ನು ಲೇಖಕಿ ಈ ಕತೆಯಲ್ಲಿ ಚಿತ್ರಿಸಿದ್ದಾರೆ.

"ಒಡಲು" ಕಥೆಯು ಕೋಮು ಸೌಹಾರ್ದತೆ ಮತ್ತು ಸಂಘರ್ಷ ಎರಡನ್ನು ಬಿಚ್ಚಿಡುತ್ತಾ ಹೋಗುತ್ತದೆ. ಈ ಕತೆಯ ನಾಯಕ ಸೈಯದ್ದಿ ಮತ್ತು ಮಂಜು ಮರಕಾಲ್ತಿ ಅಕ್ಕಪಕ್ಕದ ಮನೆಯವರು. ಮಂಜು ಮರಕಾಲ್ತಿಯ ಮೊಮ್ಮಗ ಕೇಶವನಿಗೆ ಎದೆಹಾಲು ಕುಡಿಸುವವಳು ಸೈಯದ್ದಿಯ ಹೆಂಡತಿ ನಫೀಸಮ್ಮ. ಮಂಜು ಮರಕಾಲ್ತಿ ಮೀನು ಮಾರಲು ಹೋಗುವಾಗ ಕೇಶವನನ್ನು ನಫೀಸಮ್ಮ ನ ಜೊತೆ ಬಿಟ್ಟು ಹೋಗುತ್ತಾಳೆ. ತಾಯಿ ದಿಕ್ಕಿಲ್ಲದ ಕೇಶವನನ್ನು ಆಕೆ ತನ್ನ ಮಗನಂತೆ ಆರೈಕೆ ಮಾಡುತ್ತಾಳೆ. ಇದು ಮರಕಾಲ ಬಂದು ಬಾಂಧವರಿಗೆ ಸಹಿಸಲು ಸಾಧ್ಯವಾಗುವುದಿಲ್ಲ. ಸೈಯದ್ದಿ ಉಳ್ಳಾಲ ಉರೂಸ್‌ಗೆ ಹೋಗಿದ್ದರ ಪರಿಣಾಮ ರಂಪಣಿ ತಂಡೇಲರಲ್ಲುಂಟಾದ ತೀವ್ರ ಅಸಮಾಧಾನ, ಅಸಹನೆ, ಅಕ್ರೋಶ ಮತ್ತದಕ್ಕೆ ಕಾರಣವನ್ನು ಮಂಜು ಮರಕಾಲ್ತಿ ಹತ್ತಿರ ಎಳೆ ಎಳೆಯಾಗಿ ಬಿಚ್ಚಿಡುತ್ತಾನೆ.

ಸೈಯದ್ದಿ ಬಗ್ಗೆ ರಂಪಣಿ ತುಂಡೇಲರು ಮಂಜು ಮರಕಾಲ್ತಿಯ ಮನೆಗೆ ಬಂದು ದೂರು ನೀಡಿ ಕೂಗಾಡಿ ಹೋಗುತ್ತಾರೆ. ಹೇಗಾದರೂ ಮಾಡಿ ಸೈಯದ್ದಿಯನ್ನು ಇಲ್ಲಿಂದ ಓಡಿಸಬೇಕು ಎಂದು ಮಂಜು ಮರಕಾಲ್ತಿಯ ತಮ್ಮ ಕಾಂತು ತುಂಡೇಲ ಕುತಂತ್ರ ಮಾಡುತ್ತಾನೆ. ಆತ ಸೈಯದ್ದಿಗೆ ಕೇಳಿಸುವಂತೆ ಪದ್ಮ ಕರ್ಕೇರನಲ್ಲಿ ಈ ರೀತಿ ಹೇಳುತ್ತಾನೆ. "ಇಂವ ಆ ಮುದುಕಿಯನ್ನು ಒಳಹಾಕಿಕೊಂಡು ಬ್ಯಾರಿ ಜಾತಿಗೆ ಸೇರಿಸಿಕೊಂಡಾಯ್ತು, ಇದೀಗ ಆ ಹಸುಗೂಸನ್ನು ತನ್ನ ಜಾತಿಗೆ ಸೇರ್ಸುದಕ್ಕೆ ಎದೆಹಾಲಿನಿಂದಲೇ ಅಭ್ಯಾಸ ಶುರು ಮಾಡ್ತಿದಾನೆ ಚಾಂಡಾಲ.... ಆ ಹಾಲು ಹೋಗಿ ಸೇರುದೆಲ್ಲಿಗೆ... ನಮ್ಮದೇ ರಕ್ತಕ್ಕಲ್ವನಾ..."[೪೮] ಎಂದಾಗ ಕಾಂತು ತುಂಡೇಲನ ಕೊಳಕು ಒಡಲ ಈ ಮಾತು ಕೇಳಿ ಸೈಯದ್ದಿಯ ಎದೆಯೊಡೆದಂತಾಯ್ತು. ಇದರಿಂದ ಬೆದರಿ ನಾಳೆಯೊಳಗೆ ಈ ಮನೆ ಖಾಲಿ ಮಾಡಿ ಉಳ್ಳಾಲಕ್ಕೆ ಹಿಂದಿರುಗಬೇಕೆಂದು ತೀರ್ಮಾನಿಸಿ ನಫೀಸಮ್ಮನಿಗೆ ತಿಳಿಸುತ್ತಾನೆ. ಅದಕ್ಕೆ ಹಾಲು ಕುಡಿಯುವ ಹಸುಕೂಸು ಕೇಶವನನ್ನು ಬಿಟ್ಟು ಮನೆ ಖಾಲಿ ಮಾಡುವ ಗಂಡನ ನಿರ್ಧಾರಕ್ಕೆ ಆಕೆ ಒಪ್ಪುವುದಿಲ್ಲ. ಆದರೆ ಸೈಯದ್ದಿ ತನ್ನ ನಿರ್ಧಾರವನ್ನು ಸಡಿಲಿಸದೇ ಮಂಜು ಮರಕಾಲ್ತಿಗೆ ತಿಳಿಸಲು ಹೋಗುತ್ತಾನೆ. ಆಕೆಯ ಕಾಲಿಗೆ ನಮಸ್ಕರಿಸಿ ತಾನು ಉಳ್ಳಾಲಕ್ಕೆ ಮರಳುವ ವಿಚಾರವನ್ನು ಆಕೆಯೆದುರಿಗಿಡುತ್ತಾನೆ. ಆಗ ಆಕೆ ಸೈಯದ್ದಿಯ ತಲೆಸವರುತ್ತಾ

"ಹೊರಡು ಮಗ... ನಿನ್ನ ಜತೆಯಲ್ಲೇ ಬರುವವಳು... ಈ ಮುದಿ ಜೀವ ಎಲ್ಲಿದ್ದರೇನಂತೆ... ನನ್ನ ಕೇಶವನಿಗೊಂದು ತಾಯಿ ಪಲಿ ಸಿಕ್ಕಿದರೆ ಸಾಕು.... ತಗೋ ಈ ಜೀಗದ ಕೈ..." ಎನ್ನುತ್ತಾಳೆ. ಸೈಯದ್ದಿ ತನ್ನ ನಿರ್ಧಾರವನ್ನು ಬದಲಿಸುತ್ತಾನೆ. ಮಾನವೀಯತೆ ಜಾತಿ ಧರ್ಮಕ್ಕಿಂತ ಮಿಗಿಲಾದುದು ಎಂಬುದನ್ನು ಈ ಕತೆಯಲ್ಲಿ ಕಾಣಬಹುದು.

**೫.೩. ವಿಮೋಚನೆಯ ನೆಲೆ :**

ಕರಾವಳಿ ಮಹಿಳಾ ಕಥಾ ಸಾಹಿತ್ಯದಲ್ಲಿ ಅಸ್ಮಿತೆಯ ಅರಿವನ್ನು ಮೂಡಿಸುವ ಕತೆಗಳು ರಚನೆಯಾಗಿವೆ. ಮಹಿಳೆಗೆ ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯವು ಆತ್ಮಾಭಿಮಾನವನ್ನು ಮತ್ತು ಆತ್ಮಸ್ಥೈರ್ಯವನ್ನು ಹೆಚ್ಚಿಸಲು ಕಾರಣವಾಗುತ್ತದೆ. ಸಾಂಪ್ರದಾಯಿಕ ಚಿಂತನೆಗಳು ಹೆಣ್ಣಿಗೆ ಸಹನೆ, ಕ್ಷಮಾಗುಣಗಳು ರಕ್ತಗತವಾಗಿರುವುದು ಎಂಬ ಚಿಂತನೆಗಳು ಇನ್ನೂ ಅಸ್ತಿತ್ವದಲ್ಲಿರುವುದು ಕೆಲವು ಕತೆಗಳಲ್ಲಿ ಕಂಡುಬರುತ್ತವೆ. ಸ್ತ್ರೀ ಪಾತ್ರಗಳು ವ್ಯವಸ್ಥೆಯು ತಮಗೆ ವಿಧಿಸಿರುವ ನಿರ್ಬಂದ ಮತ್ತು ಗಡಿರೇಖೆಗಳನ್ನು ಮೀರಲು ಯತ್ನಿಸುತ್ತವೆ. ವಿದ್ಯಾವಂತರಾಗಿ ಸ್ವತಂತ್ರವಾಗಿ ಆಲೋಚಿಸಿ ನಿರ್ಧಾರ ಕೈಗೊಳ್ಳಬಲ್ಲ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ ಹೆಣ್ಣು ಮಕ್ಕಳು ಲೇಖಕಿಯರ ಕತೆಗಳಲ್ಲಿ ಕಾಣಸಿಗುತ್ತಾರೆ. ಅವರು ತಮಗಾದ ಅನ್ಯಾಯಕ್ಕೆ ಕೊರಗುತ್ತಾ ಕೂರದೆ, ಮೈಕೊಡವಿ ಎದ್ದು ಕಾರ್ಯಪ್ರವೃತರಾಗುವ ಸ್ವಾವಲಂಬಿ ಮಹಿಳೆಯರಿದ್ದಾರೆ. ಮಹಿಳೆಯ ಒಳಗಿನ ದುಡಿಮೆಗೆ ತಕ್ಕ ಮನ್ನಣೆ ಸಿಕ್ಕಿ ಹೊರಗಿನ ದುಡಿಮೆಗೆ ಗೌರವ ದೊರಕಿದಾಗ ಮಾತ್ರ ಮಹಿಳೆ ನಿರಾಳವಾಗಿ ಬದುಕನ್ನು ಎದುರಿಸಲು ಸಮರ್ಥಳಾಗುತ್ತಾಳೆ. ಮಹಿಳೆಗೆ ದೊರೆತ ಶಿಕ್ಷಣದಿಂದಾಗಿ ತನಗಾಗುತ್ತಿರುವ ಅನ್ಯಾಯವನ್ನು ಅರ್ಥಮಾಡಿಕೊಳ್ಳಲು, ಪ್ರಶ್ನಿಸಲು, ಪ್ರತಿರೋಧವನ್ನು ವ್ಯಕ್ತಪಡಿಸಲು ಇಂದು ಆಕೆಗೆ ಸಾಧ್ಯವಾಗುತ್ತಿದೆ.

ಎಚ್. ನಾಗವೇಣಿಯವರ "ಸಿರಿ ತೋರಿದ ದಾರಿ" ಕತೆಯಲ್ಲಿ ಸಿರಿಯು ಸತ್ಯನಾಪುರದ ಅರಮನೆಯ ಅಜ್ಜಯ್ಯ ಬೇರ್ಮಾ ಆಳ್ವರ ಮೊಮ್ಮಗಳು. ಆಕೆಗೆ ಕಾಂತು ಪೂಂಜನೊಂದಿಗೆ ಮದುವೆ ನಿಗದಿಯಾಗುತ್ತದೆ ಮದುವೆಯ ಮುಹೂರ್ತ ಸಮೀಪಿಸುವ ಸಂದರ್ಭದಲ್ಲಿ ಅಜ್ಜಯ್ಯನಿಂದ ಮೊಮ್ಮಗಳಿಗೆ ಹೂ ಸೀರೆ ಕೊಡಿಸುವ ಮುನ್ನ ಊರ ಬಂಟರ ಹೆಂಗಸರು ಸಿರಿಯ ಕೈಗೆ ಒಂದು ಕವಳೆ ವೀಳ್ಯದೆಲೆ ಅಡಿಕೆಯ ಜತೆಗೆ ಬೆಳ್ಳಿಯ ಗೆಜ್ಜೆ ಕತ್ತಿ ನೀಡಿದರು. ಆ ಗೆಜ್ಜೆ ಕತ್ತಿ ಸಿರಿಯ ಸೊಂಟದಲ್ಲಿ ಸೇರಿದೊಡನೆ ಆಕೆಯ ಹೆಣ್ತನಕ್ಕೆ ನೈತಿಕ ಬಲಬಂತು. ಅದು ಬಂಟರ ಹೆಣ್ಣುಗಳ ದಿಟ್ಟತನದ ಪ್ರತೀಕವಷ್ಟೇ ಆಗದೆ,

ಅನ್ಯಾಯ ಶೋಷಣೆಯನ್ನು ಮಟ್ಟ ಹಾಕುವಂತಹ ಸಂಕೇತವು ಆಗಿದೆ ಎಂದು ಅಜ್ಜಯ್ಯ ಆಕೆಯ ಕಿವಿಯೂದಿದರು.

ಮದುವೆ ಆದ ಮೇಲೆ ಅಜ್ಜಯ್ಯ ಮೊಮ್ಮಗಳಲ್ಲಿ 'ಸತ್ಯವನ್ನು ಬೆಳಗುವ ಮಗಳಾಗು... ಹೆಣ್ಣು ಮಕ್ಕಳಿಗೆ ದಾರಿ ತೋರಿಸುವ ದೀಪವಾಗು'[೫೦] ಎಂದು ಹಾರೈಸಿ ಮಗಳನ್ನು ಬೀಳ್ಕೊಟ್ಟರು ನಂತರ ಗಂಡನ ತಲೆಹಿಡುಕ ಬುದ್ಧಿಯನ್ನು ಅರಿತ ಸಿರಿ ಅದನ್ನು ವಿರೋಧಿಸುತ್ತಾಳೆ. ಸೀಮಂತಂಕ್ಕೆ ಅತ್ತೆ ಹೂ-ಸೀರೆ ಕೊಟ್ಟಾಗ "ಪೇಟೆಯ ಸಿದ್ದು ಉಟ್ಟು ಬಿಟ್ಟ ಸೀರೆಯನ್ನು ಈ ಸತ್ಯದ ಸಿರಿ ಉಡುವುದಕ್ಕೆ ಸಾಧ್ಯವೇ ಅಜ್ಜಯ್ಯ"[೫೧] ಎಂದು ಅದನ್ನು ಎಸೆಯುತ್ತಾಳೆ. ಅಜ್ಜಯ್ಯ ತೀರಿದಾಗ ದೂರದ ಅಳಿಯ ಶಂಕರಾಳ್ವನೆಂಬವ ಇದ್ದಕ್ಕಿದ್ದಂತೆ ಬಂದು ಅಜ್ಜಯ್ಯನ ಆಸ್ತಿಗೆ ವಾರೀಸುದಾರನೆಂದು ಹೇಳಿ ಹಕ್ಕು ಮಂಡಿಸಿದಾಗ ಸಿರಿಯ ಪಿತ್ತ ಕೆರಳಿತು. ಬಂದವನೇ ಆಸ್ತಿಯ ಒಡೆತನ ಕೊಡದಿದ್ದರೆ ಅಜ್ಜಯ್ಯನ ಶವಸಂಸ್ಕಾರಕ್ಕೆ ಅವಕಾಶ ಕೊಡುವುದಿಲ್ಲವೆಂದು ಬೆದರಿಕೆ ಹಾಕಿದಾಗ ಸಿರಿ ಸಿಟ್ಟಿನಿಂದ ರಣಚಂಡಿಯಾಗುತ್ತಾಳೆ.

"ಗಂಡು ದಿಕ್ಕಿಲ್ಲದ ಹೆಣ್ಣೆಂದು ದರ್ಪ ತೋರಿಸುತ್ತಿಯೇನೋ ನೀಚ... ಇದೇ ಗೆಜ್ಜೆಕತ್ತಿಯಿಂದ ನಿನ್ನ ಎದೆ ಸೀಳಿ ರಕ್ತ ಕಾರಿಸಿಯೇನು...."[೫೨] ಎಂದು ಸಿಟ್ಟನ್ನು ಹೊರಹಾಕುತ್ತಾಳೆ. ಅಜ್ಜಯ್ಯನ ಶವಸಂಸ್ಕಾರವನ್ನು ತಾನೇ ಮಾಡುತ್ತಾಳೆ. ನಂತರ 'ಪತ್ತೇರಿ ಕೂಟ'ದಿಂದ ಸಿರಿಗೆ ಓಲೆ ಬರುತ್ತದೆ. ನ್ಯಾಯ ಕೂಟದಲ್ಲಿ ಊರಿನ ಹತ್ತು ಸಮಸ್ತರು ಹೆಣ್ಣಿಗಿರುವ ಆರ್ಥಿಕ ಮತ್ತು ನೈತಿಕ ಚೌಕಟ್ಟಿನ ಬಗ್ಗೆ ತಿಳಿಹೇಳುತ್ತಾರೆ. ಸತ್ಯನಾಪುರದ ಅರಮನೆಯ ಯಜಮಾನಿಕೆಯನ್ನು ಗಂಡುವಿಗೆ ಕೊಡಬೇಕು ಅಡುಗೆ ಮನೆಯ ಪಟ್ಟ ನಿನಗೆ ಎಂದು ಪತ್ತೇರಿಕೂಟ ನ್ಯಾಯ ಹೇಳಿದಾಗ ಗಂಡ ಕಾಂತುಪೂಂಜನು ಸಮರ್ಥಿಸುತ್ತಾನೆ. ಆಗ ಇಡೀ ಪುರುಷ ಸಮೂಹ, ಜೊತೆಗೆ ಕೈಹಿಡಿದ ಗಂಡನೂ ಸೇರಿದಂತೆ ಹೆಣ್ಣೊಬ್ಬಳಿಗೆ ಮಾಡಿದ ಅನ್ಯಾಯವನ್ನು ವಿರೋಧಿಸುತ್ತಾಳೆ. ಅಲ್ಲದೇ ನ್ಯಾಯಕೂಟದಲ್ಲಿ ಗಂಡನಲ್ಲಿ ತನಗೆ ವಿಚ್ಛೇದನ ಕೊಡುವಂತೆ ಒತ್ತಾಯಿಸುತ್ತಾಳೆ. ವಿಚ್ಛೇದನ ಪಡೆದ ನಂತರ ಮರುಮದುವೆ ಆಗುತ್ತಾಳೆ. ಇಲ್ಲಿ ಸಿರಿ ಸ್ತ್ರೀ ಸಬಲತೆಗೆ ಮಾದರಿಯಾಗುತ್ತಾಳೆ. ವಿಚ್ಛೇದಿತ ಮಹಿಳೆಯು ಮತ್ತೊಮ್ಮೆ ಬಾಳುವ ಸಾಧ್ಯತೆಯಿದೆ ಎನ್ನುವ ಅಂಶ ಈ ಕತೆಯಲ್ಲಿ ಮುಖ್ಯವಾಗುತ್ತದೆ.

ಗಂಗಾಪಾದೇಕಲ್‌ರವರ 'ಚಕ್ರ' ಕತೆಯಲ್ಲಿ ವಸುಧಾಳ ಸೌಂದರ್ಯಕ್ಕೆ ಮರುಳಾಗಿ ಮದುವೆಯಾದ ಶ್ರೀಧರನ ಸ್ವಭಾವ ದುಂಬಿಯಂತೆ. ಅತ್ತೆಗೆ ಶ್ರೀಮಂತಿಕೆಯ ಅಹಂಕಾರ. ತವರು ಮನೆಯಿಂದ ಆಸ್ತಿ

ತರುವಂತೆ ಗಂಡ ಶ್ರೀಧರ, ಅತ್ತೆ ಒತ್ತಾಯಿಸಿದಾಗ ಅದಕ್ಕೆ ವಸುಧಾ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಆಗ ಆತ ಆಕೆಯನ್ನು ಬಸುರಿಯೆಂಬುದನ್ನು ಲೆಕ್ಕಿಸದೆ ಹೊಟ್ಟೆಗೆ ಒದೆಯುತ್ತಾನೆ. ಇದರಿಂದ ನೊಂದು ಮನೆಬಿಟ್ಟು ಹೊರನಡೆಯುತ್ತಾಳೆ. ಎರಡನೇ ಮದುವೆಯಾದವಳು ಮೂರು ಮಕ್ಕಳನ್ನು ಬಿಟ್ಟು ಸತ್ತು ಹೋದಾಗ ಶ್ರೀಧರನಿಗೆ ವಸುಧಾಳ ನೆನಪಾಗುತ್ತದೆ. "ನಿನಗೆ ಮಾಡಿದ ಅನ್ಯಾಯಕ್ಕೆ ದೇವರೇ ನನಗೆ ಶಿಕ್ಷೆ ಕೊಟ್ಟ... ನನ್ನ ಮಕ್ಕಳಿಗೆ ತಾಯಿಯಾಗಿ ಬರುತ್ತೀಯಾ".[೫೩] ಎಂದಾಗ ಹಿಂದಿನ ಘಟನೆಗಳು ನೆನಪಾಗಿ 'ಇಲ್ಲ ನಾನು ತಾಯಿಯಾಗಲಾರೆ. ನನ್ನ ತಾಯ್ತನಕ್ಕೆ ಕೊಳ್ಳಿ ಒಟ್ಟ ರಕ್ಕಸರಲ್ಲವೆ ನೀವು? ಈಗೇಕೆ ಬಂದಿರಿಲ್ಲಿಗೆ? ನಡೆಯಿರಿ ಇಲ್ಲಿಂದ ಎನ್ನುತ್ತಾಳೆ'.[೫೪] ಗಂಡ ಮತ್ತು ಅತ್ತೆಯರಿಂದ, ದೌರ್ಜನ್ಯಕ್ಕೊಳಗಾಗುವ ವಸುಧ ತನ್ನ ಬದುಕನ್ನು ರೂಪಿಸಿಕೊಳ್ಳಲು ನಡೆಸುವ ಹೋರಾಟದಿಂದ ಗಟ್ಟಿಯಾಗಲು ಸಾಧ್ಯವಾಗುತ್ತದೆ. ಬದುಕಿನ ಅನುಭವ, ಆರ್ಥಿಕ ಸ್ವಾವಲಂಬನೆಗಳು ಸ್ವಾಭಿಮಾನ ಪುಟಿದೇಳಲು ಸಹಾಯವಾಗುತ್ತದೆ.

ಸಮಾಜವು ಮಹಿಳೆಯ ಮೇಲೆ ಹೇರುತ್ತ ಬಂದಿರುವ ಮೂಲವ್ಯವಸ್ಥೆಯ ಕಾರಣದಿಂದಾಗಿ ಅವಳ ಮೇಲೆ ನಡೆಯುವ ಲೈಂಗಿಕ ಆಕ್ರಮಣ ಅವಳ ಬದುಕನ್ನು ಒಂದು ಕ್ಷಣದಲ್ಲಿ ಮಣ್ಣುಗೂಡಿಸುತ್ತದೆ. ಹಲವಾರು ಕಾರಣಗಳಿಂದಾಗಿ ಇಂಥ ದೌರ್ಜನ್ಯಕ್ಕೆ ಒಳಗಾಗುವರ ಸಂಖ್ಯೆ ದಿನೇ ದಿನೇ ವೃದ್ಧಿಸುತ್ತಿದೆ. ಇದು ನಾಗರಿಕ ಸಮಾಜವನ್ನು ತಲ್ಲಣಗೊಳಿಸುವ ಮಟ್ಟದಲ್ಲಿ ಹೆಚ್ಚಾಗುತ್ತಿದೆ. ಸೂಕ್ಷ್ಮ ಸಂವೇದನೆಯ ಲೇಖಕಿ ಗಂಗಾಪಾದೇಕಲ್‌ರವರಿಗೆ ಇದು ನೋವನ್ನುಂಟು ಮಾಡುವ ಸಮಸ್ಯೆಯಾಗಿದೆ.

"ಈ ನಮ್ಮ ನಾಡಿನಲ್ಲಿ" ಎಂಬ ಕತೆಯಲ್ಲಿ ರಜನಿ ಅತ್ಯಾಚಾರಕ್ಕೆ ಪೊಲೀಸ್ ಠಾಣೆಯಲ್ಲಿ ಬಲಿಯಾಗುತ್ತಾಳೆ. ಮದುವೆ ನಿಶ್ಚಯವಾಗಿದ್ದ ಆಕೆ ಮಾಧವನೊಂದಿಗೆ ಸಿನಿಮಾ ನೋಡಿಕೊಂಡು ಬರುತ್ತಿರುವಾಗ ಅವರನ್ನು ಸಂಶಯದಿಂದ ಪೇದೆಗಳು ಠಾಣೆಗೆ ಕರೆದೊಯ್ಯುತ್ತಾರೆ. ಅಲ್ಲಿ ಮೇಲಾಧಿಕಾರಿಯ ಕಾಮತೃಷೆಗೆ ರಜನಿ ಆಹಾರವಾಗುತ್ತಾಳೆ. ಅವಳಿಗಾದ ಅನ್ಯಾಯಕ್ಕೆ ಹೋರಾಟ ಮಾಡಿದಾಗ ಅಪರಾಧಿಗಳಿಗೆ ಶಿಕ್ಷೆಯಾಗುತ್ತದೆ. ಆದರೆ ಅವಳಿಗಾದ ಅನ್ಯಾಯದ ವಿರುದ್ಧ ಹೋರಾಡಿದ ಮಾಧವ ಆಕೆಯನ್ನು ಮದುವೆಯಾಗಲು ನಿರಾಕರಿಸುತ್ತಾನೆ. "ಶೀಲಗೆಟ್ಟವಳನ್ನು ಮದುವೆಯಾದವನು ಎಂದು ಜೀವನವಿಡೀ ಹೇಳಿಸಿಕೊಳ್ಳುತ್ತ ಬದುಕುವ ಆಸೆ ನನಗಿಲ್ಲ, ಅಂತಹದೊಂದು ದೊಡ್ಡ ಕಪ್ಪು ಕಲೆಯನ್ನು ನನ್ನ ಬಾಳಬಟ್ಟೆಯಲ್ಲಿ ಇರಿಸಿಕೊಳ್ಳುವಷ್ಟು ಮೂರ್ಖ ನಾನಲ್ಲ"[೫೫] ಎಂದು ರಜನಿಯ

ತಂದೆಯ ಬೇಡಿಕೆಗೆ ಈ ಮೇಲಿನ ಹೇಳಿಕೆಗಳನ್ನು ಕೊಡುತ್ತಾನೆ. ಇದು ಸಮಾಜದ ಧೋರಣೆಗೆ ಕನ್ನಡಿ ಹಿಡಿದಂತಿದೆ.

ಈ ಮಾತಿನಿಂದ ರಜನಿಯ ಭಾವನೆ ಬದಲಾಗುತ್ತದೆ, ಅಪರಾಧಿಗಳಿಗೆ ಶಿಕ್ಷೆಯಾಗಬೇಕೆಂದು ಹೋರಾಟದ ಮುಂಚೂಣಿಯಲ್ಲಿದ್ದ ಮಾಧವ ಊರಲ್ಲಿ ತನ್ನ 'ಹೀರೋ ಇಮೇಜ'ನ್ನು ಬೆಳೆಸಿಕೊಳ್ಳುತ್ತಾನೆ. ಅದೇ ಭಾವನೆಯಿಂದ ತನ್ನನ್ನು ಮದುವೆಯಾಗುವುದಕ್ಕಿಂತ ನಿರಾಕರಿಸಿದ್ದೇ ಸರಿಯೆಂದು ರಜನಿಗೆ ಅನಿಸುತ್ತದೆ. ನಂತರ ರಜನಿ ಹೊಸ ಪರಿಸರದಲ್ಲಿ ಬದುಕಬೇಕೆಂಬ ನಿರ್ಧಾರಕ್ಕೆ ಬಂದು ತನ್ನ ಊರನ್ನೇ ತ್ಯಜಿಸುತ್ತಾಳೆ. ಪೊಲೀಸರ ವಿರುದ್ಧ ಹೋರಾಡಿ ಪ್ರಜಾಪ್ರಭುತ್ವ ರಾಜ್ಯದಲ್ಲಿ ಎಲ್ಲರೂ ಸಮಾನರೇ' ಎಂದು ಹೇಳಿದ್ದ ಮಾಧವನಿಗೆ ರಜನಿ ಶೀಲಗೆಟ್ಟವಳಾಗಿ ಕಾಣುವಾಗ ಆಕೆ ಹೆಣ್ಣು ಎನ್ನುವುದು ಮುಖ್ಯವಾಗುತ್ತದೆ. ಪುರುಷನ ವಿಷಯಕ್ಕೆ ಬಂದಾಗ ಶೀಲಕ್ಕೆ ಪ್ರಾಧಾನ್ಯತೆ ನೀಡಲಾಗುತ್ತದೆಯೇ ಎನ್ನುವುದಕ್ಕೆ ಉತ್ತರ ಇಲ್ಲ, ಹೆಣ್ಣಿಗೊಂಡು ನ್ಯಾಯ ಪುರುಷನಿಗೊಂದು ನ್ಯಾಯವೇ? ಎಂಬ ದ್ವಿಮುಖ ನೀತಿಯನ್ನು ಕತೆ ಪ್ರಶ್ನಿಸುತ್ತದೆ. ಬದುಕಿನ ಕ್ರೂರ ವಾಸ್ತವವನ್ನು ಅರ್ಥ ಮಾಡಿಕೊಂಡು ಬೇರೆ ಪರಿಸರದಲ್ಲಿ ಬಾಳುವ ಛಲಹೊತ್ತು ಹೊರಟ ರಜನಿಯ ನಿರ್ಧಾರದಿಂದ ತಂದೆಗೆ ಸಮಾಧಾನವಾಗುತ್ತದೆ. ಆಕಸ್ಮಿಕವಾಗಿ ದೌರ್ಜನ್ಯಕ್ಕೆ ಒಳಗಾಗಿ ನಂಬಿದ್ದ ಗೆಳೆಯ ಕೈ ಬಿಟ್ಟಾಗ ಧೃತಿಗೆಡುವುದಿಲ್ಲ. ಬದುಕಿಗೊಂದು ಅರ್ಥ ಕಂಡುಕೊಳ್ಳುವ ಹೋರಾಟಕ್ಕೆ ಸಿದ್ಧಳಾಗುವ ಅವಳ ದೃಢತೆ ಮಹಿಳೆಯಲ್ಲಿರಬೇಕಾದ ಆತ್ಮವಿಶ್ವಾಸದ ಕುರುಹು ಆಗಿ ಈ ಕತೆಯಲ್ಲಿ ಚಿತ್ರಿತವಾಗಿದೆ.

ಗ್ರಾಮೀಣ ಮಹಿಳೆಯರ ಬದುಕಿನ ಸುತ್ತ ಹೆಣೆಯಲ್ಪಡುವ ಕತೆಗಳಲ್ಲಿ ಮಿತ್ರಾರವರು ಸ್ತ್ರೀಯರನ್ನು ಬಹಳಷ್ಟು ಕಡೆ ಸತ್ವಪೂರ್ಣ ದನಿಯೊಂದಿಗೆ ದಾಖಲಿಸುವ ಪ್ರಯತ್ನ ಮಾಡುತ್ತಾರೆ. ಯಜಮಾನ್ಯ ಸಂಸ್ಕೃತಿಯೊಳಗಿದ್ದುಕೊಂಡು ತಮ್ಮತನವನ್ನು ಕಳೆದುಕೊಳ್ಳದೆ ತಮ್ಮ ಅಸ್ತಿತ್ವವನ್ನು ಸಾರ್ವತ್ರಿಕಗೊಳಿಸುವ ತಾಕತ್ತು ಇವರ ಪಾತ್ರಗಳಿವೆ.

ಆಯ್ದ ಲೇಖಕಿಯರ ಕತೆಗಳ ಸ್ತ್ರೀಪಾತ್ರಗಳಲ್ಲಿ ಧೈರ್ಯ ಮತ್ತು ದಿಟ್ಟತನಗಳು ಪ್ರಧಾನ ಆಶಯಗಳಾಗಿ ಕಾಣಿಸುತ್ತವೆ. ಇದರಿಂದಾಗಿ ಸ್ತ್ರೀ ಪಾತ್ರಗಳು ವ್ಯವಸ್ಥೆಯು ತಮಗೆ ವಿಧಿಸಿರುವ ನಿರ್ಬಂಧ ಮತ್ತು ಗಡಿರೇಖೆಗಳನ್ನು ಮೀರಲು ಯತ್ನಿಸುತ್ತವೆ.

ಗಂಗಾ ಪಾದೇಕಲ್‌ದಲಿತ ಹಾಗೂ ಬಂಡಾಯ ಸಾಹಿತ್ಯದ ನಂತರದಲ್ಲಿ ಕಾಣಿಸಿಕೊಂಡ ಗಂಗಾ ಪಾದೇಕಲ್ ಕತೆಗಳಲ್ಲಿ ಪ್ರಗತಿಪರ ಚಿಂತನೆಯ ನಿರ್ಭೀತ ಸ್ತ್ರೀಯರ ಚಿತ್ರಣವಿದೆ. ಇವರ ಹೊಸ ಹೆಜ್ಜೆ ಕಥಾ ಸಂಕಲನದಲ್ಲಿ ಬರುವ 'ಬದುಕಿನ ಬೇರನ್ನರಸಿ' ಕಥೆಯಲ್ಲಿನ ಕುಸುಮಳ ತಂದೆ ತಾಯಿಯರು ಕಾಲವಾದ ನಂತರ ಆಕೆಯ ಅಣ್ಣ ಮದುವೆಯಾಗಿ ತಂಗಿಗೊಂದು ಕೆಲಸ ಕೊಡಿಸಿ ತಾನು ಬೇರೆ ಇದ್ದುಕೊಂಡು ಜವಾಬ್ದಾರಿಗಳಿಂದ ಕಳಚಿಕೊಳ್ಳುತ್ತಾನೆ. ಕುಸುಮ ತನ್ನ ತಂಗಿ ತಮ್ಮಂದಿರ ಜವಾಬ್ದಾರಿ ಹೊತ್ತು ಅವರನ್ನು ಸಾಕಿ ಅವರೆಲ್ಲರನ್ನು ಒಂದು ದಡ ಸೇರಿಸುತ್ತಾಳೆ.

ತನ್ನ ತಂಗಿಯ ನಿಧನದ ನಂತರ ಆಕೆಯ ಮಗ ಮಧುವನ್ನು ಸಾಕುತ್ತಾ ತನ್ನ ದುಃಖವನ್ನು ಏಕಾಂಗಿತನವನ್ನು ಕುಸುಮ ಮರೆಯುತ್ತಾಳೆ. ಮಧು ತಂದೆ ಎರಡನೇ ಹೆಂಡತಿಗೆ ಮಗು ಆಗುವುದಿಲ್ಲ ಎಂದು ತಿಳಿದ ನಂತರ ಮಧುವನ್ನು ಕರೆದೊಯ್ದಾಗ ಮತ್ತೆ ಏಕಾಂಗಿತನದ ದುಃಖಕ್ಕೆ ಆಕೆ ಒಳಗಾಗುತ್ತಾಳೆ. ಅವಳ ಅಣ್ಣ ಶ್ರೀಧರ ತನ್ನ ಬಾಸ್ ಮೂರ್ತಿ ಎಂಬಾತನೊಡನೆ ಎರಡನೇ ಸಂಬಂಧವಾಗಿ ಮದುವೆ ಆಗು ಎಂದಾಗ ಕುಸುಮ ಒಪ್ಪುವುದಿಲ್ಲ. ವಯಸ್ಸಾದ ಮಾತ್ರಕ್ಕೆ ಎರಡನೇ ಸಂಬಂಧವೇ ಗಟ್ಟಿ ಎನ್ನುವವರ ನಿರ್ಭಾವುಕ ನಿಲುವನ್ನು ತೀವ್ರವಾಗಿ ಪ್ರತಿರೋಧಿಸಿ ತನ್ನೂರಿನ ಬಾಲ್ಯದ ಗೆಳೆಯ ಕೃಷಿಕ ರಾಜಣ್ಣ ಎಂಬಾತನನ್ನು ಮದುವೆಯಾಗುವುದಾಗಿ ನಿರ್ಧರಿಸುತ್ತಾಳೆ. ಈ ಕತೆಯಲ್ಲಿ ಕುಸುಮಳ ಆತ್ಮಸ್ಥೈರ್ಯವನ್ನು ಕಾಣಬಹುದು.

'ಅನಾವರಣ' ಕತೆಯಲ್ಲಿ ಬರುವ ರಾಜುವಿಗೆ ಕೆನ್ನೆ ಬಾವು ರೋಗ ಬಂದು ಬಿಡುತ್ತದೆ. ಗಂಡು ಮಕ್ಕಳಿಗೆ ಕೆನ್ನೆ ಬಾವು ಬಂದರೆ ಕೆಲವೊಮ್ಮೆ ಸಂತಾನಹೀನತೆ ಬಂದು ಬಿಡುತ್ತದೆಂದು ಆತ ಎಲ್ಲೋ ಓದಿಕೊಂಡಿದ್ದ ವೈದ್ಯರ ಬಳಿ ವಿಚಾರಿಸಿದಾಗ ಕೆಲವೊಮ್ಮೆ ಹಾಗಾಗುವ ಸಾಧ್ಯತೆ ಇದೆ. ಬೇಕಾದರೆ ಪರೀಕ್ಷೆ ಮಾಡಿಸಿಬಿಡಿ ಅಂದರಂತೆ ಅದೇ ರೀತಿ ಪರೀಕ್ಷೆ ಮಾಡಿಸುತ್ತಾನೆ. ವೈದ್ಯಕೀಯ ವರದಿ ಅವನಿಗೆ ಮಕ್ಕಳಾಗುವ ಸಾಧ್ಯತೆ ಇಲ್ಲ ಎನ್ನುವುದು ತೋರಿಸುತ್ತದೆ.

ಇಷ್ಟಕ್ಕೆ ರಾಜು ಸಂಪೂರ್ಣ ಹತಾಶನಾಗಿ ಪಶ್ಚಾತ್ತಾಪ ಪಡಲಾರಂಭಿಸುತ್ತಾನೆ. ತನ್ನ ಹೆಂಡ್ತಿಯ ಬಗೆಗೆ ಯೋಚಿಸಿ ನೋವು ಅನುಭವಿಸಲಾರಂಭಿಸುತ್ತಾನೆ. ಹೆಣ್ಣಿಗೆ ಪರಿಪೂರ್ಣತೆಯ ಅನುಭವವಾಗುವುದು. ತಾಯ್ತನದಿಂದ ಅವಳ ಆ ಸುಖಕ್ಕೆ ಮುಳ್ಳಾಗಿ ಜೀವನವಿಡೀ ಅವಳ ಪಾಲಿಗೆ ನುಂಗಲಾರದ ಬಿಸಿ ತುಪ್ಪವಾಗಿ ಬದುಕಲು ನನ್ನಿಂದ ಸಾಧ್ಯವಿಲ್ಲ ಎಂದು ಹತಾಶನಾಗಿ ಆತ್ಮ ಹತ್ಯೆಗೆ

ಶರಣಾಗುತ್ತಾನೆ. ತನ್ನ ಸಾವು ಹೊರಜಗತ್ತಿಗೆ ಹೃದಯಾಘಾತವೆಂದೇ ತಿಳಿಯಲಿ ಎಂದು ಚೀಟಿ ಬರೆದಿಟ್ಟು ಸತ್ತಿದ್ದ.

ಅವನ ಮನದೊಳಗಿನ ಹಾರೈಕೆ ತನ್ನ ಹೆಂಡತಿ ಇನ್ನೊಂದು ಮದುವೆಯಾಗಿ ಮಕ್ಕಳೊಂದಿಗೆ ಸುಂದರ ಸಂಸಾರ ನಡೆಸಲಿ ಎಂದೇ ಆಗಿತ್ತು. ಹೆಣ್ಣುಮಕ್ಕಳು ಸ್ವಾವಲಂಬಿಗಳಾಗಬೇಕೆಂದು ಆತ ಹೇಳುತ್ತಿದ್ದ. ಅಂತೆಯೇ ಹತಾಶಳಾಗಿ ಮೂಲೆ ಸೇರಿದ್ದ ಅವನ ಹೆಂಡತಿ ಗಿರಿಜಾಳನ್ನು ಅವಳ ಮನೆಯವರು ಮುಂದೆ ಬಿ.ಎಡ್ ಓದಿಸುತ್ತಾರೆ.ಅವಳ ಮಾವನ ಮಗನೇ ಮುಂದೆ ಬಂದು ಅವಳನ್ನು ಮದುವೆಯಾಗಲು ಒಪ್ಪಿಕೊಳ್ಳುತ್ತಾನೆ.

ಅನುಪಮಾ ತನ್ನ ಕಥೆಗಳಲ್ಲಿ ಹೆಣ್ಣು ಪಾತ್ರ ಸೋತರೂ ಮೇಲಕ್ಕೆತ್ತಿ ದಿಟ್ಟತನ, ಛಲದಿಂದ ಬದುಕಿ ಬಾಳುವಂತೆ ಮಾಡುತ್ತಾರೆ. ಹೆಣ್ಣುಪಾತ್ರಗಳಿಗೆ ಮರುಜೀವ ತುಂಬುತ್ತಾರೆ. ಸ್ವಾತಂತ್ರ್ಯಮತ್ತು ಸ್ವಾವಲಂಬನೆಯ ದಾರಿ ತೋರಿಸಿ ಧೈರ್ಯ ತುಂಬಿ ಮುನ್ನಡೆಸುತ್ತಾರೆ. ಅಂಧಕಾರ ತುಂಬಿದ ಸ್ತ್ರೀ ಬದುಕಿನಲ್ಲಿ ಅಲ್ಲಲ್ಲಿ ಬೆಳಕು ತುಂಬಿ ಚೇತನ ನೀಡುತ್ತಾರೆ. ಸ್ವಾಭಿಮಾನದಿಂದ ಬಾಳುವಂತೆ ಮಾಡುತ್ತಾರೆ.

'ಹೊಸ ಹೆಜ್ಜೆ' ಕಥೆಯಲ್ಲಿನ ಲಲಿತೆ ಮೂಲ ನಕ್ಷತ್ರದಲ್ಲಿ ಜನಿಸಿದ ಕಾರಣ ಯಾವ ಗಂಡು ಮದುವೆಗೆ ಒಪ್ಪದೇ ಇದ್ದಾಗ, ಮದುವೆಗಾಗಿ ಕಾಯುತ್ತಾ ಕುಳಿತುಕೊಳ್ಳದೇ ತನ್ನ ಬದುಕನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳುವ ಒಂದು ಸಣ್ಣ ಪ್ರಯತ್ನವನ್ನು ಆಕೆ ಮಾಡುತ್ತಾಳೆ.

ತಮ್ಮನಿಗೆ ಲಗ್ನ ಮಾಡಿ ಬಿಡಿ ಎಂದು ಅಪ್ಪನಲ್ಲಿ ಕೇಳಿದಾಗ ಅಕ್ಕನಿಗಾಗದೆ ತಮ್ಮನಿಗೆ ಲಗ್ನ ಆಯಿತೆಂದರೆ ಅವಳಲ್ಲಿ ಎನೋ ತೊಂದರೆ ಇದೆ ಎಂದೇ ನಮ್ಮ ಸಮಾಜ ಅರ್ಥ ಮಾಡಿಕೊಳ್ಳುತ್ತದೆ. "ನೀನೆಷ್ಟಾದರೂ ಹೆಣ್ಣು ನಿನ್ನ ಲಗ್ನ ನಾಳೆ ಒಂದು ಸಮಸ್ಯೆಯಾಗಿ ಕಾಡುತ್ತೆ. ಆದರೆ ರಾಜ ನಿನ್ನ ಹಾಗಲ್ಲ ಎಂದಾಗ ಲಲಿತೆ ವ್ಯಂಗ್ಯದಿಂದ ಎಷ್ಟಾದರೂ ರಾಜ ಒಬ್ಬ ಹುಡುಗ ಅಲ್ಲವೇ ಅಪ್ಪ!"[೫೬] ಹಠಾತ್ತಾಗಿ ಅವಳು ಹಾಕಿದ ಪ್ರಶ್ನೆಯಿಂದ ಅನಂತಯ್ಯ, ರಾಜನಿಗೆ ಆಶ್ಚರ್ಯ ಹಾಗೂ ಅಷ್ಟೇ ಅಚ್ಚರಿ ಲಲಿತೆಗೂ ಉಂಟಾಗಿತ್ತು. ಯಾವತ್ತೂ ಅಪ್ಪನನ್ನು ವಿರೋಧಿಸಿ ಮಾತಾಡಿರದ ಲಲಿತೆಯಲ್ಲಿ ತಾನೂ ಆ ರೀತಿ ಮಾತಾಡಬಲ್ಲೆ ಎನ್ನುವ ವಿಶ್ವಾಸ ಧೈರ್ಯಗಳೂ ಹುಟ್ಟಿಕೊಂಡವು.

"ನನ್ನ ಲಗ್ನಕ್ಕಿಂತ ಮೊದಲೇ ರಾಜ ಲಗ್ನವಾದರೆ ನನ್ನಲ್ಲಿ ಏನೋ ನ್ಯೂನತೆ ಇದೆ ಎಂದೇ ಸಮಾಜ ಅರ್ಥವಿಸಿಕೊಂಡಿದೆ ಎಂದಿರಲ್ಲಪ್ಪ? ಸಮಾಜವೆಂದರೆ ಏನು? ನಾನು, ನೀವು, ರಾಜ, ನಮ್ಮಂತಹ ಎಲ್ಲರೂ ಸೇರಿದ ಒಂದು ಘಟಕ ತಾನೆ? ಆ ಸಮಾಜದ ಒಂದಂಗವಾಗಿರುವ ನೀವು ಇನ್ನಾದರೂ ನಿಮ್ಮ ಭಾವನೆಗಳನ್ನು ತುಸು ತಿದ್ದಿಕೊಳ್ಳಿ. ಅಪಾ, ಹೆಣ್ಣಿಗೆ ಮೊದಲು ವಿವಾಹವೆಂಬ ಕಟ್ಟೇಕೆ? ದೇವರ ದೃಷ್ಟಿಯಲ್ಲಿ ಗಂಡು ಹೆಣ್ಣು ಇಬ್ಬರೂ ಸಮಾನರೇ, ಗಂಡಿಗೆ ವಿವಾಹ ಒಂದು ಅಗತ್ಯ. ಅದೇ ಹೆಣ್ಣಿಗೆ ಅನಿವಾರ್ಯ ಎಂಬುವುದನ್ನು ಮಾಡಿಕೊಂಡದ್ದು ನಾವು ನಾವೇ. ಈಗಲೂ ಅದನ್ನು ಸಾಧಿಸಲು ಹೊರಟರೆ ಎಷ್ಟರ ಮಟ್ಟಿಗದು ಸರಿ ಎನಿಸಿಕೊಂಡಿತಪ್ಪಾ"[೫೭] ಎನ್ನುವಲ್ಲಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ನಂತರ ಮುಂದುವರೆದು ಎಳೆತನದಿಂದಲೇ ನೀನು ಹೆಣ್ಣು, ಅವನು ಗಂಡು ಎಂದು ಹೇಳುತ್ತಲೇ ನಮ್ಮನ್ನು ಬೆಳೆಸಿದ್ದೀರಿ. ಅದು ನಿಮ್ಮ ತಪ್ಪಲ್ಲವೆನ್ನಿ. ಹೆಣ್ಣಿನ ಬದುಕಿನ ಮುಖ್ಯ ಉದ್ದೇಶವೇ ಮದುವೆ, ಮನೆ, ಸಂಸಾರ,ಮಕ್ಕಳು ಎಂದು ನಿರ್ಣಯಿಸಿದ ಸಮಾಜದಲ್ಲಿಯೇ ನೀವೂ ಇದ್ದೀರಲ್ಲ. ಹಾಗೆಂದೇ ಅದನ್ನು ನೀವು ಪಾಲಿಸಿದಿರಿ!

"ಆದರೆ ಅಪ್ಪಾ, ಆ ವಾದ ತಪ್ಪೆಂದು ಹೇಳಿದ ಮೇಲೂ ಅದನ್ನೇ ನಾವು ಇನ್ನೂ ಪುರಸ್ಕರಿಸಬೇಕೇ? ಅಪ್ಪಾ, ರಾಜನ ಲಗ್ನವಾದ ಮೇಲೆ ನನ್ನ ಗತಿ ಏನಂದಿರಿ, ಅವನಿಗೆ ಕೊಡಿಸಿದಂತೆ ನನಗೂ ಒಳ್ಳೆಯ ವಿದ್ಯೆ ಕಲಿಸಿದ್ದರೆ ಇಂದು ನೀವು ಹೀಗೆ ಕೇಳುವ ಪರಿಸ್ಥಿತಿಯೇ ಬರುತ್ತಿರಲಿಲ್ಲ. ಹೆಣ್ಣಿಗೂ ಆರ್ಥಿಕ ಸ್ವಾತಂತ್ರ್ಯ ಅಗತ್ಯವೆನ್ನುವುದು ಇದಕ್ಕೇ"[೫೮] ಎನ್ನುವಲ್ಲಿ ಪುರುಷ ಪ್ರಧಾನ ಸಮಾಜ ಹೆಣ್ಣನ್ನು ನೋಡುವ ದೃಷ್ಟಿಕೋನ ಮತ್ತು ಆರ್ಥಿಕ ಸ್ವಾತಂತ್ರ್ಯದ ಬಗ್ಗೆ ಅಭಿಪ್ರಾಯವನ್ನು ಲಲಿತೆ ವ್ಯಕ್ತಪಡಿಸುತ್ತಾಳೆ.

ವೈದೇಹಿಯವರು 'ಅಂತರಂಗದ ಪುಟಗಳು' ಕತೆಯ ಅಚಲ ತನಗೆ ಬೇಕಾದ ವರವನ್ನು ತಾನೇ ಹುಡುಕಿಕೊಳ್ಳುತ್ತೇನೆ ಎನ್ನುತ್ತಾ ನೋಡಲು ಬಂದ ವರಗಳನ್ನೆಲ್ಲಾ ತಿರಸ್ಕಾರ ಮಾಡುವುದಕ್ಕೆ ಸಾಧ್ಯವಾಗುವುದು ಆಕೆ ಪಡೆದ ಶಿಕ್ಷಣವಾಗಿದೆ. ಹೆಣ್ಣು ಶಿಕ್ಷಣ ಪಡೆದು ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳುವ ಧೈರ್ಯ ಕೈಗೊಂಡಾಗ ಅದಕ್ಕೆ ಕುಟುಂಬದಿಂದ ಸಮಾಜದಿಂದ ಪ್ರತಿರೋಧ ಕಂಡುಬರುತ್ತದೆ. ಆಕೆ ಅದನ್ನೆಲ್ಲಾ ಎದುರಿಸಿದ ದಿಟ್ಟ ಹೆಣ್ಣಾಗಿ ಕಂಡುಬರುತ್ತಾಳೆ.

ಗಂಗಾ ಪಾದೇಕಲ್‌ರವರ 'ದಿಕ್ಸೂಚಿ' ಕತೆಯ ಸರಸಳ ನಡತೆಯನ್ನು ಸಂಶಯದಿಂದ ಕಂಡು ಕತೆ ಕಟ್ಟುತ್ತಾರೆ. ಅಲ್ಲದೆ ದೈವಭಕ್ತಿಯ ಪರವಶನಾಗಿ ಗಂಡ ಮೇಷ್ಟ್ರು ಕೆಲಸವನ್ನು ಬಿಟ್ಟು ಬರುತ್ತಾನೆ. ಇದರಿಂದ

ಜೀವನ ನಡೆಸುವುದು ಆಕೆಗೆ ಕಷ್ಟವಾಗುತ್ತದೆ. ಕುಟುಂಬದ ಜವಾಬ್ದಾರಿ ಆಕೆಯ ಮೇಲೆ ಬಂದಾಗ ಪರಿಹಾರ ಕಂಡುಕೊಳ್ಳಲು ಮೈಸೂರಿಗೆ ಹೋಗಿ ನರ್ಸಿಂಗ್ ಟ್ರೈನಿಂಗ್ ಮಾಡಿ ಬದುಕಿನ ದಾರಿಯನ್ನು ತಾನೇ ಕಂಡುಕೊಳ್ಳುತ್ತಾಳೆ.

ಸಾರಾರವರ 'ಸುಣ್ಣ' ಕತೆ ಪುರುಷ ಪ್ರಾಧಾನ್ಯತೆ ಮಹಿಳೆಯನ್ನು ಎಲ್ಲೆಲ್ಲಿ ತನ್ನ ಮುಷ್ಠಿಯೊಳಗೆ ಬಂಧಿಸಿಟ್ಟಿರುತ್ತದೆ ಎನ್ನುವುದನ್ನು ಅನಾವರಣಗೊಳಿಸುತ್ತದೆ. ಪ್ರೀತಿ ನೀಡಲು ಸೇವೆ ಮಾಡಲು ಹೆಣ್ಣುಮಕ್ಕಳು ಬೇಕು. ಇಂಥ ತಾರತಮ್ಯವನ್ನು ಎತ್ತಿ ತೋರಿಸುವ ಈ ಕತೆಯಲ್ಲಿ ಒಮ್ಮೆ ಮಹಿಳೆ ತನ್ನ ಹಕ್ಕಿಗಾಗಿ ಹೋರಾಡಲು ಮುಂದಾದರೂ ಅವಳಿಗೆ ಅದು ದಕ್ಕುವುದು ಸುಲಭ ಸಾಧ್ಯವಿಲ್ಲ ಎನ್ನುವುದನ್ನು ಕತೆ ತೆರೆದಿಡುತ್ತದೆ. ಆಸ್ತಿಯಲ್ಲಿ ತನಗೂ ಪಾಲು ದೊರೆಯಲೇಬೇಕು. ಅದಕ್ಕಾಗಿ ನಾನು ನ್ಯಾಯಾಲಯದ ಕಟ್ಟೆ ಹತ್ತುವೆ... ಎನ್ನುವಲ್ಲಿ ಮಗಳಿಗೆ ತನ್ನ ಹಕ್ಕಿನ ಬಗ್ಗೆ ಅರಿವು ಇದೆ. ಸುಣ್ಣ ಹಾಕಿದ ಕಣ್ಣು ಉರಿಯುತ್ತದೆ. ಅಪ್ಪಾ ಎಂದು ತಂದೆಗೆ ಹೇಳುವಾಗ ಹೆಣ್ಣುಮಕ್ಕಳನ್ನು ಎಷ್ಟು ತಾರತಮ್ಯದಿಂದ ನೋಡುತ್ತಾರೆ ಎಂಬುದನ್ನು ಈ ಕತೆ ಅನಾವರಣ ಮೂಡಿದೆ.

ವೈದೇಹಿಯವರ 'ಹಕ್ಕಿಲ್ಲದವರು' ಕತೆಯಲ್ಲಿ ಹಕ್ಕಿನ ಬಗ್ಗೆ ಪ್ರಶ್ನೆ ಉದ್ಭವವಾಗುತ್ತದೆ. ಸಿರಿ ತನ್ನ ಗಂಡನನ್ನು ಬಿಟ್ಟು ತವರು ಮನೆಗೆ ಬಂದು ನೆಲೆಸಿದ್ದಾಳೆ. ಸಿರಿಯ ಅಣ್ಣ ಬೇಜಾವಾಬ್ದಾರಿ ಮನುಷ್ಯ ಸಿರಿ ಇಲ್ಲಿ ಬಂದು ತೋಟ ಮನೆ ನೋಡಿಕೊಂಡಿರಲಿ ತನಗೇನೂ ಆಸ್ತಿ ಬೇಡ ಎಂದಿದ್ದವನು ಈಗ ಹಕ್ಕಿನ ಬಗ್ಗೆ ಮಾತನಾಡಲು ಆರಂಭಿಸಿದ್ದಾನೆ. ಹಾಳು ಬಿದ್ದ ತೋಟವನ್ನು ಒಂದು ಹದಕ್ಕೆ ತಂದು ವೃದ್ಧೆಯಾದ ಅಂಧಳಾದ ತಾಯಿಯನ್ನು, ತಂಗಿ ರಾಧೆಯನ್ನು ನಿಭಾಯಿಸುತ್ತಾ ತನ್ನ ಮಕ್ಕಳನ್ನು ಬೆಳೆಸುತ್ತ ಸಿರಿ ತನ್ನ ಜೀವವನ್ನು ಸವೆಸುತ್ತಿದ್ದಾಳೆ.

ಗಂಡು ಬಲವಿಲ್ಲದ ನೋವನ್ನು ಒಳಗೆ ನುಂಗಿ ತೋಟಗದ್ದೆ ಎಂದು ಇಪ್ಪತ್ತನಾಲ್ಕು ಗಂಟೆ ದುಡಿಯುವ ಸಿರಿಯ ಒಡಲಲ್ಲಿ ಒಂದು ಜ್ವಾಲಾಮುಖಿಯೇ ಇದೆ. ಗಂಡಸರೆಲ್ಲ ಹೆಂಗಸರಾದರೆ, ಹೆಂಗಸರು ಗಂಡಸರಾಗಲೇ ಬೇಕಲ್ಲ?"[೫೯] ಎಂಬ ಹೆಸರನ್ನು ಸಂಪಾದಿಸಿದವಳು. ಕ್ರಮೇಣ ಮಾತುಗಳು ಹಕ್ಕಿನ ಕಡೆ ತಿರುಗುತ್ತವೆ. ಕಾನೂನಿನ ದೃಷ್ಟಿಯಿಂದ ತೋಟ – ಮನೆಗಳ ಮೇಲಿನ ಹಕ್ಕು ಸಿರಿಯ ಅಣ್ಣನದೇ. ಆದರೆ ಅದನ್ನು ಒಂದು ಸ್ಥಿತಿಗೆ ತಂದದ್ದು ತಾನಲ್ಲವೇ ಎಂಬುದು ಸಿರಿಯ ಪ್ರಶ್ನೆ. ತೋಟ ಒಂದು ಹದಕ್ಕೆ ಬಂದ ಮೇಲೆ ಅಣ್ಣ ತೋಟದ ಮೇಲೆ ಹಕ್ಕು ಸಾಧಿಸಲು ಬಂದಾಗ ಪ್ರತಿಭಟಿಸುತ್ತಾಳೆ.

ಅವಳು ತಾನಾಗಿ ಇಲ್ಲಿಗೆ ಬಂದದ್ದು ಇಲ್ಲ. ತನಗೆ ತೋಟದಲ್ಲಿ ಹಕ್ಕಿಲ್ಲ. 'ನೀನಿಲ್ಲಿ ಒಪ್ಪುಗೇ ತೀರ ಇತ್ತ್" ಎಂಬ ಮಾತನ್ನು ಪದ್ಮನಾಭ ಹೇಳಿದಾಗ ಕೆರಳಿ ಬಿಡುತ್ತಾಳೆ. "ಬಾರದೆ ಇದ್ರೆ ಈಗ ನೀವು ಒಂದು ಲೋಟ ನೀರು ಸೈತ ಸಿಗದೆ ದೊಂಡೆ ಒಣಸಿಂಡ್ ವಾಪಾಸು ಹೋಗ್ಗಿತ್ತ್"[೬೦] ಎಂಬ ಮಾತುಗಳು ಅವಳ ಬಾಯಿಯಿಂದ ಹೊರಹೊಮ್ಮುತ್ತವೆ. ಲೇಖಕಿ ಸಿರಿಯ ಮುಖಾಂತರ ಆಸ್ತಿ ಹಕ್ಕಿನ ಪ್ರಶ್ನೆಯನ್ನು ಈ ಕತೆಯಲ್ಲಿ ಅನಾವರಣ ಮಾಡಿದ್ದಾರೆ.

ಸ್ತ್ರೀ ಒಂದಲ್ಲಾ ಒಂದು ಹಂತದಲ್ಲಿ ಶೋಷಣೆಗೆ ಗುರಿಯಾಗಿರುತ್ತಾಳೆ. ಅದು ಬಾಲ್ಯ ಕಾಲದಲ್ಲಿ ಆಗಿರಬಹುದು ಅಥವಾ ಶಾಲಾ ದಿನಗಳಲ್ಲಿ ಆಗಿರಬಹುದು. ಔದ್ಯೋಗಿಕ ನೆಲೆಯಾಗಿರಬಹುದು. ಲೈಂಗಿಕತೆ, ಮನಸ್ಸಿನ ದುಗುಡ, ಆತಂಕ ತಲ್ಲಣಗಳಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳುವ ಸ್ಥಿತಿಯಲ್ಲಿರುತ್ತಾರೆ. ಶ್ರೀಮಂತಿಕೆ, ಸಂಪತ್ತು, ಅದರ ಜೊತೆಗೆ ಎಲ್ಲವನ್ನೂ ನೀಡುವ ಗಂಡ ಇದ್ದರೂ ಸಹ ತನ್ನ ಆಂತರ್ಯದೊಳಗೆ ಏನೋ ಒಂದು ಬಗೆಯ ವಿಮೋಚನೆಗಾಗಿ ತವಕಿಸುವ ಮಾದರಿಯನ್ನೂ; ಕಷ್ಟಗಳಿಂದ ಮುಕ್ತವಾಗುವ ಸ್ವಾತಂತ್ರ್ಯವನ್ನು ಬಯಸುವ ಮಾದರಿಯೊಂದನ್ನು ಕರಾವಳಿಯ ಕಥೆಗಾರ್ತಿಯರಲ್ಲಿ ಕಾಣಬಹುದು.

ವಿದ್ಯಾವಂತರಾಗಿ ಸ್ವತಂತ್ರವಾಗಿ ಆಲೋಚಿಸಿ ನಿರ್ಧಾರಕೈಗೊಳ್ಳಬಲ್ಲ, ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ ಹೆಣ್ಣುಮಕ್ಕಳು ಲೇಖಕಿಯರ ಕಥೆಗಳಲ್ಲಿ ಕಾಣಸಿಗುತ್ತಾರೆ. ಅವರು ತಮಗಾದ ಅನ್ಯಾಯಕ್ಕೆ ಕೊರಗುತ್ತ ಕೂರದೆ, ಮೈ ಕೊಡವಿ ಎದ್ದು ಕಾರ್ಯ ಪ್ರವೃತ್ತರಾಗುವ ಸ್ವಾವಲಂಬಿ ಮಹಿಳೆಯರಾಗಿದ್ದಾರೆ.

ಅನುಪಮಾ ಪ್ರಸಾದ್‌ರವರ 'ಕರವೀರದ ಗಿಡ'ದ ಕತೆಯಲ್ಲಿ ದಿಟ್ಟ ಹೆಣ್ಣಿನ ಸಾಹಸಗಾಥೆ ತನ್ನ ಯೌವ್ವನದ ದಿನಗಳಲ್ಲಿ ತನಗರಿವಿಲ್ಲದೆ ನಡೆದುಹೋದ ತಪ್ಪಿಗಾಗಿ ಜೀವನಪರ್ಯಂತ ಕೊರಗುತ್ತಾ ಕೂರದೇ ಕಥಾನಾಯಕಿ ಸುಮಿತ್ರ ಸಮಾಜದಿಂದ ಪಲಾಯನ ಮಾಡದೆ ತಾನು ಬದುಕುವ ಹಕ್ಕನ್ನು ಹೋರಾಟದಿಂದ ಉಳಿಸಿಕೊಳ್ಳುತ್ತಾಳೆ. ಮದುವೆಗೂ ಮುಂಚೆ ಬಸುರಿಯಾದ ಸುಮಿತ್ರ ತನ್ನ ಮನೆಯವರು ಮತ್ತು ಸಮಾಜದಿಂದ ಬಹಿಷ್ಕಾರಕ್ಕೆ ಒಳಗಾದರೂ ಹಿಮ್ಮೆಟ್ಟದೆ ಸ್ವಾವಲಂಬನೆಯ ಜೀವನ ನಡೆಸಿದ್ದು ಕಥೆಯ ಅತ್ಯಂತ ಉಚ್ಛ ಮಟ್ಟದ ಸಂದೇಶ ಎಂದೆನಿಸುತ್ತದೆ. ತುಂಬು ಕುಟುಂಬದಲ್ಲಿ ಜನಿಸಿದ ಸುಮಿತ್ರ ಉಚ್ಛ ಜಾತಿಯವಳೇ ಆಗಿದ್ದು ಸಂಪ್ರದಾಯಸ್ಥರ ಮನೆತನದವಳು.

ಅವಳು ತಾನಾಗಿ ಇಲ್ಲಿಗೆ ಬಂದದ್ದು ಇಲ್ಲ. ತನಗೆ ತೋಟದಲ್ಲಿ ಹಕ್ಕಿಲ್ಲ. 'ನೀನಿಲ್ಲಿ ಒಪ್ಪುಗೇ ತೀರ ಇತ್ತ್" ಎಂಬ ಮಾತನ್ನು ಪದ್ಮನಾಭ ಹೇಳಿದಾಗ ಕೆರಳಿ ಬಿಡುತ್ತಾಳೆ. "ಬಾರದೆ ಇದ್ರೆ ಈಗ ನೀವು ಒಂದು ಲೋಟ ನೀರು ಸೈತ ಸಿಗದೆ ದೊಂಡೆ ಒಣಸಿಂಡ್ ವಾಪಾಸು ಹೋಗ್ಗಿತ್ತ್"[೬೦] ಎಂಬ ಮಾತುಗಳು ಅವಳ ಬಾಯಿಯಿಂದ ಹೊರಹೊಮ್ಮುತ್ತವೆ. ಲೇಖಕಿ ಸಿರಿಯ ಮುಖಾಂತರ ಆಸ್ತಿ ಹಕ್ಕಿನ ಪ್ರಶ್ನೆಯನ್ನು ಈ ಕತೆಯಲ್ಲಿ ಅನಾವರಣ ಮಾಡಿದ್ದಾರೆ.

ಸ್ತ್ರೀ ಒಂದಲ್ಲಾ ಒಂದು ಹಂತದಲ್ಲಿ ಶೋಷಣೆಗೆ ಗುರಿಯಾಗಿರುತ್ತಾಳೆ. ಅದು ಬಾಲ್ಯ ಕಾಲದಲ್ಲಿ ಆಗಿರಬಹುದು ಅಥವಾ ಶಾಲಾ ದಿನಗಳಲ್ಲಿ ಆಗಿರಬಹುದು. ಔದ್ಯೋಗಿಕ ನೆಲೆಯಾಗಿರಬಹುದು. ಲೈಂಗಿಕತೆ, ಮನಸ್ಸಿನ ದುಗುಡ, ಆತಂಕ ತಲ್ಲಣಗಳಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳುವ ಸ್ಥಿತಿಯಲ್ಲಿರುತ್ತಾರೆ. ಶ್ರೀಮಂತಿಕೆ, ಸಂಪತ್ತು, ಅದರ ಜೊತೆಗೆ ಎಲ್ಲವನ್ನೂ ನೀಡುವ ಗಂಡ ಇದ್ದರೂ ಸಹ ತನ್ನ ಆಂತರ್ಯದೊಳಗೆ ಏನೋ ಒಂದು ಬಗೆಯ ವಿಮೋಚನೆಗಾಗಿ ತವಕಿಸುವ ಮಾದರಿಯನ್ನೂ; ಕಷ್ಟಗಳಿಂದ ಮುಕ್ತವಾಗುವ ಸ್ವಾತಂತ್ರ್ಯವನ್ನು ಬಯಸುವ ಮಾದರಿಯೊಂದನ್ನು ಕರಾವಳಿಯ ಕಥೆಗಾರ್ತಿಯರಲ್ಲಿ ಕಾಣಬಹುದು.

ವಿದ್ಯಾವಂತರಾಗಿ ಸ್ವತಂತ್ರವಾಗಿ ಆಲೋಚಿಸಿ ನಿರ್ಧಾರಕೈಗೊಳ್ಳಬಲ್ಲ, ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ ಹೆಣ್ಣುಮಕ್ಕಳು ಲೇಖಕಿಯರ ಕಥೆಗಳಲ್ಲಿ ಕಾಣಸಿಗುತ್ತಾರೆ. ಅವರು ತಮಗಾದ ಅನ್ಯಾಯಕ್ಕೆ ಕೊರಗುತ್ತ ಕೂರದೆ, ಮೈ ಕೊಡವಿ ಎದ್ದು ಕಾರ್ಯ ಪ್ರವೃತ್ತರಾಗುವ ಸ್ವಾವಲಂಬಿ ಮಹಿಳೆಯರಾಗಿದ್ದಾರೆ.

ಅನುಪಮಾ ಪ್ರಸಾದ್‌ರವರ 'ಕರವೀರದ ಗಿಡ'ದ ಕತೆಯಲ್ಲಿ ದಿಟ್ಟ ಹೆಣ್ಣಿನ ಸಾಹಸಗಾಥೆ ತನ್ನ ಯೌವ್ವನದ ದಿನಗಳಲ್ಲಿ ತನಗರಿವಿಲ್ಲದೆ ನಡೆದುಹೋದ ತಪ್ಪಿಗಾಗಿ ಜೀವನಪರ್ಯಂತ ಕೊರಗುತ್ತಾ ಕೂರದೇ ಕಥಾನಾಯಕಿ ಸುಮಿತ್ರ ಸಮಾಜದಿಂದ ಪಲಾಯನ ಮಾಡದೆ ತಾನು ಬದುಕುವ ಹಕ್ಕನ್ನು ಹೋರಾಟದಿಂದ ಉಳಿಸಿಕೊಳ್ಳುತ್ತಾಳೆ. ಮದುವೆಗೂ ಮುಂಚೆ ಬಸುರಿಯಾದ ಸುಮಿತ್ರ ತನ್ನ ಮನೆಯವರು ಮತ್ತು ಸಮಾಜದಿಂದ ಬಹಿಷ್ಕಾರಕ್ಕೆ ಒಳಗಾದರೂ ಹಿಮ್ಮೆಟ್ಟದೆ ಸ್ವಾವಲಂಬನೆಯ ಜೀವನ ನಡೆಸಿದ್ದು ಕಥೆಯ ಅತ್ಯಂತ ಉಚ್ಚ ಮಟ್ಟದ ಸಂದೇಶ ಎಂದೆನಿಸುತ್ತದೆ. ತುಂಬು ಕುಟುಂಬದಲ್ಲಿ ಜನಿಸಿದ ಸುಮಿತ್ರ ಉಚ್ಚ ಜಾತಿಯವಳೇ ಆಗಿದ್ದು ಸಂಪ್ರದಾಯಸ್ಥರ ಮನೆತನದವಳು.

ಓದಿನಲ್ಲಿ ಮತ್ತು ಕ್ರೀಡೆಯಲ್ಲಿ ಅತ್ಯಂತ ಪ್ರತಿಭಾಶಾಲಿಯಾಗಿದ್ದ ಆಕೆ ತನ್ನ ದೈಹಿಕ ಶಿಕ್ಷಕನ ಪ್ರೀತಿಗೆ ಬಲಿಯಾಗಿ ಬಸುರಿಯಾಗುತ್ತಾಳೆ. ಆ ದೈಹಿಕ ಶಿಕ್ಷಕ ಮದುವೆಯಾದವನು, ಅವಳಿಗೆ ಎಂದೂ ಆಕೆಯನ್ನು ಮದುವೆಯಾಗುತ್ತೇನೆಂದು ಭಾಷೆ ಕೊಟ್ಟವನಲ್ಲ. ಆದರೆ ದೈಹಿಕ ಬಯಕೆಯೊಂದನ್ನಷ್ಟೇ ತೀರಿಸುವ ಆಶೆ ಹೊತ್ತ ಆ ವಯಸ್ಸಲ್ಲಿ ಹಿಂದು ಮುಂದನ್ನು ಯೋಚಿಸದೆ ಸುಮಿತ್ರ ಆತನೊಡನೆ ದೇಹ ಸಂಬಂಧ ಬೆಳೆಸಿ ಬಸುರಿಯಾಗುತ್ತಾಳೆ.

ಜೀವನ ಪರ್ಯಂತ ಮದುವೆಯಾಗದೆ ಉಳಿಯುತ್ತಾಳೆ. ಹಾಗಂತ ತಾನು ಬಸುರಿಯಾಗಿ ಹೆತ್ತ ಕರುಳು ಕುಡಿಯನ್ನು ಯಾರಿಗೂ ಕೊಡದೆ ತಾನೇ ಸಾಕಿ ಬೆಳೆಸುತ್ತಾಳೆ. ಸ್ವಉದ್ಯೋಗದಿಂದ ಹಣ ಸಂಪಾದಿಸುತ್ತಾಳೆ ಇವಳ ಹೀನ ಕೆಲಸದಿಂದಾಗಿ ತಾಯಿ ಆತ್ಮಹತ್ಯೆ ಮಾಡಿಕೊಂಡು ಸಾಯುತ್ತಾಳೆ. ತಂದೆ ಪೌರೋಹಿತ್ಯದ ಕೆಲಸವನ್ನೇ ಕಳೆದುಕೊಳ್ಳುತ್ತಾನೆ. ಇಂತಹ ಸಂದರ್ಭದಲ್ಲಿ ಸುಮಿತ್ರ ತನ್ನ ತಂಗಿಯರ ಜವಾಬ್ದಾರಿಯನ್ನು ತಾನೇ ನಿಭಾಯಿಸುತ್ತಾಳೆ.

ತನ್ನಿಂದ ಆದ ಅಚಾತುರ್ಯಕ್ಕಾಗಿ ತನ್ನ ಪಾಪವನ್ನು ಕಳೆಯಲೆಂಬಂತೆ ತನ್ನ ತಂಗಿಯರಿಗೆ ಶಿಕ್ಷಣ ಮದುವೆ ಎರಡನ್ನು ತಂದೆ ತಾಯಿಯರ ಸ್ಥಾನದಲ್ಲಿ ನಿಂತು ತಾನೇ ನಿಭಾಯಿಸುತ್ತಾಳೆ. ಇಂತಹ ಸಂದರ್ಭದಲ್ಲಿ ಅವಳಿಗೆ ಮದುವೆಯ ಯೋಚನೆ ಬಾಳ ಸಂಗಾತಿಯ ಆಯ್ಕೆಗೆ ಮುಂದುವರೆಯುವ ಹಕ್ಕೇ ಇಲ್ಲದಂತಾದರ ತನ್ನ ತಂಗಿಯೇ ಆರಿಸಿ ತಂದ ತನಗೆ ಇಷ್ಟವೇ ಉಂಟಾಗದ ರೋಗಿಷ್ಠ ಗಂಡನನ್ನು ಆಕೆ ನಿರಾಕರಿಸುತ್ತಾಳೆ. ಇದು ಅವಳು ಅವಳಾಗಿಯೇ ಪಡಕೊಂಡ ಹಕ್ಕು ಸ್ವಾವಲಂಬನೆಯ ಬದುಕು ಇದನ್ನು ಸಾಧ್ಯ ಮಾಡಿತ್ತು. ಎನ್ನುವುದರಲ್ಲಿ ಎರಡು ಮಾತಿಲ್ಲ.

ಅನುಪಮಾ ಪ್ರಸಾದ್ ಹೆಣ್ಣಿನ ಚಿತ್ರಣವನ್ನು ನೀಡಿದ ಪರಿ ಇಲ್ಲಿ ಮೆಚ್ಚುವಂತಹದ್ದು. ಶೋಷಣೆಗೆ ಒಳಗಾದರೂ ದಿಟ್ಟತನ, ಬದುಕುವ ಛಲ, ಪ್ರಬುದ್ಧತೆ, ಗಟ್ಟಿತನವನ್ನು ಇಲ್ಲಿ ಹೆಣ್ಣಿಗೆ ನೀಡಿದ್ದಾರೆ. ಹೆಣ್ಣು ಈ ರೀತಿ ಬದುಕಬೇಕು ಅದು ಅವಳ ಹಕ್ಕು ಎನ್ನುವ ಪರೋಕ್ಷವಾದ ನಿರ್ದೇಶನ ಅಂತೆಯೇ ನಿದರ್ಶನ ಈ ಕಥೆಯಲ್ಲಿದೆ.

ಮಿತ್ರಾ ವೆಂಕಟ್ರಾಜ್‌ರವರ "ಇಲ್ಲೊಬ್ಬಳು ಸೀತೆ" ಕಥೆಯ ನಾಯಕಿ ಸೀತೆ. ಸುಮಾರು ನೂರು ವರ್ಷಗಳ ಹಿಂದೆ ನಡೆದಿರಬಹುದಾದ ಘಟನೆಯನ್ನು ಆಧರಿಸಿದ ಕಥೆ. ಅದು ಹೆಣ್ಮಕ್ಕಳಿಗೆ ಓದುಬರಹವೇ ಕನಸಾಗಿದ್ದ ಕಾಲ. ಕೆಮ್ಮಡಿಯ ಮನೆತನದಲ್ಲಿ ಸೊಸೆಯಾಗಿ ಬಂದ ಸೀತೆ ಓದು – ಬರಹ ಬಲ್ಲವಳು.

ಮಾತ್ರವಲ್ಲ ಕವಿತೆಗಳನ್ನು ರಚಿಸುತ್ತಿದ್ದ ಭಾವನಾಜೀವಿ ಕೆಮ್ಮಡಿಯಲ್ಲಿ ಸೀತೆಯದು ನಿಂತರೆ ತಪ್ಪು ಕುಳಿತರೆ ತಪ್ಪು ಎನ್ನುವ ಬದುಕು. ಓದಲು ಬರೆಯಲು ಬಿಡದ, ಮನೆಯಿಂದ ಹೊರಗೆ ಕಾಲಿಡಲು ಬಿಡದ ಆಕೆಯ ಬದುಕು.

ಕತ್ತಲ ಗವಿಯಾಯ್ತು ಎನ್ನ ಜೀವಿತವು? ಎನ್ನುವ ಉಸಿರುಗಟ್ಟಿಸುವ ವಾತಾವರಣ. ಆಕೆಗೆ ಕೆಮ್ಮಡಿ ಮನೆಯ ಹಿಂದಿನ ಪಾದೆಗುಡ್ಡೆ. ಮರ – ಗಿಡ – ಹಸಿರು ಆಕಾಶ ನೋಡುವ ಹುಚ್ಚು. ಅವುಗಳನ್ನೆಲ್ಲ ಕವಿತೆಗಳನ್ನಾಗಿಸುವ ಹಂಬಲ. ಆಗಿನ ಕಾಲದ ಎಲ್ಲಾ ಹೆಂಗಸರಂತೆಯೇ ಅವಳ ಬಾಳು ಇತ್ತು. ಗಂಡನ ವೈಭವದ ಮನೆಯಲ್ಲಿ ಉಳಿದವರು ಹೇಳುವಂತೆ ಸೀತೆ ರಾಣಿಯಂತೆ ಬದುಕಬಹುದಿತ್ತು.

ಆದರೆ ಗಂಡನ ಔದಾಸೀನ್ಯ ಮತ್ತು ನಿರ್ಲಕ್ಷ್ಯ ಧೋರಣೆಗಳಿಂದ ಬೇಸತ್ತ ಆಕೆ ಆತ್ಮಹತ್ಯೆಯ ಪ್ರಯತ್ನವನ್ನು ಮಾಡಿ ಸೋಲುತ್ತಾಳೆ. ಇಲ್ಲಿಯ ಸೀತೆ ಪುರಾಣದ ಸೀತೆಯಂತೆ ಆದರ್ಶ ಪತಿಯಾಗಿ ಬಾಳಲಿಲ್ಲ. ಅಷ್ಟು ದೊಡ್ಡ ಮನೆ. ಗಂಡ, ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನು, ಒಟ್ಟಿನಲ್ಲಿ ತನಗಿಷ್ಟವಿಲ್ಲದ ಬಾಳನ್ನು ತ್ಯಜಿಸಿ ಅಪರಿಚಿತ ಸನ್ಯಾಸಿಯೊಡನೆ ಹೊರಟುಹೋಗುತ್ತಾಳೆ. ತನ್ನತನವನ್ನು ತೋರಿಸಿಕೊಟ್ಟಿದ್ದಾಳೆ.

ಸಾರಾರವರ 'ನಿರ್ಧಾರ' ಕತೆ ಮುಸ್ಲಿಂ ಹೆಣ್ಣು ಮಗಳೊಬ್ಬಳ ಮದುವೆಯ ನಿರ್ಧಾರವನ್ನು ತಿಳಿಸುವ ಕತೆಯಾಗಿದೆ. ಹೆಣ್ಣು ತನ್ನ ಜೀವನವನ್ನು ತಾನೇ ಕಟ್ಟಿಕೊಳ್ಳುವ ನಿರ್ಧಾರವನ್ನು ತೆಗೆದುಕೊಳ್ಳುತ್ತಾಳೆ. "ನಾನು ಸರಿಯಾದ ನಿರ್ಧಾರ ಕೈಗೊಂಡಿದ್ದೇನೆಂಬ ವಿಶ್ವಾಸ ನನ್ನದು. ನನ್ನನ್ನು ಮತ್ತೊಮ್ಮೆ ಆಶೀರ್ವದಿಸು' ಎಂದು ಹಸೀನಾ ಬರೆದಿಟ್ಟು ಹೋದ ಪತ್ರದ ಸಾಲುಗಳು ಆಕೆಯ ದೃಢತ್ವವನ್ನು ನಿರೂಪಿಸುತ್ತದೆ.

'ಗಗನ ಸಖಿ' ಕಥೆಯು ಹೆಣ್ಣೊಬ್ಬಳು ತನ್ನ ಬದುಕಿನ ಬಗೆಗೆ ತೆಗೆದುಕೊಳ್ಳುವ ಸ್ವತಂತ್ರ ನಿರ್ಧಾರವನ್ನು ಚಿತ್ರಿಸುತ್ತದೆ. ವಿದೇಶದಲ್ಲಿ ಉದ್ಯೋಗಸ್ಥನಾದ ಪತಿಯ ಸಂಶಯಕ್ಕೆ ರಚನಾ ಈಡಾಗಿ ನೋವು ಅವಮಾನಗಳನ್ನು ಅನುಭವಿಸಿ ಛಲದಿಂದ ತನ್ನ ಬದುಕನ್ನು ಕಟ್ಟಿಕೊಳ್ಳುತ್ತಾಳೆ. ಹೆಣ್ಣನ್ನು ತನ್ನ ಕಪಿಮುಷ್ಟಿಯಲ್ಲಿಟ್ಟುಕೊಂಡು ಅಧಿಕಾರ ಚಲಾಯಿಸುವ ಪುರುಷವರ್ಗದ ವಿರುದ್ಧ ಸೆಟೆದು ನಿಂತು ಶಿಕ್ಷಣ ಮತ್ತು ಆರ್ಥಿಕ ಸ್ವಾತಂತ್ರ್ಯ ಪಡೆದಾಗ ಮಾತ್ರ ಹೆಣ್ಣು ಗಟ್ಟಿಯಾದ ನಿರ್ಧಾರ ಕೈಗೊಳ್ಳಲು ಸಾಧ್ಯ ಎಂಬುದನ್ನು ಮನವರಿಕೆ ಮಾಡುತ್ತಾಳೆ.

ಗಂಗಾರವರ 'ಸಂಧಿಕಾಲ' ಮತ್ತು ಅನುಪಮಾ ಪ್ರಸಾದ್‌ರವರ 'ಆತ್ಮ ಸಂಗಾತ' ಕಥೆಯ ಒಂದೇ ರೀತಿಯ ವೃದ್ಧಾಪ್ಯದ ಬದುಕನ್ನು ತೆರೆದಿಡುತ್ತದೆ. 'ಆತ್ಮ ಸಂಗಾತ" ಕಥೆಯು ಸರೋಜಮ್ಮ ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾರೆ. ನಂತರ ಅವರಿಗೆ ಪಕ್ಕದ ಮನೆಯ ಚಿದನಂದರಾಯರ ಪರಿಚಯವಾಗುತ್ತದೆ.

ಇಬ್ಬರು ಸಮಾನ ದುಃಖಿಗಳಾದ ಕಾರಣ ಸರೋಜಮ್ಮ ಮತ್ತು ಚಿದಾನಂದರಾಯರು ಪರಸ್ಪರ ಮಾನಸಿಕವಾಗಿ ಹತ್ತಿರವಾಗುತ್ತಾರೆ. ಯಾವುದೇ ಅನೈತಿಕತೆಯ ಲೇಪವಿಲ್ಲದೇ ನ್ಯಾಯಯುತವಾದ ಸಂಗಾತಿಯೆನಿಸುತ್ತದೆ. ವೃದ್ಧಾಪ್ಯದಲ್ಲಿ ಸಂಗಾತಿಯ ಬಯಕೆ ಮಾನಸಿಕವಾಗಿ ಅವರನ್ನು ಗಟ್ಟಿಗೊಳಿಸುತ್ತದೆ. ಹೆಣ್ಣೊಬ್ಬಳು ತನಗೆ ಸರಿಕಂಡವನೊಡನೆ ಪ್ರೀತಿ – ವಿಶ್ವಾಸದಿಂದ ಜೀವನ ಸಾಗಿಸಿದಾಗ ಬದುಕು ಸುಖಮಯವಾಗುತ್ತದೆ. ಸಮಾಜ ಒಪ್ಪಿದವನೊಡನೆ ಸಂಸಾರ ಸಾಗಿಸಿದರೆ ಅದು ನೈತಿಕತೆಯೆನಿಸುತ್ತದೆ. ಸಮಾಜ ಒಪ್ಪದೇ ಇದ್ದಾಗ ಅದು ಅನೈತಿಕವಾಗಿರುತ್ತದೆ.

ಗಂಗಾರವರ 'ಸಂಧಿಕಾಲ' ಕಥೆಯ ನಿರೂಪಕಿಯ ತಾಯಿ ವಿಧವೆ ತನ್ನ ಸಂಧ್ಯಾಕಾಲದಲ್ಲಿ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ನಿರ್ಧಾರ ಮಾಡುತ್ತಾಳೆ, ಮೇಷ್ಟ್ರೊಬ್ಬರ ಸ್ನೇಹದಿಂದ ಬದುಕನ್ನು ಕಟ್ಟಿಕೊಳ್ಳುತ್ತಾಳೆ.

'ಸಬ್ ಕೋ ಸನ್ಮತಿ ದೇ ಭಗವಾನ್' ಕತೆಯು ಕೋಮುಸೌಹಾರ್ದತೆಯನ್ನು ಸಾರುತ್ತದೆ. ಸುಲೋಚನಾಳ ಗಂಡ ಮೋಹನನ್ ಕೋಮು ದಳ್ಳೂರಿಗೆ ಆಹುತಿಯಾಗುತ್ತಾನೆ. ಹಾಗೆಯೇ ಅಮೀನಮ್ಮಳ ಅಳಿಯ ನನ್ನ ರೌಡಿಗಳ ಗುಂಪೊಂದು ಕಡಿದುಹಾಕಿತ್ತು. ಜೈನಾಬಿಯ ಮಗಳು ನಾಸಿರಾಳು ಶಾಲೆಯಲ್ಲಿ ಮಕ್ಕಳು ಹೇಳಿದ ಮಾತುಗಳನ್ನು ಕೇಳಿ ಸುಲೋಚನಾಳ ಮಗ ಪದ್ಮನಾಭ "ಅಮ್ಮ ನಾವು ಹಿಂದುಗಳಾ? ನಾಸಿರಾಳ ಮನೆಯವರು ಮುಸಲ್ಮಾನರ? ಎಂದು ಕೇಳಿ, ನನ್ನ ಅಪ್ಪನನ್ನು ಮುಸ್ಲಿಮರು ಕೊಂದರಂತೆ ಅವಳ ಅಪ್ಪನನ್ನು ಹಿಂದುಗಳು ಕೊಂದರಂತೆ ಅದಕ್ಕೆ ನಾಸಿರಾ ನನ್ನ ಹತ್ತಿರ "ನಾವಿಬ್ಬರೂ ಹಿಂದೂ ಮುಸ್ಲಿಮರು ಆಗುವುದು ಬೇಡ ಬೇರೆಯೇ ಜಾತಿ ಆಗೋಣ ಅಂದಳು"[೬೧] ಎಂದಾಗ ನಾವು ನಾಸಿರ ಹೇಳಿದ ಹಾಗೆ ಬೇರೆಯ ಜಾತಿ ಆಗೋಣ ಪುಟ್ಟ ನಿಜವಾದ ಮಾನವ ಜಾತಿ ಆಗೋಣ"[೬೨] ಅನ್ನುತ್ತಾಳೆ. ಜಾತಿ ಧರ್ಮದ ಬಗ್ಗೆ ಈ ರೀತಿ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ.

ವೈದೇಹಿಯವರ 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಕತೆಯಲ್ಲಿ ಹೋಮಕೂಟದಲ್ಲಿನ ಮಾರೀಚಾಶ್ರಮದ ಜಗಲಿಯ ಮೇಲೆ ಕುಳಿತು ಶಕುಂತಲೆಯು ಅಂತರಂಗದ ಮನಸ್ಥಿತಿಯನ್ನು ನಿವೇದಿಸಿಕೊಳ್ಳುತ್ತಾಳೆ. ಶಕುಂತಲೆ ದುಷ್ಯಂತನೊಂದಿಗಿನ ತನ್ನ ಸಂಬಂಧದ ಬಗ್ಗೆ ಹೃದಯ ಬಿಚ್ಚಿ ಮಾತನಾಡುತ್ತಾಳೆ. ದುಷ್ಯಂತ – ಶಕುಂತಲೆಯರು ಮರುಭೇಟಿಯಾದಾಗ "ಬಾ ಎಂದು ರಾಗ ತುಂಬಿ, ಅದೇ ದುಷ್ಯಂತ; ಹೋಗಲೇ ನಾನು? ಹೋಗಬೇಕೆ? ಮಾರೀಚರು ಮೌನಧಾರಣೆ ಮಾಡಿದರು. ನಿರ್ಧಾರ ನನ್ನದು. ನನಗಾತ ಅನಿವಾರ್ಯವೆಂದಮಾತ್ರಕ್ಕೆ ನಾನು ಆತನಿಗೆ ಅನಿವಾರ್ಯ ವಾಗಬೇಕಿಲ್ಲವೆಂದು ಸತ್ಯದಂಚಿನಲ್ಲಿ ನಿಂತು ಚಿಂತಿಸಿದೆ.

ಪರಸ್ಪರ ಅನಿವಾರ್ಯವಾಗುವವರೆಗೆ ಕೂಡುವುದೂ ತಪ್ಪು ಎನಿಸಿತು. "ನನ್ನಲ್ಲಿ ಹರಿಯುತ್ತಿರುವುದುಕ್ಷತ್ರಿಯರಕ್ತ ಎಂದೆಲ್ಲ ನಾ ಹೇಳುತ್ತಿದ್ದದ್ದಿತು. ಆದರೆ ಇದೆಲ್ಲ ಎಂತಹ ಟೊಳ್ಳು ಠೇಂಕಾರ! ಆ ರತ್ನ ಸಿಂಹಾಸನ ನನ್ನನ್ನು ಸೆಳೆಯಲೇ ಇಲ್ಲ. ನಾ ಹೋಗಲಿಲ್ಲ ಸಿಂಹಸಾನದ ಉತ್ತರಾಧಿಕಾರಿಯ ಚಿಂತೆಯಲ್ಲಿ ಮಹಾರಾಜನಿದ್ದಾನೆ ಎಂದು ತಿಳಿಯಿತು. ಭರತ ನೆಲೆ ಸೇರಿದ. ಭರತನನ್ನಪ್ಪಿಕೊಂಡು ಹೊರಟೇ ಹೋದ ದುಷ್ಯಂತ ಸದಾ ಸುಖಿ? ಆತನ ದ್ವಂದ್ವಗಳೆಲ್ಲ ಕಾವ್ಯಕೆ. ಜಗತ್ತಿಗೆ ಮಹಾರಾಜನ ಮನಸ್ಸು ಮನಸ್ಸು ಈ ಪರಿಯೆಂದು ಸಮರ್ಥಿಸಲಿಕ್ಕೆ. ಅಧ್ಯಯನಕ್ಕೆ ಹೊರತು ಸತ್ಯ ಕಾಯಲಿಕ್ಕಲ್ಲ".[೬೩]

ಸತ್ಯವನ್ನು ಕಾಯಬೇಕಾಗಿ ಇಲ್ಲ? ನಾ ಕೂಗಿ ಹೇಳಿದೆ 'ನನ್ನದೆಂದೂ ನಿನ್ನ ನಲ್ಲೆಯರ ಮೇಲೆ ಮತ್ಸರ್ಯವಿಲ್ಲ.." ಸೂರ್ಯೋದಯ ಹೊಸಹೊಸದಾಗಿ ತೋರುವವರೆಗೂ ಬದುಕು ಎಂದಿಗೂ ಬೇಸರವಾಗದು.[೬೪] ಇಲ್ಲಿ ಶಕುಂತಲೆ ದುಷ್ಯಂತ ಕರೆದಾಗ ಹೋಗದೇ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಆತ ತೊರೆದಾಗ ಆವೇಶಕ್ಕೆ ಒಳಗಾಗದೇ ಸಿಟ್ಟುಗೊಳ್ಳದೇ ಕಣ್ಣೀರು ಸುರಿಸದೇ ಬದಲಾಗಿ ಬದುಕಿನ ಬಗ್ಗೆ ಪ್ರಬುದ್ಧವಾದ ಚಿಂತನೆ ಮಾಡುತ್ತಾಳೆ.

"ಒಂದು ಬಾಗಿಲಸದ್ದು" ಕತೆಯಲ್ಲಿ ನಿರೂಪಕಿ "ನಾವೆಲ್ಲ ಮುಟ್ಟಬಾರದಂತೆ, ನಾವೆಲ್ಲ ಎಂದರೆ ಸ್ತ್ರೀ ಶೂದ್ರ, ಪತಿತ, ಷಂಡ (ನಾವೆಲ್ಲ ಯಾವಾಗಲೂ ಎಂದರೆ ಸ್ತ್ರೀ ವಿಷ್ಣುಶಂಕರರನ್ನು ಮುಟ್ಟಿ ಪೂಜಿಸಬಾರದು. 'ಸಾಲಿಗ್ರಾಮ' ಶಿಲಾರ್ಚನೆಗೂ ನಾವು ಅನರ್ಹರು! ಬ್ರಹನ್ನಾರದೀಯ ಪದ್ಮಪುರಾಣ ಮುಂತಾದವನ್ನು ಆಧಾರಕ್ಕೆ ತೆಗೆದುಕೊಂಡು ಹೀಗೆನ್ನುತ್ತಾರೆ.[೬೫] ಆದರೆ ನಾನು ಸಾಲಿಗ್ರಾಮ ಶಿಲೆಯನ್ನು

ಮುಟ್ಟಲು ಆರಿಸಿಕೊಂಡೆ ಸಾಲಿಗ್ರಾಮ ಶಿಲೆಯನ್ನು ಮುಟ್ಟಬೇಕೆಂಬ ಆಸೆ ತೀವ್ರವಿತ್ತು ಯಾಕೆ ಮುಟ್ಟಬಾರದು ಎಂಬ ಪ್ರಶ್ನೆ ಕಾಡುತ್ತಿತ್ತು. ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ನಿರೂಪಕಿ ಸಾಲಿಗ್ರಮವನ್ನು ಧೈರ್ಯದಿಂದ ಮುಟ್ಟುವ ಮೂಲಕ ತನ್ನ ಮನಸ್ಸಿನಲ್ಲಿನ ಭಯದ ಕಲ್ಪನೆಯನ್ನು ದೂರಮಾಡಿಕೊಳ್ಳುತ್ತಾಳೆ.

ಅಲ್ಲದೇ ತನ್ನ ಚಿಕ್ಕಂದಿನ ಆಸೆಯನ್ನು ಈಡೇರಿಸಿಕೊಂಡು ಪೊಳ್ಳುಸಂಪ್ರದಾಯವನ್ನು ಧಿಕ್ಕರಿಸಿ ಹಗುರಾಗುತ್ತಾಳೆ. "ಸುತ್ತ ಥಾನು ಥಾನು ನಂಬಿಕೆಯ ಸುರುಳಿಗಳನ್ನು ಯಾರು ನೇಯುವರೋ ಹೊತ್ತು ತಂದು ಹೆಣ್ಣುಮಕ್ಕಳನ್ನು ಹುಡುಕಿ ಹುಡುಕಿ ಸುತ್ತುವವರೋ"[೬೬] ಎಂದು ಪ್ರಶ್ನಿಸಿಕೊಳ್ಳುವ ನಿರೂಪಕಿಯಲ್ಲಿ ಪುರುಷ ಶ್ರೇಷ್ಠ ಸ್ತ್ರೀ ಕೀಳೆಂಬ ಶ್ರೇಣಿಕೃತ ವ್ಯವಸ್ಥೆಯ ಬಗ್ಗೆ ವಿರೋಧವನ್ನು ಕಾಣಬಹುದು.

**ಅಡಿ ಟಿಪ್ಪಣಿ:**

೧. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೧೧

೨. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೧೩

೩. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೧

೪. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೧

೫. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೨

೬. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೫

೭. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೬

೮. ವೈದೇಹಿ : "ಅಲೆಗಳಲ್ಲಿ ಅಂತರಂಗ", ಪುಟ ೧೫೬

೯. ಎಚ್. ಎಸ್. ಶ್ರೀಮತಿ "ಹೆಣ್ಣು ಮತ್ತು ಭಾಷೆ", ಪುಟ ೧೫

೧೦. ಮಿತ್ರಾ ವೆಂಕಟ್ರಾಜ್, "ಹಕ್ಕಿ ಮತ್ತು ಅವಳು", ಪುಟ ೧೩

೧೧. ಎಚ್. ಬಿ. ಎಲ್. ರಾವ್, "ಮಿತ್ರಾವಳಿ", ಪುಟ ೬೪

೧೨. ಎಚ್. ಬಿ. ಎಲ್. ರಾವ್, "ಮಿತ್ರಾವಳಿ", ಪುಟ ೬೪

೧೩. ಎಚ್. ನಾಗವೇಣಿ. "ನಾಕವೇ ನೀರು", ಮುನ್ನುಡಿಯಿಂದ

೧೪. ಎಚ್. ನಾಗವೇಣಿ. "ನಾಕವೇ ನೀರು", ಪುಟ ೬

೧೫. ಎಚ್. ನಾಗವೇಣಿ. "ನಾಕವೇ ನೀರು", ಪುಟ ೫೧

೧೬. ಎಚ್. ನಾಗವೇಣಿ. "ನಾಕವೇ ನೀರು", ಪುಟ ೫೧

೧೭. ಎಚ್. ನಾಗವೇಣಿ. "ನಾಕವೇ ನೀರು", ಪುಟ ೫೧

೧೮. ಎಚ್. ನಾಗವೇಣಿ. "ನಾಕವೇ ನೀರು", ಪುಟ ೬೨

೧೯. ಎಚ್. ನಾಗವೇಣಿ. "ನಾಕವೇ ನೀರು", ಪುಟ ೬೩

೨೦. ಎಚ್. ನಾಗವೇಣಿ. "ನಾಕವೇ ನೀರು", ಪುಟ ೬೭

೨೧. ಎಚ್. ನಾಗವೇಣಿ. "ನಾಕವೇ ನೀರು", ಪುಟ ೬೭

೨೨. ಎಚ್. ನಾಗವೇಣಿ. "ನಾಕವೇ ನೀರು", ಪುಟ ೧೨೦

೨೩. ಎಚ್. ನಾಗವೇಣಿ. "ನಾಕವೇ ನೀರು", ಪುಟ ೧೫೫

೨೪. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೪೫

೨೫. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೪೬

೨೬. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೭೯

೨೭. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೭೯

೨೮. ಸಾರಾ ಅಬೂಬಕ್ಕರ್, "ಚಪ್ಪಲಿಗಳು", ಪುಟ ೮೦

೨೯. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೨೮೯

೩೦. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೨೯೯

೩೧. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೨೯೯

೩೨. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೨೯೯

೩೩. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೫೭೫

೩೪. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೫೭೬

೩೫. ವೈದೇಹಿ, "ಅಲೆಗಳಲ್ಲಿ ಅಂತರಂಗ" ಪುಟ ೩೪೬

೩೬. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೬೫

೩೭. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೭೦

೩೮. ಸಾರಾ ಅಬೂಬಕರ್ 'ಚಪ್ಪಲಿಗಳು', ಪುಟ ೭೬

೩೯. ಸಾರಾ ಅಬೂಬಕರ್ 'ಚಪ್ಪಲಿಗಳು', ಪುಟ ೩೧

೪೦. ಹೆಚ್. ನಾಗವೇಣಿ 'ನಾಕನೇ ನೀರು', ಪುಟ ೬೫

೪೧. ಹೆಚ್. ನಾಗವೇಣಿ 'ನಾಕನೇ ನೀರು', ಪುಟ ೧೩೮

೪೨. ಹೆಚ್. ನಾಗವೇಣಿ 'ನಾಕನೇ ನೀರು', ಪುಟ ೧೭೪

೪೩. ಹೆಚ್. ನಾಗವೇಣಿ 'ನಾಕನೇ ನೀರು', ಪುಟ ೧೭೪

೪೪. ಹೆಚ್. ನಾಗವೇಣಿ 'ನಾಕನೇ ನೀರು', ಪುಟ ೧೭೫

೪೫. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೮

೪೬. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೧೩

೪೭. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೧೨೪

೪೮. ಹೆಚ್. ನಾಗವೇಣಿ 'ಮೀಯುವ ಆಟ', ಪುಟ ೧೨೪

೪೯. ಎಚ್. ನಾಗವೇಣಿ "ಮೀಯುವ ಆಟ" ಪುಟ ೭೮

೫೦. ಎಚ್. ನಾಗವೇಣಿ 'ಮೀಯುವ ಆಟ" ಪುಟ ೮೨

೫೧. ಎಚ್. ನಾಗವೇಣಿ "ಮೀಯುವ ಆಟ" ಪುಟ ೮೫

೫೨. ಎಚ್. ನಾಗವೇಣಿ "ಮೀಯುವ ಆಟ" ಪುಟ ೧೪೫

೫೩. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೪. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೫. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೬. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೭. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೮. ಗಂಗಾ ಪಾದೇಕಲ್ 'ಸಮಗ್ರ ಕತೆಗಳು', ಪುಟ ೧೧೪

೫೯. ವೈದೇಹಿ 'ಅಂತರಂಗದ ಪುಟಗಳು' ಪುಟ ೨೫೪

೬೦. ವೈದೇಹಿ 'ಅಂತರಂಗದ ಪುಟಗಳು' ಪುಟ ೨೫೫

೬೧. ಅನುಪಮ ಪ್ರಸಾದ್, 'ಜೋಗತಿ ಜೋಳಿಗೆ', ಪುಟ ೬೮

೬೨. ಅನುಪಮ ಪ್ರಸಾದ್, 'ಜೋಗತಿ ಜೋಳಿಗೆ', ಪುಟ ೬೮

೬೩. ವೈದೇಹಿ 'ಅಲೆಗಳಲ್ಲಿ ಅಂತರಂಗ' ಪುಟ ೩೫೪

೬೪. ವೈದೇಹಿ 'ಅಲೆಗಳಲ್ಲಿ ಅಂತರಂಗ' ಪುಟ ೩೫೫

೬೫. ವೈದೇಹಿ 'ಅಲೆಗಳಲ್ಲಿ ಅಂತರಂಗ' ಪುಟ ೩೫೬

೬೬. ವೈದೇಹಿ 'ಅಲೆಗಳಲ್ಲಿ ಅಂತರಂಗ' ಪುಟ ೩೫೭

೬೭. ವೈದೇಹಿ 'ಅಲೆಗಳಲ್ಲಿ ಅಂತರಂಗ' ಪುಟ ೩೫೮

## ಸಮಾರೋಪ

ಭಾರತೀಯ ಸಮಾಜವು ವಿಭಿನ್ನ ಜಾತಿ ಧರ್ಮಗಳ ಹಿನ್ನೆಲೆಯಲ್ಲಿ ವೈವಿಧ್ಯಪೂರ್ಣವಾಗಿ ರೂಪುಗೊಂಡಿದೆ. ಅನೇಕ ಬಗೆಯ ವೈಚಾರಿಕ ನಿಲುವುಗಳನ್ನು, ವೈರುಧ್ಯಗಳನ್ನು ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದ ಭಾರತೀಯ ಸಮಾಜವು ತನ್ನ ಏಳಿಗೆಯಲ್ಲಿ ಮಹಿಳೆಯರ ಪಾತ್ರವೂ ಇದೆ ಎಂಬುದನ್ನು ಒಪ್ಪಿಕೊಂಡುದೇ ಕಳೆದ ಶತಮಾನದಿಂದೀಚೆಗೆ. ಸ್ತ್ರೀ ಪುರುಷ ಸಮಾನತೆಗಾಗಿನ ಹೋರಾಟದಲ್ಲಿ ಬಹಳಷ್ಟು ಏಳುಬೀಳುಗಳನ್ನು ಕಾಣುತ್ತ ಕೊನೆಗೂ ಒಂದಿಷ್ಟು ಸ್ಥಾನ ಪಡೆಯುವಲ್ಲಿ ಮಹಿಳೆ ಯಶಸ್ವಿಯಾಗಿದ್ದಾಳೆ; ಆಗುತ್ತಿದ್ದಾಳೆ.

ಕರಾವಳಿ ಮಹಿಳಾ ಕತೆಗಾರ್ತಿಯರು ಸ್ತ್ರೀ ಸಂವೇದನೆಯನ್ನು ತಮ್ಮ ಬರವಣಿಗೆಯ ಮೂಲಕ ಪ್ರತಿಪಾದಿಸಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಮೊದಲ ತಲೆಮಾರಿನ ಲೇಖಕಿಯರಿಂದ ತೊಡಗಿ ಈಗಿನ ಲೇಖಕಿಯವರಿಗೆ ಎಲ್ಲರೂ ಮಹಿಳಾ ಸಮಸ್ಯೆ ಬಗ್ಗೆ ಗಮನಹರಿಸುತ್ತಾರೆ. ಹೆಣ್ಣು ಪುರುಷನ ಜೀವನದಲ್ಲಿ ಬೇರೆ ಬೇರೆ ಪಾತ್ರಗಳನ್ನು ನಿರ್ವಹಿಸುತ್ತಾ ಬಂದಿದ್ದಾಳೆ.

ಆದರೂ ಆಕೆ ಕುಟುಂಬ ವ್ಯವಸ್ಥೆಯಲ್ಲಿ ಅನೇಕ ನಿರ್ಬಂಧಗಳ ನಡುವೆಯೇ ಬೆಳೆಯಬೇಕಾದ ಸ್ಥಿತಿ ಒದಗಿದೆ. ಪುರುಷ ಪ್ರಧಾನ ಸಮಾಜ ಮಹಿಳೆಯರ ಮೇಲೆ ಮಾಡುವ ದೌರ್ಜನ್ಯ, ದಬ್ಬಾಳಿಕೆ ಶೋಷಣೆಯನ್ನು ಸಾರಾ ಅಬೂಬಕ್ಕರ್, ಮಿತ್ರಾ ವೆಂಕಟ್ರಾಜ್, ಗಂಗಾಪಾದೇಕಲ್, ವೈದೇಹಿ, ಎಚ್. ನಾಗವೇಣಿ, ಅನುಪಮಾ ಪ್ರಸಾದ್. ಈ ಆರು ಲೇಖಕಿಯರು ಯಾವುದೇ ರೀತಿಯ ಅಂಜಿಕೆ, ಭಯವಿಲ್ಲದೆ ತಮ್ಮ ಕೃತಿಗಳಲ್ಲಿ ಮಹಿಳೆಯರ ಸಮಸ್ಯೆಗಳನ್ನು ಅಭಿವ್ಯಕ್ತಪಡಿಸುತ್ತಾ ಬಂದಿದ್ದಾರೆ.

ಇಸ್ಲಾಂ ಮತ್ತು ಹಿಂದೂ ಸಮಾಜಗಳೆರಡರಲ್ಲೂ ಮುಗ್ಧ, ಸಂಪ್ರದಾಯಸ್ಥ ಮಹಿಳೆಯರ ಮೇಲೆ ದೌರ್ಜನ್ಯ ಮತ್ತು ಶೋಷಣೆಗಳಾಗುತ್ತಿವೆ. ಮಹಿಳೆಯರು, ಅಬಲೆಯರು, ಪರಾವಲಂಬಿ, ಅಡುಗೆ ಮಾಡಲು, ಮಕ್ಕಳೆರಲು, ಗಂಡನ ಸೇವೆ ಮಾಡುವ ದಾಸಿ, ಯಾವುದೇ ರೀತಿಯ ಹಕ್ಕು ಬಾಧ್ಯತೆಗೆ ಅನರ್ಹಳು, ಹೊರಗಿನ ಕೆಲಸಕ್ಕೆ ಹೋಗಬಾರದು ಎಂಬಿತ್ಯಾದಿ ಧೋರಣೆಗಳು ಅಂದಿನಿಂದ ಇಂದಿನವರೆಗೂ ಇದೆ. ಪುರುಷ ಈ ಧೋರಣೆಯನ್ನು ಬದಲಿಸಿ ಸಮಾಜದಲ್ಲಿ ಮಹಿಳೆಗೂ ಉತ್ತಮ

ಸ್ಥಾನ ಕಲ್ಪಿಸಿಕೊಡುವ ಕೆಲಸವನ್ನು ಕರಾವಳಿ ಲೇಖಕಿಯರು ಕತೆಗಳ ಮೂಲಕ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಗಂಗಪಾದೇಕಲ್‌ರವರ ಕಥೆಗಳನ್ನು ಗಮನಿಸಿದಾಗ ಮನುಷ್ಯ ಸಂಬಂಧಗಳ ಸಂಕೀರ್ಣತೆ, ಜಟಿಲತೆಗಳ ವಿಶ್ಲೇಷಣೆ ಅವರ ಮುಖ್ಯ ಕಾಳಜಿಯಾಗಿದೆ. ಧರ್ಮದ ಕೆಲವು ಆಚರಣೆ, ಸಂಪ್ರದಾಯ, ರೀತಿ ರಿವಾಜುಗಳನ್ನು ಕುರಿತಂತೆ ಮೂಲಭೂತ ಪ್ರಶ್ನೆಗಳನ್ನು ಎತ್ತುವ ಕತೆಗಳು ಜಾತಿ, ವರ್ಗದ ಶೋಷಣೆಯ ನೆಲೆಗಳನ್ನು ವಿಶ್ಲೇಷಿಸುವ ಕತೆಗಳು ಹಾಗೂ ಸ್ತ್ರೀವಾದಿ ನಿಲುವನ್ನು ಹೊಂದಿರುವ ಕತೆಗಳು ಇವೆ. ಗಂಗಾಪಾದೇಕಲ್‌ರವರ ಎಲ್ಲ ಕತೆಗಳಲ್ಲಿ ಸಂಪ್ರದಾಯಗಳನ್ನು ಕಣ್ಣುಮುಚ್ಚಿ ಪಾಲಿಸುವುದನ್ನು ನಿರಾಕರಿಸುತ್ತಾ, ಕಾಲಕಾಲಕ್ಕೆ ಬದಲಾದ ಮೌಲ್ಯಗಳೊಂದಿಗೆ ಆಚರಣೆಗಳಲ್ಲೂ ಜೊತೆಗೆ ಬಡತನ, ಲೈಂಗಿಕ ಶೋಷಣೆ, ಶಿಕ್ಷಣ ಮೊದಲಾದ ವಿಷಯಗಳ ಬಗ್ಗೆಯೂ ಬೆಳಕು ಚೆಲ್ಲಿದ್ದಾರೆ.

ಭಗ್ನ, ಪಿಂಡ, ಬೊಜ್ಜ, ಹೆಜ್ಜೆ ಮೂಡದ ಹಾದಿಯಲ್ಲಿ, ಪುಲಪೇಡಿ ಮುಂತಾದ ಕತೆಗಳು ಸಮಾಜದ ನಂಬಿಕೆಗಳು, ಸಂಪ್ರದಾಯ ಮೊದಲಾದ ಅನಿಷ್ಟ ಪದ್ಧತಿಗಳಿಂದ ವ್ಯಕ್ತಿಯ ಶೋಷಣೆಗೆ ಕಾರಣವಾಗುತ್ತವೆ ಎಂಬುದನ್ನು ಚಿತ್ರಿಸುತ್ತವೆ. 'ಕಳ್ಳ', 'ಕಣ್ಣಾ ನೀರೆದ್ದು ಹೊಳೆಯದೊ', 'ಒಂದು ಪ್ರಕರಣದ ಕೊನೆ', 'ಸಾವು' ಮೊದಲಾದ ಕತೆಗಳು ಬಡವರ ಹಸಿವು, ಆಸೆ, ಕನಸುಗಳು ರಾಜಕೀಯ ಡೋಂಗಿತನ ಮೊದಲಾದವುಗಳನ್ನು ಅನಾವರಣ ಮಾಡುತ್ತದೆ. ತಾಯ್ತನ, ಗೃಹಿಣಿತ್ವ, ವೈಧವ್ಯ, ವೃದ್ಧಾಪ್ಯಗಳ ಬಗ್ಗೆ ತಮ್ಮ ಕತೆಗಳಲ್ಲಿ ಚರ್ಚಿಸಿದ್ದಾರೆ.

ಸಾರಾ ಅಬೂಬಕ್ಕರ್‌ರವರು ತಮ್ಮ ಕತೆಗಳಲ್ಲಿ ಸಮಾಜದ ಎಲ್ಲಾ ರೀತಿಯ ಸಮಸ್ಯೆಗಳ ಕಡೆಗೂ ದೃಷ್ಟಿ ಹರಿಸಿದ್ದಾರೆ. ಇವರು ಸಮಾಜದಲ್ಲಿ ಹರಡಿರುವ ಜಾತಿವ್ಯವಸ್ಥೆ, ಧರ್ಮದ ಹೆಸರಿನಲ್ಲಿ ನಡೆಯುವ ಕೋಮುಗಲಭೆ ಬಗ್ಗೆ ತಲಾಖ್, ಬಡತನ, ಶಿಕ್ಷಣದ ಬಗ್ಗೆ ತಮ್ಮ ಕತೆಗಳಲ್ಲಿ ಪ್ರಶ್ನೆಗಳನ್ನು ಮಾಡಿದ್ದಾರೆ.

'ವಿಷ ಉಣಿಸುವವರು', 'ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು', ಮರಿಯಮ್ಮನ ಅಳಿಯ', ತಲಾಖ್ 'ನಿಯಮ ನಿಯಮಗಳ ನಡುವೆ', ಗೋಡೆ, ಬೇಟೆ, ಹೊಸದಿಕ್ಕು, ಹಳೆಬೇರು, ಹೊಸಚಿಗುರು, ಚಪ್ಪಲಿಗಳು, ಸಾರಾಂಶ, ಅಂಕುಶ, ಉರಿಬಿಸಿಲು, ಹುಟ್ಟುಧ್ವನಿಯಲ್ಲದ ನೋವುಗಳು, ಉರಿಬಿಸಿಲು ಮೊದಲಾದ ಕಥೆಗಳಲ್ಲಿ ಮೇಲಿನ ಅಂಶಗಳು ಅನಾವರಣಗೊಂಡಿವೆ.

ಮಿತ್ರಾವೆಂಕಟ್ರಾಜ್‌ರವರ ಕಥೆಗಳಲ್ಲಿ ಸ್ತ್ರೀದನಿ, ಮಹಿಳಾ ಜಗತ್ತು ಅನಾವರಣಗೊಂಡಿದೆ. ಗ್ರಾಮೀಣ ಹಾಗೂ ನಗರ ಜೀವನ ಕ್ರಮದಲ್ಲಾದ ಪಲ್ಲಟ ಮನುಷ್ಯನ ಸ್ವಭಾವದ ವಿವಿಧ ಪರಿಗಳು ಅವರ ಕತೆಗಳಲ್ಲಿ ಸೊಗಸಾಗಿ ಅನಾವರಣಗೊಂಡಿದೆ. ಇವರ ಕತೆಗಳಲ್ಲಿ ವಿಷಯ ದಾಂಪತ್ಯದಲ್ಲಿ ಸಿಲುಕಿ ನಲುಗುವ ಹೆಣ್ಮಕ್ಕಳ ಸ್ಥಿತಿಯನ್ನು ಅನಾವರಣ ಮಾಡಿದ್ದಾರೆ. 'ಇಲ್ಲೊಬ್ಬಳು ಸೀತೆಯ ಸೀತೆ', ಬೊಳ್ಳದ ಸಂಕದ ವೇದಾವತಿ ಹಾಗೂ 'ನಾಗಮ್ಮನ ಗೇಟು' ಕತೆಯ ನಾಗಮ್ಮನ ಪಾತ್ರಗಳು 'ಹಕ್ಕಿ ಮತ್ತು ಅವಳು' ಕತೆಯ ಆರತಿ 'ಹೊಂಡಗಳು' ಕತೆಯ ಭಾರತಿ 'ಕರೆ' ಕತೆಯ ಸರಸೋತಿ ಪಾತ್ರಗಳು, ಅಲ್ಲದೇ ಗಂಡುದಿಕ್ಕಿಲ್ಲದ ವಿವಾಹಿತ ಅವಿವಾಹಿತ, ಹಾಗೂ ವಿಧವೆಯರಾದ ಒಬ್ಬಂಟಿ ಹೆಣ್ಣುಗಳು ನಮ್ಮ ಸಮಾಜದಲ್ಲಿ ಸಾಕಷ್ಟು ಜನ ಸಿಗುತ್ತಾರೆ. ಅಂತಹವರನ್ನು ಮಿತ್ರಾರವರ ಕತೆಗಳಲ್ಲಿ ಕಾಣಬಹುದು.

'ಸೆಳೆತ' ಕತೆಯ ರತ್ನಕ್ಕ, 'ಇನ್ನಿಲ್ಲದ ನಿರೀಕ್ಷೆ' ಕತೆಯ ಅಕ್ಕಯ್ಯ, 'ಕೊನೆಯ ದಿನ' ಕತೆಯ ರಾಜಿ, 'ರುಕುಮಾಯಿ' ಕತೆಯ ಮೂಕಿ ರುಕುಮಾಯಿ ಮೊದಲಾದ ಪಾತ್ರಗಳನ್ನು ಚಿತ್ರಿಸಿದ್ದಾರೆ. ಅದೇ ರೀತಿ ವೈದೇಹಿಯವರು ಕೂಡಾ ಸ್ತ್ರೀ ಸಂವೇದನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದರು ಕೂಡಾ ಎಲ್ಲಿಯೂ ಅವರು ತಮ್ಮನ್ನು ತಾವು ಸ್ತ್ರೀವಾದಿ ಎಂದು ಘೋಷಿಸಿಕೊಂಡಿಲ್ಲ.

ಸಮಾಜ ಮಹಿಳೆಯರನ್ನು ಕಾಣುವ ದೃಷ್ಟಿಕೋನ ಅವಳ ಸಾಮಾಜಿಕ ಸ್ಥಾನಮಾನಗಳು, ಸಮಾಜದಲ್ಲಿರುವ ಆರ್ಥಿಕ ಅಸಮಾನತೆಗಳು ವೈದೇಹಿಯವರ ಕತೆಗಳಲ್ಲಿ ಚರ್ಚೆಗೊಳಗಾಗಿವೆ. ಈ ವಿಷಯಗಳ ಚೌಕಟ್ಟಿನಲ್ಲಿ ದಾಂಪತ್ಯ ವ್ಯವಸ್ಥೆಯಲ್ಲಿರುವ ಕ್ರೌರ್ಯ, ದಾಂಪತ್ಯದಿಂದ ಹೊರತಾಗಿ ಬದುಕಿರುವ ವಿಧವೆ ಮತ್ತು ಅವಿವಾಹಿತರನ್ನು ಕುರಿತ ಸಮಾಜದ ಸೂಕ್ಷ್ಮವಾದ ಕ್ರೌರ್ಯಗಳು ಕಲಾತ್ಮಕವಾಗಿ ಅನಾವರಣಗೊಂಡಿವೆ.

ವೈದೇಹಿಯವರ ಹೆಚ್ಚಿನ ಕಥೆಗಳಲ್ಲಿ ಹೆಣ್ಣುಮಗಳಾಗಿ, ಹೆಂಡತಿಯಾಗಿ, ತಾಯಿಯಾಗಿ, ಸೊಸೆಯಾಗಿ, ಅತ್ತೆಯಾಗಿ ಹೀಗೆ ಬದುಕಿನ ಬೇರೆ ಬೇರೆ ರೀತಿಯ ಪಾತ್ರಗಳಲ್ಲಿ ಹೆಣ್ಣು ಅನುಭವಿಸುವ ಮಾನಸಿಕ ತಾಕಲಾಟಗಳು, ನೋವು ಸಂಕಟಗಳನ್ನು ಇವರ ಕಥೆಗಳು ಅನಾವರಣ ಮಾಡುತ್ತವೆ. ಸುಮಿತ್ರಾಬಾಯಿಯವರು ಹೇಳಿರುವಂತೆ "ಹೆಣ್ಣಿನ ಅನುಭವದ ನೆಲೆಯಿಂದ ಬದುಕಿನತ್ತ ಪರಿಶೀಲನಾತ್ಮಕವಾಗಿ ನೋಡುವ ಕಾಳಜಿ ವೈದೇಹಿಯವರ ಪ್ರಮುಖ ಆಸಕ್ತಿ"[೧] ವೈದೇಹಿಯವರು ಅನುಭವವನ್ನು ಸ್ವತಃ ನೋಡಿ ಅದನ್ನೇ ವಸ್ತುವನ್ನಾಗಿಸಿ ಓದುಗರ ಮುಂದಿಡುತ್ತಾ ಹೋಗುತ್ತಾರೆ.

ಎಚ್. ನಾಗವೇಣಿಯವರ ಕತೆಗಳಲ್ಲಿನ ಸ್ತ್ರೀ ಪಾತ್ರಗಳು ವಿವಿಧ ಜಾತಿಯನ್ನು ಮೈಗೂಡಿಸಿಕೊಳ್ಳುವ ಸ್ತ್ರೀಯರು ವಿವಿಧ ಸಂವೇದನೆಗಳ ಮೂಲಕ ಚಿತ್ರಿತವಾಗಿದ್ದಾರೆ. ಶ್ರಮಿಕ ವರ್ಗದ, ಕೆಳವರ್ಗದ ಸ್ತ್ರೀ ಪಾತ್ರಗಳು ಗಟ್ಟಿಪಾತ್ರಗಳಾಗಿ ಚಿತ್ರಿತವಾಗಿವೆ. ಎಚ್. ನಾಗವೇಣಿಯವರ ಕತೆಗಳ ಬಗ್ಗೆ ಡಾ.ಮಮತಾಜಿ ಸಾಗರರವರ ಮಾತಿನಂತೆ "ಕಡಲತಡಿಯ ಸಾಮಾನ್ಯ ಜನರ ಅದರಲ್ಲೂ ಬ್ರಾಹ್ಮಣೇತರ ಜನಸಾಮನ್ಯರ ಬದುಕಿನ ಪದರಗಳನ್ನು ತೆರೆದಿಡುತ್ತಾ ಸಮಕಾಲೀನ ಸಾಮಾಜಿಕ ಬದುಕಿನ ವ್ಯಂಗ್ಯಗಳನ್ನು ಬಹಳ ಸೂಕ್ಷ್ಮವಾಗಿ ಸೆರೆಹಿಡಿಯುವಲ್ಲಿ ಈ ಕಥೆಗಳು ಸಾರ್ಥಕವಾಗಿವೆ"[೨] ಎಂದಿದ್ದಾರೆ.

ಅನುಪಮಾ ಪ್ರಸಾದ್‌ರವರ ಕತೆಗಳಲ್ಲಿನ ಪಾತ್ರಗಳು ದಿನನಿತ್ಯದ ಕಷ್ಟಕೋಟಲೆಗಳನ್ನು ಎದುರಿಸುವ ನಮ್ಮ ಸುತ್ತಮುತ್ತಲ ಪಾತ್ರಗಳನ್ನೇ ವಸ್ತುವನ್ನಾಗಿರಿಸಿಕೊಂಡಿವೆ. ಹೆಣ್ಣಿನ ಅಸಹಾಯಕತೆ, ಗಂಡು ತೋರಿಸುವ ಔದಾಸೀನ ಪ್ರವೃತ್ತಿಗಳು ಇವರ ಕತೆಗಳಲ್ಲಿ ಕಂಡು ಬರುತ್ತವೆ.

ಒಟ್ಟಾಗಿ ಹೇಳುವುದಾದರೆ ೬ ಜನ ಲೇಖಕಿಯರ ಕತೆಗಳಲ್ಲಿ ಪ್ರತಿರೋಧದ ನೆಲೆಗಳನ್ನು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ.

ಸ್ತ್ರೀ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಿದವರಲ್ಲಿ ಕರಾವಳಿಯವರು ಮುಂಚೂಣಿಯಲ್ಲಿದ್ದರು. ಹಾಗೆ ಹುಟ್ಟಿಕೊಂಡ ಒಂದು ಶಿಕ್ಷಿತ ಮಹಿಳಾ ಪರಂಪರೆಯೊಂದರ ಅಸ್ತಿತ್ವ ಇಲ್ಲಿ ಮಹಿಳಾ ಸಾಹಿತ್ಯ ಪರಂಪರೆಯೊಂದು ಗಟ್ಟಿಗೊಳ್ಳುವುದಕ್ಕೆ ಕಾರಣವಾಯಿತು.ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳಲ್ಲಿ ಬಂಧಿಯಾಗಿದ್ದ ಮುಸ್ಲಿಂ ಮಹಿಳಾ ಹೆಣ್ಣುಮಕ್ಕಳಲ್ಲಿ ಜಾಗೃತಿ ಮೂಡಿಸುವಲ್ಲಿ ಜಿಲ್ಲೆಯ ಮಹಿಳಾ ಲೇಖಕಿಯರ ಕೊಡುಗೆ ಬಹಳ ದೊಡ್ಡದು. ಸಾರಾ ಅವರ ಕಥನಗಳು ಐತಿಹಾಸಿಕ ಮಹತ್ವವನ್ನು ಪಡೆಯುತ್ತವೆ.ಮಾತೃಪ್ರಧಾನ ಕುಟುಂಬ ವ್ಯವಸ್ಥೆಯೊಂದು ಚಾಲ್ತಿಯಲ್ಲಿರುವ ಕರಾವಳಿಯಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಹೆಣ್ಣು ಒಂದಿಷ್ಟು ಸಬಲಳಂತೆ ಕಂಡದ್ದು ಇದೆ.

ಲೇಖಕಿಯರ ಫಲಿತಗಳು ಕತೆಗಳಲ್ಲಿ ಹೆಣ್ಣು ಅನುಭವಿಸುವ ಮಾನಸಿಕ ತಾಕಲಾಟಗಳು ಅನ್ಯಾಯ, ದೌರ್ಜನ್ಯಗಳು ಅನಾವರಣಗೊಂಡಿವೆ. ಸಮಾಜದಲ್ಲಿ ತನ್ನ ಸ್ಥಾನಮಾನವನ್ನು ಅದಕ್ಕೆ ಕಾರಣಗಳನ್ನು ಶೋಧಿಸುತ್ತಲೇ ಪರ್ಯಾಯವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಕತೆಗಳಲ್ಲಿನ ಪಾತ್ರಗಳು ತೊಡಗಿರುವುದು ಗಮನಾರ್ಹವಾಗಿದೆ.

ಹಲವು ಕಥೆಗಳ ಸ್ತ್ರೀಪಾತ್ರಗಳಲ್ಲಿ ಧೈರ್ಯ ಮತ್ತು ದಿಟ್ಟತನಗಳು ಪ್ರಧಾನ ಆಶಯಗಳಾಗಿ ಕಾಣಿಸುತ್ತವೆ. ಇದರಿಂದಾಗಿ ಸ್ತ್ರೀಪಾತ್ರಗಳು ವ್ಯವಸ್ಥೆಯು ತಮಗೆ ವಿಧಿಸಿರುವ ನಿರ್ಬಂಧ ಮತ್ತು ಗಡಿಗಳ ಸೂಕ್ಷ್ಮ ಅಂತರಗಳನ್ನು ಕೆದಕಿ ನೋಡುತ್ತ ಅವನ್ನು ಮೀರಲು ಯತ್ನಿಸುತ್ತವೆ.ಅವಿದ್ಯಾವಂತರಾದ, ಸ್ವತಂತ್ರವಾಗಿ ಆಲೋಚಿಸಿ ನಿರ್ಧಾರ ಕೈಗೊಳ್ಳಬಲ್ಲ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸಿದ ಹೆಣ್ಣುಮಕ್ಕಳು ಈ ಕಾಲದ ಕಥೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಅವರು ತಮಗಾದ ಅಧ್ಯಾಯಕ್ಕೆ ಕೊರಗುತ್ತಾ ಕೂರದೆ ಮೈಕೊಡವಿ ಎದ್ದು ಕಾರ್ಯಪ್ರವೃತ್ತರಾಗುವ ಸ್ವಾವಲಂಬಿ ಮಹಿಳೆಯರಾಗಿದ್ದಾರೆ.

ಕುಟುಂಬ ಮತ್ತು ಇತರೆಡೆಗಳ ಸಂಬಂಧಗಳಲ್ಲಿ ಕಾಣಿಸಿಕೊಳ್ಳುವ ಬಿರುಕುಗಳಲ್ಲಿ ಮಹಿಳೆಯ ಪ್ರತಿರೋಧದ ನೆಲೆ ಕಾಣಿಸಿಕೊಂಡಿದೆ. ಭಾವನೆಗಳ ಬಲೆಯಲ್ಲಿ ಸಿಲುಕಿಸಿ ತಮ್ಮನ್ನು ಶೋಧಿಸುತ್ತಿದ್ದ ಸಮಾಜದ ವಿರುದ್ಧ ಅವರು ತಿರುಗಿ ಬಿದ್ದಿರುವುದು ಕಾಣಿಸುತ್ತದೆ.

ಆರ್ಥಿಕ ಸ್ವಾವಲಂಬನೆ, ಹೆಣ್ಣುಮಕ್ಕಳಿಗೆ ಅನಿವಾರ್ಯವಾದಾಗ ಹೊರನಡೆದು ಸ್ವತಂತ್ರವಾಗಿ ಬದುಕುವ ಶಕ್ತಿ ಕೊಡಬಲ್ಲದು ಎಂಬುದನ್ನು ಕತೆಗಳಲ್ಲಿ ಕಾಣಬಹುದು.

ಕರಾವಳಿಯ ಲೇಖಕಿಯರಲ್ಲಿ ಸಾಮಾಜಿಕ ಶೈಕ್ಷಣಿಕ, ಕೌಟುಂಬಿಕ ಹಿನ್ನೆಲೆಗಳೊಂದಿಗೆ ಮೂಡಿಬಂದಿರುವ ಸ್ತ್ರೀಪರ ಕಾಳಜಿಗಳನ್ನು ವಿಶ್ಲೇಷಿಸಿ ಆ ಮೂಲಕ ಸ್ತ್ರೀವಾದಿ ಚಿಂತನೆ ಇವರ ಕತೆಗಳಲ್ಲಿ ದಾಖಲಾಗಿರುವುದನ್ನು ಪರಿಶೀಲಿಸಲಾಗಿದೆ.

**ಅಡಿಟಿಪ್ಪಣಿ**

೧ ವೈದೇಹಿ 'ಕತೆಕತೆ ಕಾರಣ' ಹಿನ್ನುಡಿಯಿಂದ.

೨ ಎಚ್. ನಾಗವೇಣಿ 'ಮೀಯುವ ಆಟ' ಹಿನ್ನುಡಿಯಿಂದ.

**ಫಲಿತಗಳು**

ಕರಾವಳಿ ಮಹಿಳಾ ಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು ವಿಷಯವನ್ನು ಕುರಿತು ಪ್ರತಿನಿಧಿಕ ಬರಹಗಾರ್ತಿಯರ ಪದ್ಯ, ಪದ್ಯೇತರ ಕೃತಿಗಳನ್ನು ಕೇಂದ್ರವಾಗಿಟ್ಟುಕೊಂಡು ನಡೆಸಿದ ಅಧ್ಯಯನದ ಒಟ್ಟು ಫಲಿತಗಳು "ಸಾಹಿತ್ಯಿಕ ಕ್ರಿಯೆಯಲ್ಲಿ ತೊಡಗಿದ ಸೃಜನಶೀಲ ಮನಸ್ಸು ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸುತ್ತಿರುತ್ತದೆ. ಆದರೆ ಕ್ರಿಯೆ ಅಯೋಚಿತವಾಗಿ ನಡೆಯುತ್ತಿದೆಯೇ ಹೊರತು ಪೂರ್ವ ಯೋಜಿತವಾಗಿ ಅಲ್ಲ. ಅನ್ವೇಷಕ ಪ್ರವೃತ್ತಿಯೇ ಹಿರಿಮೆಯಾಗಿವುಳ್ಳ ಸೃಜನಶೀಲತೆ ಇಂತಹ ತರ್ಕ ಬದ್ಧತೆಯ ಅಪಾಯಕ್ಕೆ ಸಿಕ್ಕಲಾರದು ಕೂಡ. ಸಾಹಿತ್ಯದ ಸೂಕ್ಷ್ಮಗಳನ್ನು ಗ್ರಹಿಸುವಾಗ ಅದಕ್ಕೆ ಕಾರಣವಾದ ಸಾಂಸ್ಕೃತಿಕ ಸಂದರ್ಭವನ್ನು ನೆಲೆಯಾಗಿ ಇರಿಸಿ ನೋಡುವ ಅಗತ್ಯ ಈ ಎಚ್ಚರವನ್ನು ಕಾಯ್ದುಕೊಂಡ ನಂತರವೇ ಸಾಧ್ಯವಾಗಬೇಕು".[೧] "'ಸಂಸ್ಕೃತಿ' ಎಂದರೆ ಸೃಜನಶೀಲ ಮನಸ್ಸುಗಳ ಮೊತ್ತವಷ್ಟೇ ಆಗಿರುವುದಿಲ್ಲ. ಈ ಪದದ ಅರ್ಥ ಒಂದು ಸಮಾಜದ ಜೀವನ ಕ್ರಮವನ್ನೇ ಪ್ರತಿನಿಧಿಸಬಲ್ಲಷ್ಟು ವಿಶಾಲ ಅರ್ಥದವರೆಗೂ ಚಾಚಿಕೊಳ್ಳುತ್ತದೆ"[೨] ಈ ನೆಲೆಯಲ್ಲಿ ಕರಾವಳಿ ಮಹಿಳಾ ರಚನೆಗಳಲ್ಲಿ ಸಾಂಸ್ಕೃತಿಕ ಸಂಗತಿಗಳು ಅನಾವರಣಗೊಂಡಿರುವ ಬಗೆ ಈ ಕೆಳಗಿನಂತಿದೆ. ತಾಯ್ತನ, ಗೃಹಿಣಿತ್ವ, ಮಗಳು, ಸೊಸೆ, ವೈಧವ್ಯ, ವೃದ್ಧಾಪ್ಯ, ಲೈಂಗಿಕ ಸಮಸ್ಯೆ, ಬಡತನ, ಆರ್ಥಿಕ, ಶಿಕ್ಷಣ, ಜಾತಿ, ಧರ್ಮ ಇತ್ಯಾದಿ ಸಮಸ್ಯೆಗಳ ಬಗೆಗಿನ ಕಾಳಜಿಗಳು. ಈ ಮೇಲೆ ಪ್ರಸ್ತಾಪಿಸಿದ ಸಮಸ್ಯೆಗಳ ಬಗ್ಗೆ ಕರಾವಳಿ ಮಹಿಳಾ ಕತೆಗಾರ್ತಿಯರು ಪ್ರತಿಸ್ಪಂಧಿಸಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಸಣ್ಣ ಕತೆಗಾರರಿಗೆ ನವೋದಯ ಕಾಲದಿಂದಲೂ ಕಾಡುವ ಸಂವೇದನೆ ಉಂಟುಮಾಡುವ ವಿಷಯವೆಂದರೆ 'ತಾಯ್ತನ'. ಈ ತಾಯ್ತನದಿಂದ ಒಡಮೂಡಿದ ಮಾತೃ ಪ್ರೀತಿಯನ್ನು ತಾನೇ ಹೊತ್ತ ಮಗುವಿಗೆ ನೀಡಬೇಕೆಂದಿಲ್ಲ ಎಂಬ ಅರ್ಥವ್ಯಾಪ್ತಿಯುಳ್ಳ ಕತೆ ಗಂಗಾಪಾದೇಕಲ್ ಎಚ್. ನಾಗವೇಣಿಯವರ 'ಪರಿಹಾರ' ಅಂತರ್ ಧರ್ಮಿಯ ತಾಯ್ತನದ ಪ್ರತೀಕವಾಗಿ ಇಸಂಬ್ಯಾರಿ, ದ್ವೇಷಕ್ಕಿಂತ ಪ್ರೀತಿ, ವಿಶ್ವಾಸ, ಮಾನವೀಯತೆ ಮುಖ್ಯ ಎಂಬುದನ್ನು ಸಮಾಜಕ್ಕೆ ಈ ಮೂಲಕ ತಿಳಿಸುತ್ತಾಳೆ.

ವೈದೇಹಿಯರು ಬ್ರಾಹ್ಮಣ ಸಮಾಜದ ಚಿತ್ರಣವನ್ನು ಕಟ್ಟಿಕೊಡುವುದರ ಜೊತೆಗೆ ಕೆಳಜಾತಿಯ ಜನರ ಬದುಕಿನ ಕಷ್ಟನಷ್ಟಗಳಿಗೆ ಸ್ಪಂಧಿಸಿದ್ದಾರೆ. ವೈಧವ್ಯ ಬಡತನ ಮೊದಲಾದ ಸಮಸ್ಯೆಗಳನ್ನು ಕೆಳಜಾತಿ ಹಿನ್ನೆಲೆಯಲ್ಲಿ ವಿಶ್ಲೇಷಿಸಲು ಯತ್ನಿಸಿದ್ದಾರೆ.

ಎಚ್. ನಾಗವೇಣಿಯವರ ಕತೆಗಳಲ್ಲಿ ಬಡವರು, ಕೆಳಜಾತಿಯವರ ಬಗೆಗೆ ತೀವ್ರ ಅನುಕಂಪ ವ್ಯಕ್ತವಾಗಿದೆ. ಜಾತಿ ವ್ಯವಸ್ಥೆಯ ಕರಾಳತೆಯ ಬಗೆಗೆ ಇವರು ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದಾರೆ.

ಈ ಎಲ್ಲಾ ಲೇಖಕಿಯರು ಶಿಕ್ಷಣದ ಅಗತ್ಯತೆಯನ್ನು ಪ್ರತಿಪಾದಿಸಿದ್ದಾರೆ. ಅದರಲ್ಲೂ ಶಿಕ್ಷಣ ಸ್ತ್ರೀ ಚಿಂತನೆಗೆ ಹೆಚ್ಚು ಒತ್ತು ನೀಡಿದ್ದಾರೆ. ಸ್ತ್ರೀ ಶಿಕ್ಷಣದ ಸ್ವರೂಪದ ಬಗೆಗೆ ಖಚಿತ ನಿಲುವುಳ್ಳವರಾಗಿದ್ದಾರೆ. ಸ್ತ್ರೀ ಶಿಕ್ಷಣ ಪಡೆದರೆ ಸ್ವಾವಲಂಬನೆಯ ಬದುಕನ್ನು ಕಟ್ಟಿಕೊಳ್ಳಲು ಸಹಕಾರಿಯಾಗುತ್ತದೆ ಎಂಬುದನ್ನು ಪ್ರತಿಪಾದಿಸಿದ್ದಾರೆ.

ಸಾರಾ ಅಬೂಬಕ್ಕರ್‌ರವರು ಧರ್ಮದ ಹೆಸರಿನಲ್ಲಿ ನಡೆಯುವ ಮೌಢ್ಯವನ್ನು ಖಂಡಿಸುತ್ತಾರೆ. ಧರ್ಮದ ನಿಜವಾದ ಮಾರ್ಗದರ್ಶನವನ್ನು ಅರಿತು ನಡೆಯಬೇಕೆಂದು ಪ್ರತಿಪಾದಿಸುತ್ತಾರೆ. ಅದರಲ್ಲೂ ಸ್ತ್ರೀಯರ ವಿಷಯದಲ್ಲಿ ಹೇರಿರುವ ಧಾರ್ಮಿಕ ಕಟ್ಟಳೆಗಳನ್ನು ಚಿಕಿತ್ಸಕವಾಗಿ ಲೇಖಕಿಯರು ಧಾರ್ಮಿಕ ಕಂದಾಚಾರಗಳನ್ನು ವೈಚಾರಿಕ, ತಾರ್ಕಿಕ ದೃಷ್ಟಿಕೋನದಿಂದ ವಿಮರ್ಶಿಸಿದ್ದಾರೆ. (ಒಂದು ಬಾಗಿಲ ಸದ್ದು, ಬಿಳಿ ಕಾಗೆ, ಪುಲಪೇಡಿ) ಧರ್ಮ ಜಾತಿಗಳ ಹೆಸರಿನಲ್ಲಿ ಅನ್ಯಾಯಕ್ಕೀಡಾದವರು ಯಾವ ಮುಲಾಜಿಗೂ ಒಳಪಡದೆ, ಅಂತಹವುಗಳನ್ನು ತಿರಸ್ಕರಿಸಿ ಹೊಸದಾರಿ ಹಿಡಿದು ಬಿಡುವಂತೆ ಸ್ತ್ರೀ-ವ್ಯಕ್ತಿ ಚಿತ್ರಣ ನೀಡಿದ್ದಾರೆ.

ವೈದೇಹಿ, ಗಂಗಾಪಾದೇಕಲ್, ಮಿತ್ರಾವೆಂಕಟ್ರಾಜ್‌ರವರು ಧರ್ಮ, ಸಂಸ್ಕೃತಿಯ ಮೌಲ್ಯಗಳಡಿಯಲ್ಲಿ ಬೆಳೆದ ಕಾರಣ ತೀವ್ರವಾದ ಧರ್ಮ ಜಿಜ್ಞಾಸೆಯನ್ನೇನೂ ಮಾಡಿದಂತಿಲ್ಲ.

ಲೇಖಕಿಯರು ಸ್ತ್ರೀಪುರುಷ ಸಮಾನತೆಯನ್ನು ಆಶಿಸಿ ಆಗ್ರಹಿಸಿದ್ದಾರೆ. ಹೆಣ್ಣು ಮಕ್ಕಳಿಗೆ ಆಸ್ತಿಯಲ್ಲಿ 'ಪಾಲು' ನೀಡಬೇಕೆಂಬ ಸಣ್ಣ ದನಿಯನ್ನೆತ್ತಿದ್ದಾರೆ. ವಿಧವಾ ಸಮಸ್ಯೆಗೆ ಪರಿಹಾರವಾಗಿ ಈ ಸಂಗತಿಯನ್ನು ಪ್ರತಿಪಾದಿಸಿದ್ದಾರೆ. ರಾಜಕೀಯದಲ್ಲಿ ಇಂದಿಗೂ ಚರ್ಚೆಯಲ್ಲಿರುವ ಮಹಿಳಾ ಮೀಸಲಾತಿ ಪ್ರಶ್ನೆಯನ್ನು ಆಗಲೇ ಎತ್ತಿದ್ದಾರೆ. ಸ್ತ್ರೀ ಜಾಗೃತಿ ಎಚ್ಚೆತ್ತುಕೊಂಡಿದೆ. ಸಮಕಾಲೀನ ಸಾಮಾಜಿಕ ರಾಜಕೀಯ ಸಂಗತಿಗಳಿಗೆ ಸ್ಪಂದಿಸಿರುವುದು ಸ್ತ್ರೀ ಸಂವೇದನಾ ನೆಲೆಯಿಂದ ಗಮನಾರ್ಹ ಸಂಗತಿ.

ಕರಾವಳಿ ಲೇಖಕಿಯರು ತಮ್ಮ ಸಮಕಾಲೀನ ಸಮಾಜದ ಕೆಲಸವು ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಗತಿಗಳಿಗೆ ತಾವು ಜೀವನದಲ್ಲಿ ಕಂಡುಂಡ ನೋವಿನ, ಅನುಭವದ ಸಂಗತಿಯನ್ನು ಕೇಂದ್ರ ಸ್ಥಾಯಿಯಾಗಿಟ್ಟುಕೊಂಡು ಉಳಿದ ಸಂಗತಿಗಳಿಗೆ ಅನುಷಂಗಿಕವಾಗಿ ಸ್ಪಂದಿಸಿರುವುದು ಕಂಡು ಬರುತ್ತದೆ.

ಅಲ್ಲದೆ ಆಯಾ ಲೇಖಕಿಯ ಕೇಂದ್ರ ಕಾಳಜಿಯ ಜೊತೆಗೆ ಲೈಂಗಿಕ ಸಮಸ್ಯೆ ವಿಧವಾ ವಿವಾಹ, ಬಡತನ ಸಮಸ್ಯೆ ಮೊದಲಾದವುಗಳ ಕಡೆಗೂ ಬೆಳಕು ಚೆಲ್ಲಿರುವುದನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ವೈದೇಹಿ, ಗಂಗಾಪಾದೇಕಲ್, ಮಿತ್ರಾವೆಂಕಟ್ರಾಜ್, ಸಾರಾ ಅಬೂಬಕ್ಕರ್, ಎಚ್. ನಾಗವೇಣಿ, ಅನುಪಮಾ ಪ್ರಸಾದ್ ಲೇಖಕಿಯರ ಪಠ್ಯಗಳಲ್ಲಿ ಸಹಜವಾಗಿ ಅಭಿವ್ಯಕ್ತಗೊಂಡ ತಾತ್ವಿಕತೆಯಲ್ಲಿ ಸ್ತ್ರೀವಾದಿ ಚಿಂತನೆಗೆ ಸಮನಾದ ಪೂರಕವಾದ ನಿರ್ವಚನವಿರುವುದನ್ನು ಗುರುತಿಸಬಹುದು. ಸ್ತ್ರೀಪಾತ್ರ ಚಿತ್ರಣದಲ್ಲಿ ಎಚ್ಚೆತ್ತ ಸ್ತ್ರೀ ಪ್ರಜ್ಞೆಯನ್ನು ಗುರುತಿಸಬಹುದು. ಲೇಖಕಿಯರ ಪಠ್ಯಗಳಲ್ಲಿ ಸ್ತ್ರೀವಾದಿ ಸೈದ್ಧಾಂತಿಕತೆಗೆ ಪೂರಕವಾದ ಸ್ತ್ರೀಪ್ರಜ್ಞೆ, ಸ್ತ್ರೀಸ್ವಾಯತ್ತತೆ, ಸ್ತ್ರೀವಾದಿ ದೃಷ್ಟಿಕೋನವನ್ನು ಒಳಗೊಂಡಿರುವುದನ್ನು ತಿಳಿಯಬಹುದು. ಕರಾವಳಿ ಲೇಖಕಿಯರ ಸ್ತ್ರೀಪಾತ್ರಗಳು ಶೋಷಣೆಗೆ ವ್ಯತಿರಿಕ್ತವಾಗಿ ತೆರೆದುಕೊಳ್ಳುವ ರೀತಿ ತೀವ್ರ ಸ್ವರೂಪವುಳ್ಳದ್ದು.

- ಕುಟುಂಬದಲ್ಲಿ ಹೆಣ್ಣು ಅನುಭವಿಸುವ ಮಾನಸಿಕ ತಾಕಲಾಟ ಆಕೆಯ ಮನೋಲೋಕದ ಅತ್ಯಂತ ಒಳಗಿನ ಪದರದ ಅನಾವರಣ ಮಾಡಲಾಗಿದೆ. ಸಮಾಜದಲ್ಲಿ ತನ್ನ ಸ್ಥಾನಮಾನವನ್ನು, ಅದಕ್ಕೆ ಕಾರಣಗಳನ್ನು ಶೋಧಿಸುತ್ತಲೇ ಪರ್ಯಾಯವನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ಇಲ್ಲಿನ ಮಹಿಳೆಯರು ತೊಡಗಿರುವುದು ಗಮನಾರ್ಹವಾಗಿದೆ.

- ಹಲವು ಕತೆಗಳ ಸ್ತ್ರೀಪಾತ್ರಗಳಲ್ಲಿ ಧೈರ್ಯ ಮತ್ತು ದಿಟ್ಟತನಗಳು ಪ್ರಧಾನ ಆಶಯಗಳಾಗಿ ಕಾಣಿಸುತ್ತವೆ. ಸ್ತ್ರೀ ಪಾತ್ರಗಳು ಪುರುಷ ಪ್ರಧಾನ ವ್ಯವಸ್ಥೆಯು ತಮಗೆ ವಿಧಿಸಿರುವ ನಿರ್ಬಂಧ ಮತ್ತು ಗಡಿಗಳ ಸೂಕ್ಷ್ಮ ಅಂತರಗಳನ್ನು ಕೆದಕಿ ನೋಡುತ್ತ ಅವುಗಳನ್ನು ಮಿರಲು ಯತ್ನಿಸುತ್ತವೆ.

- ಕತೆಗಳಲ್ಲಿ ಮಹಿಳೆಯರು ತಮಗಾದ ಅನ್ಯಾಯಕ್ಕೆ ಕೊರಗುತ್ತ ಕೂಡದೆ, ಮೈ ಕೊಡವಿ ಎದ್ದು ಕಾರ್ಯ ಪ್ರವೃತ್ತರಾಗುವ ಸ್ವಾವಲಂಬಿಗಳಾಗಿದ್ದಾರೆ.

- ಮುಸ್ಲಿಂ ಜನಾಂಗದ ಹೆಣ್ಣುಮಕ್ಕಳ ಒಳವೇದನೆಗಳನ್ನು ಅರಿತ ಸಾರಾಅಬೂಬಕ್ಕರ್‌ರವರು ಮುಸ್ಲಿಂ ಸಂವೇದನೆಗೆ ದನಿಯಾದರು.

- ಬೇರೆ ಬೇರೆ ಪ್ರದೇಶಗಳ ವೈದಿಕ, ಬಂಟ, ದಲಿತ, ಮುಸ್ಲಿಂ ಸಮುದಾಯಗಳ ಮಧ್ಯಮ, ಬಡವರ್ಗದ ಮಹಿಳೆಯರ ಜೀವನವನ್ನೇ ಕತೆಗಳು ಒಳಗೊಂಡಿವೆ.

❖ ಕುಟುಂಬ ಸಂಬಂಧಗಳಲ್ಲಿ ಕಾಣಿಸಿಕೊಳ್ಳುವ ಬಿರುಕುಗಳಲ್ಲಿ ಮಹಿಳೆಯರ ಪ್ರತಿರೋಧದ ನೆಲೆ ಕಾಣಿಸಿಕೊಂಡಿದೆ. ಮಹಿಳೆಯರನ್ನು ಭಾವನಾತ್ಮಕವಾಗಿ ಬಳಸಿಕೊಂಡು ಶೋಷಿಸುತ್ತಿದ್ದ ಕುಟುಂಬದ ವಿರುದ್ಧ ತಿರುಗಿಬಿದ್ದಿರುವುದು ಕಾಣಿಸುತ್ತದೆ.

**ಮುಂದಿನ ಅಧ್ಯಯನದ ಸಾಧ್ಯತೆಗಳು**

- ಕರಾವಳಿ ಕಥಾಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ಕುರಿತು ಅಧ್ಯಯನ ಮಾಡಬಹುದು.
- ಕರಾವಳಿಯ ಸಾಹಿತ್ಯದ ಇತ್ತೀಚಿನ ಒಲವುಗಳು ಎಂಬುದರ ಬಗ್ಗೆ ಅಧ್ಯಯನ ಮಾಡಬಹುದು
- ಕರಾವಳಿ ಮಹಿಳಾ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಪಲ್ಲಟಗಳು ಕುರಿತಾಗಿ ಸಂಶೋಧನೆ ಕೈಗೊಳ್ಳಬಹುದು.
- ಕರಾವಳಿಯ ಕಥಾಸಾಹಿತ್ಯದಲ್ಲಿ ಸಾಮಾಜಿಕ ಸಂರಚನೆಯ ಸ್ವರೂಪಗಳ ಬಗ್ಗೆ ಅಧ್ಯಯನ ಮಾಡಬಹುದಾಗಿದೆ.
- ಕರಾವಳಿ ಕಥಾಸಾಹಿತ್ಯದಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು ಬಗ್ಗೆ ಸಂಶೋಧನೆ ಮಾಡಬಹುದಾಗಿದೆ.
- ಕರಾವಳಿ ಲೇಖಕಿಯರ ಕತೆಗಳಲ್ಲಿ ಕಂಡುಬರುವ ಸ್ತ್ರೀಪರ ಚಿಂತನೆಗಳು ಕುರಿತು ಅಧ್ಯಯನ ಮಾಡಬಹುದು
- ಕತೆಗಳು ಸೃಷ್ಟಿಸುವ ಸ್ತ್ರೀ ಚಳುವಳಿ
- ಸ್ವಾತಂತ್ರ್ಯ ಹೋರಾಟದಲ್ಲಿ ಕರಾವಳಿ ಸ್ತ್ರೀ
- ಕನ್ನಡದಲ್ಲಿ ಸಣ್ಣಕತೆ ವಾಸ್ತವಿಕತೆ
- ಆಧುನಿಕ ಕಥಾಸಾಹಿತ್ಯದಲ್ಲಿ ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ
- ಕನ್ನಡ ಕಥಾಸಾಹಿತ್ಯ ಮತ್ತು ಚಲನಚಿತ್ರ
- ಕನ್ನಡ ಸಾಹಿತ್ಯದಲ್ಲಿ ಸಣ್ಣಕತೆಯ ಸ್ಥಾನ

**ಅಡಿಟಿಪ್ಪಣಿ**

೧ ವಿವಿಧ ಲೇಖಕರು: ಕರ್ನಾಟಕ ಸಾಹಿತ್ಯ ಪತ್ರಿಕೆಗಳು – ಇತಿಹಾಸ – ವರ್ತಮಾನ ಪುಟ ೪೨

೨ ವಿವಿಧ ಲೇಖಕರು: ಕರ್ನಾಟಕ ಸಾಹಿತ್ಯ ಪತ್ರಿಕೆಗಳು – ಇತಿಹಾಸ – ವರ್ತಮಾನ ಪುಟ ೪೩

## ಪ್ರಧಾನ ಆಕರಗಳು:

| | | | | |
|---|---|---|---|---|
| ಅನುಪಮಾ ಪ್ರಸಾದ್ | ಚೇತನಾ | ೨೦೦೨ | ಕನ್ನಡ ಸಾಹಿತ್ಯ ಪರಿಷತ್ತು | ಕಾಸರಗೋಡು, ಕೇರಳ |
| ಅನುಪಮಾ ಪ್ರಸಾದ್ | ದೂರತೀರ | ೨೦೧೨ | ಪಲ್ಲವ ಪ್ರಕಾಶನ | ಚನ್ನಪಟ್ಟಣ |
| ಅನುಪಮಾ ಪ್ರಸಾದ್ | ಜೋಗತಿ ಜೋಳಿಗೆ | ೨೦೧೫ | ಅಹರ್ನಿಶಿ ಪ್ರಕಾಶನ | ಶಿವಮೊಗ್ಗ |
| ಅನುಪಮಾ ಪ್ರಸಾದ್ | ಕರವೀರದ ಗಿಡ | ೨೦೧೦ | ಪಲ್ಲವ ಪ್ರಕಾಶನ | ಚನ್ನಪಟ್ಟಣ |
| ಗಂಗಾ ಪಾದೇಕಲ್ | ಪುಲಪೇಡಿ ಮತ್ತು ಇತರ ಕತೆಗಳು | ೧೯೮೭ | ಕನ್ನಡ ಸಂಘ | ಪುತ್ತೂರು |
| ಗಂಗಾ ಪಾದೇಕಲ್ | ಹೆಜ್ಜೆ ಮೂಡದ ಹಾದಿಯಲ್ಲಿ | ೧೯೮೮ | ಕನ್ನಡ ಸಂಘ | ಪುತ್ತೂರು |
| ಗಂಗಾ ಪಾದೇಕಲ್ | ಹೊಸ ಹೆಜ್ಜೆ | ೧೯೯೬ | ಕನ್ನಡ ಸಂಘ | ಪುತ್ತೂರು |
| ಗಂಗಾ ಪಾದೇಕಲ್ | ವಾಸ್ತವ | ೧೯೯೬ | ಮಹಿಳಾ ಸಾಹಿತ್ಯಕಾ | ಹುಬ್ಬಳ್ಳಿ |
| ಗಂಗಾ ಪಾದೇಕಲ್ | ಕ್ಷಮಾಯ ಧರಿತ್ರಿ | ೨೦೦೨ | ಗೀತಾ ಪ್ರಕಾಶನ ಮಂದಿರ | ಶಿವಮೊಗ್ಗ |
| ಗಂಗಾ ಪಾದೇಕಲ್ | ನೆಲೆ ತಪ್ಪಿದ ಹಕ್ಕಿ | ೨೦೦೩ | ವಿಜಯಾ ಸಾಹಿತ್ಯ ಪ್ರಕಾಶನ | ಬೆಂಗಳೂರು |
| ಗಂಗಾ ಪಾದೇಕಲ್ | ಮನ್ನಣೆಯ ದಾಹ | ೨೦೦೫ | ಅಭ್ಯುದಯ ಪ್ರಕಾಶನ | ಕನ್ಯಾನ ಬಂಟ್ವಾಳ |
| ಗಂಗಾ ಪಾದೇಕಲ್ | ಈ ಪ್ರಜಾ ರಾಜ್ಯದೊಳಗೆ | ೨೦೦೬ | ಶ್ರೀಕೃಷ್ಣ ಬುಕ್ ಏಜೆನ್ಸಿ | ಬೆಂಗಳೂರು |

| | | | | |
|---|---|---|---|---|
| ಗಂಗಾ ಪಾದೇಕಲ್ | ಸಂಕ್ರಮಣ | ೨೦೦೬ | ನೇತ್ರಾವತಿ ಪ್ರಕಾಶನ | ಬೆಂಗಳೂರು |
| ಗಂಗಾ ಪಾದೇಕಲ್ | ಚಿನ್ನದ ಸೂಜಿ | ೨೦೦೮ | ಶ್ರೀಕೃಷ್ಣ ಬುಕ್ ಏಜೆನ್ಸಿ | ಬೆಂಗಳೂರು |
| ಮಿತ್ರಾ ವೆಂಕಟ್ರಾಜ್ | ರುಕುಮಾಯಿ | ೧೯೯೦ | ನಂದನ ಪ್ರಕಾಶನ | ಬೆಂಗಳೂರು |
| ಮಿತ್ರಾ ವೆಂಕಟ್ರಾಜ್ | ಹಕ್ಕಿ ಮತ್ತು ಅವಳು | ೧೯೯೭ | ಸಾಹಿತ್ಯ ಪ್ರಕಾಶನ | ಮುಂಬಯಿ |
| ಮಿತ್ರಾ ವೆಂಕಟ್ರಾಜ್ | ಮಾಯಕದ ಸತ್ಯ | ೨೦೧೦ | ಅಂಕಿತ ಪ್ರಕಾಶನ | ಬೆಂಗಳೂರು |
| ವೈದೇಹಿ | ಮರಗಿಡಬಳ್ಳಿ | ೧೯೭೯ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಅಂತರಂಗದ ಪುಟಗಳು | ೧೯೮೪ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಗೋಲ | ೧೯೮೬ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಸಮಾಜ ಶಾಸ್ತ್ರಜ್ಞೆಯ | ೧೯೯೧ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಅಮ್ಮಚ್ಚಿಯೆಂಬ ನೆನಪು | ೨೦೦೦ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಕ್ರೌಂಚ ಪಕ್ಷಿಗಳು | ೨೦೦೫ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಕಥಾವರ್ಷ | ೨೦೦೬ | ಅಕ್ಷರ ಪ್ರಕಾಶನ | ಹೆಗ್ಗೋಡು |
| ವೈದೇಹಿ | ಕತೆ ಕತೆ ಕಾರಣ | ೨೦೧೬ | ಅಕ್ಷರ ಪ್ರಕಾಶನ | ಹೆಗ್ಗೋಡು |
| ಸಾರಾ ಅಬೂಬಕ್ಕರ್ | ಚಪ್ಪಲಿಗಳು | ೧೯೮೯ | ನವಕರ್ನಾಟಕ ಪ್ರಕಾಶನ | ಬೆಂಗಳೂರು |
| ಸಾರಾ ಅಬೂಬಕ್ಕರ್ | ಅರ್ಧ ರಾತ್ರಿಯಲ್ಲಿ ಹುಟ್ಟಿದ ಕೂಸು | ೧೯೯೬ | ಚಂದ್ರಗಿರಿ ಪ್ರಕಾಶನ | ಮಂಗಳೂರು |

| | | | | |
|---|---|---|---|---|
| ಸಾರಾ ಅಬೂಬಕ್ಕರ್ | ಪಯಣ ಮತ್ತು ಇತರ ಕತೆಗಳು | ೧೯೯೨ | ಪುಸ್ತಕ ಪ್ರಕಾಶನ | ಮೈಸೂರು |
| ಸಾರಾ ಅಬೂಬಕ್ಕರ್ | ಖೆಡ್ಡಾ | ೧೯೯೯ | ಚಂದ್ರಗಿರಿ ಪ್ರಕಾಶನ | ಮಂಗಳೂರು |
| ಸಾರಾ ಅಬೂಬಕ್ಕರ್ | ಸುಮಯ್ಯ (ಜಾನಪದ ಕತೆಗಳು) | ೨೦೦೪ | ಚಂದ್ರಗಿರಿ ಪ್ರಕಾಶನ | ಮಂಗಳೂರು |
| ಸಾರಾ ಅಬೂಬಕ್ಕರ್ | ಗಗನಸಖಿ | ೨೦೦೭ | ಚಂದ್ರಗಿರಿ ಪ್ರಕಾಶನ | ಮಂಗಳೂರು |
| ನಾಗವೇಣಿ ಎಚ್. | ನಾಕನೇ ನೀರು | ೧೯೯೭ | ಕನ್ನಡ ಸಂಘ, ಕ್ರೈಸ್ಟ್ ಕಾಲೇಜು | ಬೆಂಗಳೂರು. |
| ನಾಗವೇಣಿ ಹೆಚ್ | ಮೀಯುವ ಆಟ, | ೨೦೦೫ | ಲೋಹಿಯಾ ಪ್ರಕಾಶನ, | ಬಳ್ಳಾರಿ. |

**ಪರಾಮರ್ಶನ ಗ್ರಂಥಗಳು:**


೧. ಅನಂತಮೂರ್ತಿ ಯು.ಆರ್.; **'ಪೂರ್ವಾಪರ'** ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ

೨. ಅಮರೇಶ ನುಡುಗೋಣಿ (ಸಂ); **'ಕನ್ನಡ ಸಂಶೋಧನೆಯ ವೈಧಾನಿಕತೆಗಳು'** ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ; ಹಂಪಿ, ೨೦೦೮.

೩. ಅಶೋಕ ಟಿ.ಪಿ.; **ವೈದೇಹಿ ಕಥನ**; ಅಕ್ಷರ ಕಥನ ಹೆಗ್ಗೋಡು, ೨೦೧೩

೪. ಅಶೋಕ ಟಿ.ಪಿ. (ಸಂ) ; **ವೈದೇಹಿ ವಾಚಿಕೆ**; ನುಡಿಪುಸ್ತಕ ಬೆಂಗಳೂರು, ೨೦೦೯

೫. ಅಶೋಕ ಟಿ.ಪಿ. (ಸಂ) : **ಸಾಹಿತ್ಯ ಸಂದರ್ಭ**; ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೧

೬. ಅಶ್ವಿನಿ ಧೋಂಗಡೆ : ವಿಠಲರಾಮ್ ಗಾಯಕ್ವಾಡ್ (ಅನು): **ಸ್ತ್ರೀವಾದಿ ವಿಮರ್ಶೆ: ಸ್ವರೂಪ ಮತ್ತು ಪರಿಕಲ್ಪನೆಗಳು**, ೨೦೦೧.

೭. ಆಮೂರ ಜಿ.ಎಸ್. **'ಅವಳ ಕಥೆಗಳು'**, ಕಥಾಮಾಲಿಕೆ, ಬುಕ್ಸ್ ಪ್ರೈವೇಟ್ ಲಿಮಿಟೆಡ್, ಬನಶಂಕರಿ, ೨ನೇ ಹಂತ, ಬೆಂಗಳೂರು.

೮. ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು; ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ; ಹಂಪಿ ೨೦೦೭

೯. ಇಂದಿರಾ ಆರ್. (ಡಾ): **ಮಹಿಳೆ–ಸಮಾಜ ಮತ್ತು ಸಂಸ್ಕೃತಿ**; ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೦. ಇಂದಿರಾ ಆರ್. (ಡಾ) : **ಸ್ತ್ರೀವಾದಿ ದಿಕ್ಸೂಚಿ**; ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೫

೧೧. ಉಷಾ ಎಂ.(ಡಾ): **ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ**; ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೧

೧೨. ಉಷಾ ಎಂ. (ಡಾ.) (ಸಂ): **ಆಧುನಿಕ ಮಹಿಳಾ ಸಾಹಿತ್ಯ**, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೭

೧೩. ಉಷಾ ಎಂ. (ಡಾ.) (ಸಂ): **ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು ಪ್ರಸಾರಾಂಗ** ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೭

೧೪. ಉಷಾ ಸ.; ವೈದೇಹಿ ; ನವಕರ್ನಾಟಕ ಪ್ರಕಾಶನ ಬೆಂಗಳೂರು, ೨೦೧೨

೧೫. ಕಿಶೋರಿ ನಾಯಕ್ (ಡಾ): ಸ್ತ್ರೀವಾದದ ನೆಲೆಗಳು ಮತ್ತು ನಿಲುವುಗಳು: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ ಮತ್ತು ಸಿರಿ ಪ್ರಕಾಶನ, ಹೊಸಪೇಟೆ, ೧೯೯೯

೧೩. ಕಿಶೋರಿ ನಾಯಕ್(ಡಾ.): **ಲಿಂಗತ್ವ ಸಮನ್ವಯ;** ಮಹಿಳಾ ಅಧ್ಯಯನ ಕೇಂದ್ರ, ಮಂಗಳೂರು, ವಿ.ವಿ.. ೨೦೦೭

೧೭. ಕೀರ್ತಿನಾಥ ಕುರ್ತಕೋಟಿ: **ಯುಗಧರ್ಮ ಹಾಗೂ ಸಾಹಿತ್ಯದರ್ಶನ;** ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ, ೨೦೦೯

೧೮. ಕೀರ್ತಿನಾಥ ಕುರ್ತಕೋಟಿ: **ಯುಗಧರ್ಮ ಹಾಗೂ ಸಾಹಿತ್ಯದರ್ಶನ;** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩

೧೯. ಕೇಶವ ಶರ್ಮ ಕೆ. : **ರಚನೆ –ನಿರಚನೆ;** ಅಭಿನವ ಪ್ರಕಾಶನ, ಬೆಂಗಳೂರು, ೨೦೦೦

೨೦. ಕೋದಂಡರಾಮ ಎನ್.ಕೆ. ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ ಗಾಯತ್ರಿಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೯

೨೧. ಗಾಯತ್ರಿ ಎನ್. : ಮಹಿಳಾ ಚಳುವಳಿ ಮಜಲುಗಳು; ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭

೨೨. ಗಾಯತ್ರಿ ನಾವಡ (ಡಾ.) : **ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು; ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ, ೧೯೯೯**

೨೩. ಗಾಯತ್ರಿ ನಾವಡ (ಡಾ.) : **ಮಹಿಳಾ ಸಂಕಥನ;** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೨೪. ಗೀತಾಪ್ರಸಾದ್: ಆಧುನಿಕ ಮಹಿಳಾ ಅಭಿವ್ಯಕ್ತಿ; ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೯

೨೫. ಗಿರಡ್ಡಿ ಗೋವಿಂದರಾಜ : **ಸಮಗ್ರ ವಿಮರ್ಶೆ; ಸಪ್ನ ಬುಕ್ ಹೌಸ್ ಬೆಂಗಳೂರು, ೨೦೦೧**

೨೬. ಚಂದ್ರಮತಿ ಸೋಂದಾ ಸ್ತ್ರೀವಾದಿ ವಿಮರ್ಶೆ, ಅಭಿರುಚಿ ಪ್ರಕಾಶನ ಮೈಸೂರು, ೨೦೦೪

೨೭. ಜನಾರ್ಧನ ಭಟ್ ಬಿ. (ಸಂ.) : **ದಕ್ಷಿಣ ಕನ್ನಡದ ಶತಮಾನದ ಕಥೆಗಳು;** ಕರ್ನಾಟಕ ಸಂಘ, ಪುತ್ತೂರು, ೨೦೦೩;

೨೮. ಜನಾರ್ಧನ ಭಟ್ ಬಿ. : **ಸಾಹಿತ್ಯ ಸಮೀಕ್ಷೆ:** ಸುಮಂತ ಪ್ರಕಾಶನ, ಬ್ರಹ್ಮಾವರ, ೨೦೦೩

೨೯. ಜಾನಕಿ ಎಂ. ಬ್ರಹ್ಮಾವರ (ಸಂ); **'ಬೆಳ್ಳಿಬೆಡಗು';** ಕರಾವಳಿ ಲೇಖಕಿಯರ – ವಾಚಕಿಯರ ಸಂಘ (ರಿ) ಉರ್ವಸ್ಟೋರ್, ಮಂಗಳೂರು, ೨೦೧೫

೩೦. ಜಯರಾಜ್ ಎಂ.ಎಸ್. ; ಹತ್ತೊಂಬತ್ತನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕನ್ನಡ ಸಾಹಿತ್ಯ ಚರಿತ್ರೆ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ೧೯೮೩

೩೧. ತೇಜಸ್ವಿನಿ ನಿರಂಜನ; ಸೀಮಂತಿನಿ ನಿರಂಜನ (ಸಂ) ಸ್ತ್ರೀವಾದಿ ಸಾಹಿತ್ಯಾ ವಿಮರ್ಶೆ; ಕನ್ನಡ ಸಂಘ ಕ್ರೈಸ್ಟ್ ಕಾಲೇಜ್ ಬೆಂಗಳೂರು, ೧೯೯೪

೩೨. ಧರಣೀ ದೇವಿ ಮಾಲಗತ್ತಿ; ಸ್ತ್ರೀವಾದ ಮತ್ತು ಭಾರತೀಯತೆ; ಚೇತನಾ ಬುಕ್ ಹೌಸ್, ಮೈಸೂರು, ೧೯೯೮

೩೩. ದೇವಿಕಾ ನಾಗೇಶ್ : **ಸಾರಾ ಅಬೂಬಕ್ಕರ್:** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೮

೩೪. ನಾಗಭೂಷಣ ಸ್ವಾಮಿ ಓ.ಎಲ್ : **ವಿಮರ್ಶೆಯ ಪರಿಭಾಷೆ;** ಅಂಕಿತ ಪುಸ್ತಕ, ಬೆಂಗಳೂರು, ೧೯೯೮

೩೫. ನಾಗರಾಜ ಡಿ.ಆರ್.; ಸಾಹಿತ್ಯ ಕಥನ; ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೧೯೯೬

೩೬. ನಾಗರಾಜ ಡಿ.ಆರ್.; **'ಅಮೃತ ಮತ್ತು ಗರುಡ'**; ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ೧೯೯೦

೩೭. ನಾಯಕ್ ಜಿ.ಎಚ್.; **ಸಮಕಾಲೀನ;** ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೧೯೭೩

೩೮. ನಾಯಕ್ ಜಿ.ಎಚ್.; ನಿಜದನಿ; ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೧೯೮೮

೩೯. ನಾಗರಾಜು ಟಿ; **ಸಾಮಾಜಿಕ ಚಳುವಳಿಗಳು;** ಚೇತನಾ ಬುಕ್ ಹೌಸ್, ಮೈಸೂರು, ೧೯೯೯

೪೦. ನೇಮಿಚಂದ್ರ ; **ಮಹಿಳಾ ಅಧ್ಯಯನ;** ಅಂಕಿತ ಪುಸ್ತಕ, ಬೆಂಗಳೂರು, ೨೦೦೧

೪೧. ನೇಮಿಚಂದ್ರ ; **ಮಹಿಳಾ ಅಧ್ಯಯನ;** ಅಂಕಿತ ಪುಸ್ತಕ, ಬೆಂಗಳೂರು, ೨೦೦೩

೪೨. ನಿಕೇತನಾ (ಡಾ), **ಸ್ತ್ರೀದೃಷ್ಟಿ:** ರಾಶಿ ಪ್ರಕಾಶನ, ಉಡುಪಿ, ೨೦೦೫

೪೩. ನಾಗಭೂಷಣ ಸ್ವಾಮಿ ಓ.ಎಲ್ : **ವಿಮರ್ಶೆಯ ಪರಿಭಾಷೆ;** ಅಂಕಿತ ಪುಸ್ತಕ, ಬೆಂಗಳೂರು, ೧೯೯೮

೪೪. ಪುರುಷೋತ್ತಮ ಬಿಳಿಮಲೆ : ಬಂಡಾಯ ದಲಿತ ಸಾಹಿತ್ಯ : ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು; ೧೯೯೦

೪೫. ಪ್ರಭಾವತಿ ಎಸ್.ವಿ. (ಡಾ.); **ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು;** ಬೆಂಗಳೂರು, ೨೦೦೨

೪೬. ಪ್ರೀತಿ ಶುಭಚಂದ್ರ : ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು ಪ್ರಸರಾಂಗ ; ಕನ್ನಡ ವಿಶ್ವವಿದ್ಯಾಲಯ ಹಂಪಿ; ೨೦೦೨

೪೭. ಪ್ರೀತಿ ಶುಭಚಂದ್ರ : ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು ೨೦೦೦

೪೮. ಪ್ರಭು ಬಿ. ಎಸ್. ಬಂಡಾರ ಕತೆಗಳಲ್ಲಿ ಗ್ರಾಮೀಣ ವಾಸ್ತವತೆ, ರೂಪ ಪ್ರಕಾಶನ, ಮೈಸೂರು, ೨೦೧೧

೪೯. ಪ್ರಭುಶಂಕರ : ಸಾಹಿತ್ಯ ಮತ್ತು ಆಧುನಿಕತೆ : ಪ್ರಸರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು, ೧೯೯೩

೫೦. ಪ್ರಹ್ಲಾದ ಅಗಸನಕಟ್ಟೆ, ದಲಿತ ಬಂಡಾಯ ಕಾವ್ಯ ಮತ್ತು ವಿಚಾರವಾದಗಳು

೫೧. ಬರಗೂರು ರಾಮಚಂದ್ರಪ್ಪ (ಪ್ರಸಂ): **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ**; ಕರ್ನಾಟಕ ಸಾಹಿತ್ಯ ಆಕಾಡೆಮಿ; ಬೆಂಗಳೂರು ೧೯೯೨

೫೨. ಬರಗೂರು ರಾಮಚಂದ್ರಪ್ಪ **ಸಾಹಿತ್ಯ ಮತ್ತು ರಾಜಕಾರಣ**; ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು; ೧೯೯೮

೫೩. ಬರಗೂರು ರಾಮಚಂದ್ರಪ್ಪ (ಪ್ರಸಂ): **ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಪ್ರಾಧಿಕಾರ ಬೆಂಗಳೂರು, ೨೦೦೬

೫೪. ಮಲ್ಲಿಕಾ ಘಂಟಿ; ಕನ್ನಡದಲ್ಲಿ ಮಹಿಳಾ ಕಥಾ ಸಾಹಿತ್ಯ ಯುವಲೋಕ ಪ್ರಕಾಶನ ಧಾರವಾಡ; ೧೯೯೪

೫೫. ಮನೋರಮಾ ಎಂ. ಭಟ್ (ಸಂ); **ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಲೇಖಕಿಯರು**; ಕರಾವಳಿ ಲೇಖಕಿಯರ ವಾಚಕಿಯರ ಸಂಘ, ದ.ಕ. ಹಾಗೂ ಕಾಸರಗೋಡು, ೧೯೯೬

೫೬. ಮನು ಚಕ್ರವರ್ತಿ ಎನ್. : **ಭಾರತೀಯ ಸ್ತ್ರೀವಾದ**: ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೩

೫೭. ಮಾಲತಿ ಎ.ಪಿ.; **ಸಂಜೆ ಬಿಸಿಲು**; ಅತ್ರಿಬುಕ್ ಸೆಂಟರ್, ಮಂಗಳೂರು, ೨೦೦೪

೫೮. ಮಿತ್ರಾ ವೆಂಕಟ್ರಾಜ್; ಗಿರಿಜಾ ಶಾಸ್ತ್ರಿ; ತುಳಸೀ ವೇಣುಗೋಪಾಲ್; (ಸಂ): **ಕತೆ ಹೇಳೇ ಗೆಳತಿ**; 'ಸೃಜನಾ' ಮುಂಬಯಿ, ೨೦೦೪

೫೯. ಮೊಳೆಯಾರ ವಿ.ಬಿ. (ಸಂ): **ಕಾರಂತ ಚಿಂತನ**; ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ೧೯೯೮

೩೦. ಮುಗಳಿ ರಂ. ಶ್ರೀ : **ಕನ್ನಡ ಸಾಹಿತ್ಯ ಚರಿತ್ರೆ;** ಗೀತಾ ಬುಕ್ ಹೌಸ್, ಬೆಂಗಳೂರು, ೨೦೦೭

೩೧. ಮುಕ್ತಾಯಕ ಎಚ್.ಎಸ್.: **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ;** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭

೩೨. ರಘುನಾಥನ್ ಪರಿಪ್ರೇಕ್ಷ್ಯ ಕಣ್ವ ಪ್ರಕಾಶನ ಬೆಂಗಳೂರು, ೨೦೧೨

೩೩. ರಹಮತ್ ತರೀಕೆರೆ ; **ಪ್ರತಿ ಸಂಸ್ಕೃತಿ;** ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೩

೩೪. ರಹಮತ್ ತರೀಕೆರೆ ; **ಮರದೊಳಗಣ ಕಿಚ್ಚು;** ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೧೯೯೬

೩೫. ರಾಮಚಂದ್ರನ್ ಸಿ.ಎನ್; ವಸಾಹತೋತ್ತರ ಚಿಂತನೆ; ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೨೦೦೨

೩೬. ರಾಮಚಂದ್ರನ್ ಸಿ.ಎನ್ ; ಸಾಹಿತ್ಯ ವಿಮರ್ಶೆ; ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, ೧೯೯೭

೩೭. ರೂಪ; ಹಾಸನ ಮಹಿಳೆ ಮತ್ತು ಆಧುನಿಕತೆಯ ಸವಾಲುಗಳು; ಪ್ರಸರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೧೦

೩೮. ರೋಹಿಣಿ ಬಿ.ಎಂ. ಸ್ತ್ರೀ ಸಂಸ್ಕೃತಿ ಶಿಕ್ಷಣ; ಹೇಮಾಂಶು ಪ್ರಕಾಶನ ಮಂಗಳೂರು, ೨೦೦೦

೩೯. ರೋಹಿಣಿ ಬಿ.ಎಂ. ಸ್ತ್ರೀ – ಭಿನ್ನ ಮುಖಗಳು; ೨೦೦೫ ; ಕರಾವಳಿ ಲೇಖಕಿಯರ – ವಾಚಕಿಯರ ಸಂಘ (ರಿ) ದ.ಕ.

೪೦. ವಿಜಯಾದಬ್ಬೆ: **ನಾರಿ: ದಾರಿ–ದಿಗಂತ:** ರಚನಾ ಪ್ರಕಾಶನ, ಮೈಸೂರು, ೧೯೯೭

೪೧. ವಿಜಯಾದಬ್ಬೆ: ನೆನಕೆ ಸಾರ ಸರಸ್ವತಿ: ಮಹಿಳಾ ಸಾಹಿತ್ಯಕ ಹುಬ್ಬಳ್ಳಿ.

೪೨. ವಿಜಯಾದಬ್ಬೆ (ಸಂ): **ಶ್ಯಾಮಲಾ ಸಂಚಯ ಚರಿತ್ರೆಯಲ್ಲ ನೆನಪಲ್ಲ** ಹುಬ್ಬಳ್ಳಿ.

೪೩. ವಿಜಯಾದಬ್ಬೆ (ಸಂ): **ಹಿತೈಷಿಣಿಯ ಹೆಜ್ಜೆಗಳು;** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು; ೧೯೯೨

೪೪. ವಿಜಯಲಕ್ಷ್ಮಿ ಕೆ.ಎಂ. ಹೊಸಗನ್ನಡದ ೭೫ ಲೇಖಕಿಯರು; ಸುಮುಖ ಬುಕ್ ಹೌಸ್ ಬೆಂಗಳೂರು, ೨೦೦೮

೪೫. ವಿವಿಧ ಲೇಖಕಿಯರು; ಲೇಖಕಿಯರ ಸಣ್ಣಕತೆಗಳು; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು; ೧೯೮೯

೭೬. ವಿವಿಧ ಲೇಖಕಿಯರು; ಲೇಖನ ಸೌರಭ; ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು; ೧೯೮೯

೭೭. ವಿವಿಧ ಲೇಖಕರು; ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಮತ್ತು ಅಧೀನ ಸಂಸ್ಕೃತಿ; ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು, ೧೯೯೩

೭೮. ಶಶಿಕಲಾ ಎಸ್.ಡಿ. (ಸಂ) ವಿಜಯನ್ವೇಷಣ ಡಾ। ವಿಜಯದಬ್ಬೆ ಅಭಿನಂದನ ಗ್ರಂಥ ಸಮಿತಿ, ಮೈಸೂರು, ೨೦೦೪

೭೯. ಶೈಲಾ ಯು. (ಡಾ.) **ಮಹಿಳೆ ನೆಲೆ–ಬೆಲೆ;** ಶ್ರೀ ಬೆನಕ ಪ್ರಕಾಶನ, ಮಂಗಳ ಗಂಗೋತ್ರಿ, ಮಂಗಳೂರು, ೨೦೧೦

೮೦. ಶೈಲಾ ಯು. **ಕೈಗನ್ನಡಿ;** ಶ್ರೀ ಬೆನಕ ಪ್ರಕಾಶನ, ಕೊಣಾಜೆ ಮಂಗಳೂರು, ೨೦೧೨

೮೧. ಶೈಲಜಾ ಹಿರೇಮಟ್, ಸ್ತ್ರೀ ಕಥನ

೮೨. ಶೇಷಗಿರಿ ರಾವ್ ಎಲ್.ಎಸ್. : **ಹೊಸಗನ್ನಡ ಸಾಹಿತ್ಯ ಚರಿತ್ರೆ;** ಅಂಕಿತ ಪುಸ್ತಕ, ಬೆಂಗಳೂರು, ೧೯೯೯

೮೩. ಶೇಷಗಿರಿ ರಾವ್ ಎಲ್.ಎಸ್ ಮತ್ತು ಇತರರು (ಸಂ). : ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ : ಉದಯಬಾನು ಕಲಾಸಂಘ, ಬೆಂಗಳೂರು, ೧೯೯೩

೮೪. ಶೇಷಗಿರಿ ರಾವ್ ಎಲ್.ಎಸ್ ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೬

೮೫. ಶ್ರೀನಿವಾಸ ಮೂರ್ತಿ ಎಂ.ಆರ್. : ಸಾಹಿತ್ಯಾವಲೋಕನ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು : ೧೯೭೮

೮೬. ಶ್ರೀಮತಿ ಎಚ್ ಎಸ್ (ಅನು) : ಆಧುನಿಕ ಭಾರತದಲ್ಲಿ ಮಹಿಳೆ, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

೮೭. ಶ್ರೀಮತಿ ಎಚ್. ಎಸ್. (ಡಾ.) (ಸಂ); **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ;** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೮೮. ಶ್ರೀಮತಿ ಎಚ್. ಎಸ್.: **ಚಹರೆ;** ಇಳಾ ಪ್ರಕಾಶನ, ಬೆಂಗಳೂರು, ೨೦೦೧

೮೯. ಶ್ರೀಮತಿ ಎಚ್. ಎಸ್. (ಡಾ) (ಆಯ್ದ ಅನುವಾದ); **ಸ್ತ್ರೀವಾದಿ ಭಾಷಾ ಶಾಸ್ತ್ರ ಪ್ರವೇಶಿತ,** ಪ್ರಸರಾಂಗ, ಕನ್ನಡ ವಿ. ವಿ. ಹಂಪಿ, ೨೦೦೯

೯೦. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ : ಉದಯಭಾನು ಕಲಾಸಂಘ ಬೆಂಗಳೂರು; ೧೯೯೩

೯೧. ಸತ್ಯನಾರಾಯಣ ಮಲ್ಲಿಪಟ್ಟಣ ಡಾ; ಕನ್ನಡ ಸಣ್ಣಕಥೆ ಹೆಜ್ಜೆಹಾದಿ; ಸಂಕಲನ ಪ್ರಕಾಶನ ಮೈಸೂರು; ೧೯೮೫

೯೨. ಸಬಿಹಾ (ಸಂ) ; ದಶಕದ ಮಹಿಳಾ ಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು; ಚಿಂತನ ಪುಸ್ತಕ ಬೆಂಗಳೂರು, ೨೦೧೨

೯೩. ಸಬಿಹಾ ಭೂಮಿಗೌಡ (ಡಾ.) (ಸಂ): **ಚಂದ್ರಗಿರಿ (ಸಾರಾ ಅಭಿನಂದನಾ ಗ್ರಂಥ)**; ಸಿರಿವರ ಪ್ರಕಾಶನ, ಬೆಂಗಳೂರು, ೨೦೦೯

೯೪. ಸಬಿಹಾ ಭೂಮಿಗೌಡ (ಡಾ.) : ಬಗೆ; ಲೋಹಿಯಾ ಪ್ರಕಾಶನ, ಬೆಂಗಳೂರು, ೨೦೦೧

೯೫. ಸಬಿಹಾ ಭೂಮಿಗೌಡ (ಡಾ.) (ಸಂ): **ಕನ್ನಡ ಸಾಹಿತ್ಯ ಮೀಮಾಂಸೆ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೭

೯೬. ಸಬಿಹಾ ಭೂಮಿಗೌಡ (ಡಾ.) : **ದಕ್ಷಿಣ ಕನ್ನಡ ಜಿಲ್ಲೆಯ ಸಣ್ಣಕಥೆಗಳ ಹುಟ್ಟು ಮತ್ತು ಬೆಳವಣಿಗೆ;** (ಪಿ.ಎಚ್.ಡಿ. ಮಹಾಪ್ರಬಂಧ) ಮಂಗಳೂರು ವಿ.ವಿ., ೧೯೯೨

೯೭. ಸಬಿಹಾ ಭೂಮಿಗೌಡ (ಡಾ.) (ಸಂ): **ಮಹಿಳಾ ಸಾಹಿತ್ಯ**; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬

೯೮. ಸದಾಶಿವ ಕೆ. (ಡಾ.): **ವಿಶ್ವ ಇತಿಹಾಸ**; ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ೨೦೦೯

೯೯. ಸಬಿತಾ ಬನ್ನಾಡಿ : **ಆಲಯವು ಬಯಲಾಗಿ**; ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೧೦

೧೦೦. ಸಾರಾ ಅಬೂಬಕ್ಕರ್ (ಡಾ) : **ಅನಾವರಣ**; ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೦೧

೧೦೧. ಸಾರಾ ಅಬೂಬಕ್ಕರ್ (ಡಾ) : **ಹೊತ್ತು ಕಂತುವ ಮುನ್ನ**; ಚಂದ್ರಗಿರಿ ಪ್ರಕಾಶನ, ಮಂಗಳೂರು, ೨೦೧೦

೧೦೨. ಸರೋಜ ಆಚಾರ್ಯ: ವ್ಯವಸ್ಥೆ; ರಮಣಶ್ರೀ ಪ್ರಕಾಶನ, ಬೆಂಗಳೂರು, ೧೯೯೯

೧೦೩. ಸರೋಜ ಆಚಾರ್ಯ: **ಅಲ್ಲಿದೆ ನಮ್ಮನೆ**; ಸುಮಂತ ಪ್ರಕಾಶನ, ಬ್ರಹ್ಮಾವರ, ೨೦೦೨

೧೦೪. ಸುಮಿತ್ರಾ ಬಾಯಿ ಬಿ.ಎನ್. (ಸಂ): ಕಲ್ಯಾಣ ಸರಸ್ವತಿ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು; ೧೯೯೨

೧೦೫. ಸುಮಿತ್ರಾ ಬಾಯಿ ಬಿ.ಎನ್. (ಡಾ): **ವಿಚಯ;** ಇಳಾ ಪ್ರಿಂಟರ್ಸ್, ಬೆಂಗಳೂರು, ೧೯೯೫

೧೦೬. ಸುಮಿತ್ರಾ ಬಾಯಿ ಬಿ.ಎನ್. (ಡಾ): **ಸ್ತ್ರೀವಾದ;** ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೯

೧೦೭. ಸುಮಿತ್ರಾ ಬಾಯಿ ಬಿ.ಎನ್. ಹಾಗೂ ಎನ್ ಗಾಯತ್ರಿ (ಸಂ) – ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು ೧೯೯೫

೧೦೮. ಸುಲತಾ ವಿದ್ಯಾಧರ್ ; **ಶ್ರೀಮುಡಿ;** ಶ್ರೀಚಕ್ರ ಪ್ರಕಾಶನ, ಮೂಡುಬಿದಿರೆ, ದ.ಕ., ೨೦೦೯

೧೦೯. ಸುರೇಖಾ ಕೆ. (ಡಾ.) : **ವೈದೇಹಿಯವರ ಸಾಹಿತ್ಯ ಒಂದು ಅಧ್ಯಯನ;** ಪಾಂಚಜನ್ಯ ಪಬ್ಲಿಕೇಶನ್ಸ್ ಬೆಂಗಳೂರು, ೨೦೦೬

೧೧೦. ಸುಮಿತ್ರಬಾಯಿ; ಸ್ತ್ರೀವಾದ : ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು, ೧೯೯೯

೧೧೧. ಸಿಮೋನ್ ದ ಬೋವಾ – ದಿ ಸೆಕೆಂಡ್ ಸೆಕ್ಸ್ : ಒಂದು ಕನ್ನಡ ಓದು, ಅಧ್ಯಯನ ಮಂಡಲ ಬೆಂಗಳೂರು : ೨೦೦೭

೧೧೨. ಎಚ್. ಬಿ. ಎಲ್. ರಾವ್ (ಸಂ) ಮಿತ್ರಾವಳಿ ಕನ್ನಡ ಸಾಹಿತ್ಯ ಪರಿಷತ್ತು, ಮುಂಬೈ, ೨೦೧೫

೧೧೩. ಹಳ್ಳಿಕೇರಿ ಎಫ್.ಟಿ. ರವೀಂದ್ರನಾಥ ಕೆ.: **ದಶಕದ ಕನ್ನಡ ಸಾಹಿತ್ಯ;** ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೨

೧೧೪. ಹೇಮಲತಾ ಎಚ್.ಎಂ. (ಡಾ.) : **ಮಹಿಳಾ ಅಧ್ಯಯನ – ಅರ್ಥ, ಹುಟ್ಟು, ಬೆಳವಣಿಗೆ, ಪರಿಕಲ್ಪನೆ, ಸಿದ್ಧಾಂತಗಳು;** ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪

**ಸಂಚಿಕೆಗಳು / ವರ್ತಮಾನ ಪತ್ರಿಕೆಗಳು**

೧. ಉಷಾ ಎಂ. ಕನ್ನಡ ಮೊದಲ ವಸ್ತು ನಿಷ್ಠೆ ವಿಮರ್ಶೆಯ ಸುತ್ತ ಸಂಕ್ರಮನ (೨೨೨) ಸೆಪ್ಟೆಂಬರ್ – ಅಕ್ಟೋಬರ್ ಸಂಚಿಕೆ, ಬೆಂಗಳೂರು ೨೦೦೦

೨. ಬಸವರಾಜ ಸಬರದ : ಚಂದ್ರಶೇಖರ ಪಾಟೀಲ; **ಸಂಕ್ರಮಣ;** ೨೨೨, ಪು.೬೨, ಸೆಪ್ಟೆಂಬರ್, ಅಕ್ಟೋಬರ್ ೨೦೦೦.

೩. ಯಶೋವರ್ಮ ಬಿ. (ಡಾ.)(ಪ್ರಸಂ.): ಎಸ್.ಡಿ. ಶೆಟ್ಟಿ (ಡಾ.) (ಸಂ)–**ಶೋಧ:** ೨೦೧೦; ಜನವರಿ; ಹಾಮಾನಾ ಸಂಶೋಧನಾ ಕೇಂದ್ರ, ಉಜಿರೆ.

೪. ರಂಗಣ್ಣ ಎಸ್.ವಿ. – ಸಣ್ಣಕತೆಯ ಸ್ವರೂಪ ಮತ್ತು ಸ್ವಾರಸ್ಯ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ (೨೦–೨೩)

೫. ವಿಜಯಲಕ್ಷ್ಮಿ ಕೆ. ಎಂ. : **ಪ್ರಜಾವಾಣಿ ಸಾಪ್ತಾಹಿಕ** : ಭಾನುವಾರ; ಡಿಸೆಂಬರ್ ೨, ೨೦೦೧.

೬. ವಿಜಯ ಕರ್ನಾಟಕ, ಮಾರ್ಚ್ ೧೦, ೨೦೦೩.

೭. ವಿಜಯಕರ್ನಾಟಕ ಸಪ್ಟೆಂಬರ್, ೨೧, ೨೦೦೮